# ಕಾಂಗ್ರೆಸಿನ ಕಥೆ

ಲೇಖಕ

**ದತ್ತಾತ್ರೇಯ ಪರಶುರಾಮ ಕರಮರಕರ**

ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮಿಟಿ

ಧಾರವಾಡ.

೧೯೩೫ ]                [ ~~೧ ರೂಪಾಯಿ~~

ಮುದ್ರಕರು:—

ಬಳವಂತ ನಾರಾಯಣ ಬಾಗಲವಾಡಿ

ಮೋಹನ ಮುದ್ರಣಾಲಯ

ಧಾರವಾಡ

ನಾಡಿನ ಏಳ್ಗೆಗಾಗಿ ಹಂಬಲಿಸಿದವರ ಅಡಿಗಳಿಗೆ

ನಮ್ರತೆಯಿಂದ ಅರ್ಪಿತವಾದುದು.

ಪ್ರಕಾಶಕರು:—

ರಾ. ಶ್ರೀ. ಹುಕ್ಕೇರಿಕರ

ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮಿಟಿ

ಧಾರವಾಡ

# ಮುನ್ನುಡಿ

ಕಾಂಗ್ರೆಸ ಸುವರ್ಣಮಹೋತ್ಸವದ ಸಮಯಕ್ಕೆ ಸಿದ್ಧವಾಗುವ ಹಾಗೆ ಈ ಚಿಕ್ಕ ಇತಿಹಾಸವನ್ನು ಬರೆಯಲು ನೊವೆಂಬರ ತಿಂಗಳಲ್ಲಿ ಪ್ರಾರಂಭಿಸಿದೆನು. ಡಾ. ಪಟ್ಟಭಿ ಸೀತಾರಾಮಯ್ಯನವರ ಇಂಗ್ಲಿಷ ಗ್ರಂಥದ ಸಮಗ್ರ ಭಾಷಾಂತರವನ್ನು ಪ್ರಸಿದ್ಧಿಸುವದು ಅನೇಕ ಕಾರಣಗಳಿಂದ ಅಸಾಧ್ಯವಾದುದರಿಂದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮಿಟಿಯವರು ನಾನು ಬರೆಯಲುಪಕ್ರಮಿಸಿದ ಈ ಚಿಕ್ಕ ಇತಿಹಾಸವನ್ನೇ ತಮ್ಮ ಪರವಾಗಿ ಪ್ರಕಟಿಸುವದಾಗಿ ಗೊತ್ತುಮಾಡಿದ್ದಕ್ಕಾಗಿ ನಾನು ಅವರಿಗೆ ತುಂಬಾ ಋಣಿಯಾಗಿರುವೆನು. ನನಗೆ ಈ ಪುಸ್ತಕವನ್ನು ಬರೆಯುವ ಕೆಲಸದಲ್ಲಿ ಅನುಕೂಲವಾಗಲೆಂದು ಡಾ. ಪಟ್ಟಭಿಯವರ ಗ್ರಂಥದ ಹಸ್ತಲಿಖಿತವನ್ನೂ ಒದಗಿಸಿಕೊಟ್ಟರು. ಅದರ ಉಪಯೋಗವೂ ನನಗೆ ಸಾಕಷ್ಟು ಆಯಿತೆಂದು ಇಲ್ಲಿ ಹೇಳುವದು ಉಚಿತವಿದೆ.

ಕಾಂಗ್ರೆಸಿನ ಇತಿಹಾಸವನ್ನು ಸ್ವಲ್ಪದರಲ್ಲಿಯಾದರೂ ಸಮರ್ಪಕವಾಗಿ ಓದುಗರ ಮುಂದಿಡುವದೆ ಈ ಚಿಕ್ಕ ಹೊತ್ತಿಗೆಯ ಗುರಿಯು. ಕಾಲಕಾಲಕ್ಕೆ ಕಾಂಗ್ರೆಸಿನ ಕಾರ್ಯಕ್ರಮವು ಹೇಗೆ ಬೆಳೆಯುತ್ತ ನಡೆದಿದೆಯೆಂಬುದನ್ನು ಆಯಾಕಾಲದವರ ನುಡಿಯಲ್ಲಿಯೆ ತೋರಿಸಲು ಯತ್ನಿಸಿರುವೆನು. ಈ ಪುಸ್ತಕವನ್ನೋದಿದವರಿಗೆ ಕಾಂಗ್ರೆಸಿನ ಕಾರ್ಯದ ಹಾಗೂ ಕಳೆದ ೫೦ ವರುಷಗಳಲ್ಲಿಯ ಹಿಂದೀ ರಾಷ್ಟ್ರೀಯ ಜೀವನದ ಸ್ಪಷ್ಟ ಕಲ್ಪನೆ ಬರಲು ಅನುಕೂಲವಾಗುವದೆಂದು ನಂಬಿರುವೆನು. ಸಾಧ್ಯವಿದ್ದ ಮಟ್ಟಿಗೆ ಎಲ್ಲ ಸಂಗತಿಗಳನ್ನೂ ಮೂಲ ಆಧಾರಗ್ರಂಥಗಳ ಸಹಾಯದಿಂದಲೆ ಸಂಗ್ರಹಿಸಿರುವೆನು.

ಈ ಪುಸ್ತಕದಲ್ಲಿ ಹೇಳಿದ ಸಂಗತಿಗಳಲ್ಲಿ ಯಾವ ತಪ್ಪುಗಳಿಲ್ಲವೆಂದು ಹೇಳಬಹುದಾದರೂ ಹೇಳುವ ರೀತಿಯಲ್ಲಿಯೂ ಬರವಣಿಗೆಯಲ್ಲಿಯೂ ಅನೇಕ ತಪ್ಪುಗಳಿರುವವೆಂಬುದನ್ನು ನಾನು ಬಲ್ಲೆನು. ಅವುಗಳನ್ನು ಸರಿಪಡಿಸಿಕೊಂಡು ಓದಲು ಓದುಗರನ್ನು ಈ ಮೂಲಕ ಬಿನ್ನವಿಸಬಯಸುವೆನು.

ಈ ಪುಸ್ತಕದ ಸಿದ್ಧತೆಯಲ್ಲಿ ಸಲಹೆಗಳಿಂದ ನೆರವಾದ ಶ್ರೀ. ಹುಕ್ಕೇರಿಕರ ರಾಮರಾಯರಿಗೂ ಜಠಾರ ರಘುನಾಥರಾಯರಿಗೂ ಶ್ರೀ. ಬಾಗಲವಾಡಿ ಬಳವಂತರಾಯರಿಗೂ ನಾನು ಋಣಿಯಾಗಿರುವೆನು. ಸ್ವಲ್ಪೇ ಕಾಲದಲ್ಲಿ ಹಗಲಿರುಳು ದುಡಿದು ಅಂದವಾಗಿ ಅಚ್ಚು ಹಾಕಿಕೊಟ್ಟ ಮೋಹನ ಮುದ್ರಾಲಯದ ಚಾಲಕರಿಗೂ ಕೆಲಸಗಾರರಿಗೂ ನನ್ನಂತೆಯೆ ಓದುಗರೂ ಋಣಿಯಾಗಿರಬೇಕಾಗಿದೆ.

ಈ ಪುಸ್ತಕವನ್ನು ಬರೆಯುವ ಕಾರ್ಯದಲ್ಲಿ ಉಪಯೋಗವಾದ ಪುಸ್ತಕಗಳ ಪಟ್ಟಿಯನ್ನು ಇದರಡಿಯಲ್ಲಿ ಕೊಟ್ಟಿರುವೆನು.

ಧಾರವಾಡ<br>
ಕಾಂಗ್ರೆಸ ಸುವರ್ಣ ಮಹೋತ್ಸವದಿನ<br>
೨೮-೧೨-೧೯೩೫

**ದತ್ತಾತ್ರೇಯ ಕರಮರಕರ**

# ಪರಿವಿಡಿ

# ಸಂದರ್ಭ ಗ್ರಂಥಗಳು


Ambika Charan Mazumdar: Indian National Evolution

Annie Besant: How India wrought for Freedom

Dadabhai Naoroji: Poverty and Un-British Rule in India

Ganesh & Co.,: The Indian Nation Builders, Part I & II

Ganesh & Co.: Speeches of B. G. Tilak

Government of India Act 1935

Lajpat Rai: Young India

Mitra. The Indian Annual Register, 1920 (2 Vols.): 1921, 1922; 1922–23; 1930 (Vols. I & II)

Natesan: Congress Presidential Addresses (1885–1916)

Natesan: Congress Presidential Addresses Second Series (1910–1934)

Natesan: Dadabhi Naoroji's Speeches and Writings

Parekh: Eminent Indians (1892)

Pattabhi Sitaramayya: History of the Congress.

Ramsay Macdonald: The Awakening of India

Report of the Commissioners appointed by the Punjab sub-committee of the Indian National Congress

Sardar Sardul Singh: Nonviolent Noncooperation

Surendra Nath Banerjea: A Nation in the making

ಕೇಳಕರ: ಲೋಕಮಾನ್ಯ ಟಿಳಕಾಂಚೆ ಚರಿತ್ರ, ಮೂರು ಭಾಗಗಳು (ಮರಾಠಿ)

ಉಮಾಪತಿ: ರಾಷ್ಟ್ರಸಭೆಯ ಇತಿಹಾಸವು

# ಕಾಂಗ್ರೆಸಿನ ಕಾರ್ಯದ ಸಿಂಹಾವಲೋಕನವು !

೫೦ ವರ್ಷಗಳಾಚೆ ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ಸಿನ ಮೊದಲಿನ ಅಧಿವೇಶನವು ಮುಂಬೈಯಲ್ಲಿಯಾಯಿತು. ಆ ಅಧಿವೇಶನಕ್ಕೆ ಬಂದ ಪ್ರತಿನಿಧಿಗಳು ಸ್ವಲ್ಪ.ಅವರೇನು ಆರಿಸಲ್ಪಟ್ಟ ಪ್ರತಿನಿಧಿಗಳು ಇರದಿದ್ದರೂ ಅವರು ಜನತೆಯ ನಿಜವಾದ ಸೇವಕರಿದ್ದರು. ಆಗಿನಿಂದ ಇದುವರೆಗೆ ಕಾಂಗ್ರೆಸ್ಸು ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಲಿದೆ. ಅದರ ಗುರಿಯು ಮೊದಲಿಗೆ ಅನಿಶ್ಚಿತವಿತ್ತು. ಆದರೆ ಹಿಂದುಸ್ತಾನದ ಜನರಿಗೆ ಹೊಣೆಗಾರವಾದ ಮತ್ತು ಹಿಂದುಸ್ತಾನದಲ್ಲಿಯ ಎಲ್ಲ ಜಾತಿಗಳ ಪಂಗಡಗಳ ಪ್ರತಿನಿಧಿಭೂತವಾದ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯು ಇಲ್ಲಿ ಅಮಲಿನಲ್ಲಿ ಬರಬೇಕೆಂದು ಮೊದಲಿನಿಂದಲೂ ಕಾಂಗ್ರೆಸ್ಸಿನ ಆಗ್ರಹವಿದೆ. ಮೊದಲಿಗೆ ಬ್ರಿಟಿಶ ಸರಕಾರದಲ್ಲಿ ಕಾಂಗ್ರೆಸ್ಸಿಗೆ ವಿಶ್ವಾಸವಿತ್ತು. ಹಿಂದುಸ್ತಾನದಲ್ಲಿ ನಿಜವಾದ ಪ್ರಾತಿನಿಧಿಕ ಸಂಸ್ಥೆಯನ್ನೇರ್ಪಡಿಸಿ ಹಿಂದುಸ್ತಾನದ ಹಿತವಾಗುವಂತೆ ಬ್ರಿಟಿಶ ಸರಕಾರವು ಆಳುವದೆಂದು ಕಾಂಗ್ರೆಸ್ಸಿಗೆ ನಂಬಿಗೆಯಿತ್ತು. ಈ ನಂಬಿಗೆಯನ್ನು ವ್ಯಕ್ತಮಾಡುವ ಅನೇಕ ಠರಾವುಗಳೂ ಮಾತುಗಳೂ ಕಾಂಗ್ರೆಸ್ಸಿನ ಮೊದಲಿನ ಅಧಿವೇಶನಗಳಲ್ಲಿ ಆಗಿವೆ. ಬ್ರಿಟಿಶ ಜನತೆಗೂ ಪಾರ್ಲಮೆಂಟಿಗೂ ಹಿಂದುಸ್ತಾನದ ನಿಜವಾದ ಸ್ಥಿತಿಯನ್ನೂ ಇಚ್ಛೆಯನ್ನೂ ತಿಳಿಸಿ ಹೇಳಿದರೆ ಅವರು ಸ್ವರಾಜ್ಯವನ್ನು ಹಿಂದುಸ್ತಾನಕ್ಕೆ ದಯಪಾಲಿಸುವರೆಂದು ಕಾಂಗ್ರೆಸ್ಸಿಗೆ ಆಸೆಯಿತ್ತು. ಆದುದರಿಂದಲೆ ಅಹಿತಕಾರಕವಾದ ಸಂಗತಿಗಳನ್ನು ಬದಿಗಿರಿಸಿ ಆಡಳಿತೆಯಲ್ಲಿ ಸುಧಾರಣೆಯಾಗಬೇಕೆಂದು ಕಾಂಗ್ರೆಸ್ಸಿನವರ ಠರಾವುಗಳನ್ನು ಪಾಸುಮಾಡುತ್ತಿದ್ದರು. ಹಿಂದುಸ್ತಾನದಲ್ಲಿಯೂ ಇಂಗ್ಲಂಡದಲ್ಲಿಯೂ ಬ್ರಿಟಿಶ ಸರಕಾರದಿಂದ ಆದ ಕೃತಿಗಳಿಂದ ಆ ಆಶೆಯೂ ವಿಶ್ವಾಸವೂ ಮೆಲ್ಲ ಮೆಲ್ಲಗೆ ಅಳಿದುಹೋಗಿವೆ. ರಾಷ್ಟ್ರೀಯ ಚೈತನ್ಯವು ಬೆಳೆದ ಹಾಗೆ ಬ್ರಿಟಿಶ ಸರಕಾರದ ಧೋರಣವು ಕಠೋರವಾಗಿದೆ.

ಬ್ರಿಟಿಶ ಸರಕಾರದ ಮೇಲಿನ ಈ ವಿಶ್ವಾಸಕ್ಕೆ ವಂಗಭಂಗ ವನ್ನು ಮಾಡಿದ ಲಾರ್ಡ ಕರ್ಝನ್ನರಾಳಿಕೆಯಲ್ಲಿ ಮೊದಲಿನ ಧಕ್ಕೆ ಕೂತಿತು; ರಶಿಯಾ ದೇಶವನ್ನು ಜಪಾನ ದೇಶವು ಗೆದ್ದದರಿಂದ ಜನರಲ್ಲಿ ಚೈತನ್ಯವು ಬರಹತ್ತಿತು. ವಂಗಭಂಗದ ಚಳವಳಿಯಲ್ಲಿ ಆದೇ ಚೈತನ್ಯವು ಹೇಗೆ ಹೆಚ್ಚಾಗಿತ್ತೆಂಬದು ಕಂಡುಬಂದಿತು.ಆದರೆ ಇನ್ನೂ ಬ್ರಿಟಿಶ ಸರಕಾರದ ಮೇಲಿನ ನಂಬಿಗೆಯು ಪೂರ್ಣ ಅಳಿದು ಹೋಗಿದ್ದಿಲ್ಲ. ವಂಗಭಂಗವನ್ನು ರದ್ದು ಮಾಡಿದ್ದರಿಂದ ಮತ್ತೆ ಜೀವಕಳೆತುಂಬಿದ ವಿಶ್ವಾಸದಿಂದಲೂ ಒಟ್ಟಿನ ಪರಿಸ್ಥಿತಿಯ ಅಜ್ಞಾನದಿಂದಲೂ ದೇಶದವರು ಮಹಾಯುದ್ಧದ ಕಾಲಕ್ಕೆ ಬ್ರಿಟಿಶ ಸಾಮ್ರಾಜ್ಯಕ್ಕೊದಗಿದ ಸಂಕಟಕಾಲದಲ್ಲಿ ಬಹಳ ಸಹಾಯವನ್ನು ಮಾಡಿದರು. ಹಿಂದುಸ್ತಾನವು ಮಾಡಿದ ಸಹಾಯವನ್ನು ಎಲ್ಲ ಬ್ರಿಟಿಶ ಮುಖಂಡರು ಕೊಂಡಾಡಿದರು. ಸ್ವಯಂನಿರ್ಣಯದ ತತ್ವಕ್ಕಾಗಿಯೂ, ಪ್ರಜಾರಾಜ್ಯದ ಸುರಕ್ಷಣೆಗಾಗಿಯೂ ಹೂಡಲ್ಪಟ್ಟ ಮಹಾಯುದ್ಧದಿಂದ ಹಿಂದುಸ್ತಾನದಲ್ಲಿಯೂ ಹೊಣೆಗಾರಿಕೆಯ ರಾಜ್ಯಪದ್ಧತಿಯು ಸ್ಥಾಪಿಸಲ್ಪಡುವದೆಂದು ಆಸೆಯು ಹುಟ್ಟಿತು. ಭಾರತ ಮಂತ್ರಿಗಳು ಬ್ರಿಟಿಶ ಸರಕಾರದ ಪರವಾಗಿ ಹಿಂದುಸ್ತಾನಕ್ಕೆ ಮೆಲ್ಲಮೆಲ್ಲಗೆ ಸ್ವರಾಜ್ಯವು ದೊರಕುವದೆಂದು ೧೯೧೭ರಲ್ಲಿ ಜಾಹೀರ ಪಡಿಸಿದರು. ಇದರಿಂದ ಹಿಂದೀ ಜನರಲ್ಲಿ ಇಬ್ಬಣ ವಾಯಿತು. ಮುಂದೆ ಭಾರತ ಮಂತ್ರಿಗಳೂ ವ್ಹಾಯಿಸರಾಯರೂ ಕೂಡಿ ಮಾಡಿದ ವಿಚಾರಣೆಯಿಂದಲೂ ೧೯೨೦ರಲ್ಲಿ ಪಾಸಾದ ಸುಧಾರಣೆಯ ಬಿಲ್ಲಿನಿಂದಲೂ ಈ ಇಬ್ಬಣಕ್ಕೆ ಹೆಚ್ಚು ಅನುವು ದೊರೆಯಿತು. ಈ ಬಿಲ್ಲಿನ ವಿಚಾರಣೆ ನಡೆದಾಗ ಮಹಾಯುದ್ಧವು ಮುಗಿದು ಬ್ರಿಟಿಶರಿಗೆ ಜಯವಾಯಿತು. ಮಹಾಯುದ್ಧದಲ್ಲಿ ಜಯವು ದೊರೆತದ್ದರಿಂದ ಯುರೋಪದಲ್ಲಿಯ ಭಾರವು ಹಗುರಾಗಿ ಹಿಂದುಸ್ತಾನದ ವಿಷಯವಾಗಿ ಬ್ರಿಟಿಶರ ಧೋರಣವು ಕೆಡಹತ್ತಿದೆಯೆಂದು ಹಿಂದೀ ಜನರ ಭಾವನೆಯಾಯಿತು.

ಖಿಲಾಫತದ ವಿಷಯದಲ್ಲಿಯ ವಚನಭಂಗದಿಂದಲೂ ಜನತೆಯ ಮತವನ್ನು ಲೆಕ್ಕಿಸದೆ ಜನರ ಮೂಲಭೂತವಾದ ಹಕ್ಕುಗಳನ್ನು ಅಪಹರಿಸಿದ ಕೇವಲ ಮಹಾಯುದ್ಧದ ಕಾಲದಲ್ಲಿಯೆಂದು ಜನರು ಸೈರಿಸಿದ "ಡಿಫೆನ್ಸ ಆಫ್ ಇಂಡಿಯಾ ಆಕ್ಟ"ದ ಕಠೋರವಾದ ಕಲಮುಗಳಿಗೆ ಶಾಶ್ವತವಾದ

ಸ್ವರೂಪವನ್ನು ಕೊಡುವ ರೊಲೇಟ ಬಿಲ್ಲುಗಳಿಂದಲೂ ಈ ಭಾವನೆಯು ದೃಢವಾಯಿತು. ಸಾಹಜಿಕವೆ ಈ ಮಾತುಗಳಿಂದ ದೇಶದಲ್ಲೆಲ್ಲ ಪ್ರಖರವಾದ ಚಳವಳಿಯಾಯಿತು. ಆ ಮೊದಲು ದಕ್ಷಿಣ ಆಫ್ರಿಕ ಚಂಪಾರಣ್ಯ ಮತ್ತು ಖೇಡಾ ಈ ಪ್ರದೇಶಗಳಲ್ಲಿ ಅನುಸರಿಸಲ್ಪಟ್ಟ ಸತ್ಯಾಗ್ರಹವನ್ನು ಮಹಾತ್ಮಾ ಗಾಂಧಿಯವರು ಈ ಮೇಲಿನ ಮತ್ತು ಉಳಿದ ತೊಂದರೆಗಳ ನಿವಾರಣೆಗಾಗಿ ಜನರೆದುರಿಗಿಟ್ಟರು. ಪಂಜಾಬದಲ್ಲಿಯೂ, ಅಹಮುಬಾದಿನಲ್ಲಿಯೂ, ವಿಷಾದಕರವಾದ ಗೊಂದಲಗಳಾದವು; ಕೆಲವರು ಪ್ರಾಣಕ್ಕೆ ಎರವಾದರು. ಕೆಲವರ ಆಸ್ತಿಪಾಸ್ತಿಗಳು ನಾಶವಾದವು. ಅನಂತರ ಜಾಲಿಯನಾವಾಲಾ ಬಾಗಿನಲ್ಲಿಯ ಕೊಲೆಯೂ ಪಂಜಾಬದಲ್ಲಿಯ ದಂಡಿನಾಳ್ಗೆಯೂ ಸಂಭವಿಸಿದವು. ಸಾಮಜಿಕವೆ ದೇಶದಲ್ಲೆಲ್ಲ ತೀಕ್ಷ್ಣವಾದ ಅಸಂತೋಷವು ಪಸರಿಸಿತು. ಇವೆಲ್ಲ ಘಟನೆಗಳನ್ನು ವಿಚಾರಿಸಲು ನೇಮಕವಾದ ಹಂಟರ ಕಮಿಟಿಯ ರಿಪೋರ್ಟಿನಿಂದ ಈ ಅಸಂತೋಷವು ಕಡಿಮೆಯಾಗಲಿಲ್ಲ. ಪಾರ್ಲಿಮೆಂಟಿನಲ್ಲಿ ಈ ವಿಷಯಕ್ಕೆ ಆದ ಚರ್ಚೆಯಿಂದ ಆ ಅಸಂತೋಷಕ್ಕೆ ಪುಟ ಕೊಟ್ಟಂತಾಯಿತು. ಅನಂತರ ಅಸಹಕಾರದ ಚಳವಳಿಯು ಪ್ರಾರಂಭಿಸಲ್ಪಟ್ಟಿತು, ಸರಕಾರೀಬಹುಮಾನಬಹಿಷ್ಕಾರ ಸರಕಾರೀಪದವಿಬಹಿಷ್ಕಾರ, ಕಾಯದೆಕೌನ್ಸಿಲ ಬಹಿಷ್ಕಾರ ಸರಕಾರೀ ಅಳುಕಿನಲ್ಲಿರುವ ಶಿಕ್ಷಣ ಸಂಸ್ಥೆಗಳ ಬಹಿಷ್ಕಾರ ಸರಕಾರೀ ಕೋರ್ಟುಗಳ ಬಹಿಷ್ಕಾರ ಪರದೇಶಿ ಅರಿವೆಯ ಬಹಿಷ್ಕಾರ ಇದೆಲ್ಲ ಬಹಿಷ್ಕಾರ ಸಮೂಹವೂ ಕಾಂಗ್ರೆಸ ಕಮಿಟಿಗಳ ಸ್ಥಾಪನೆ ಕಾಂಗ್ರೆಸ ಸಭಾಸದರನ್ನು ಕೂಡಿಸುವದು ಟಿಳಕ ಸ್ವರಾಜ್ಯ ಫಂಡನ್ನು ಕೂಡಿಸುವದು ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವದು ಪಂಚಾಯತಿಗಳನ್ನು ಸ್ಥಾಪಿಸುವದು ಕೈನೂಲಿನ ಕೈಮಗ್ಗಗಳ ಉದ್ಯೋಗವನ್ನು ಪ್ರೋತ್ಸಾಹಿಸುವದು ಮುಂತಾದ ವಿಧಾಯಕ ಕಾರ್ಯಕ್ರಮಗಳ ಸಮೂಹವೂ, ಅಸಹಕಾರದಲ್ಲಿ ಒಳಪಟ್ಟಿದ್ದವು. ಶಾಂತಿಯುತವಾದ ಕಾಯದೆಭಂಗವೇ ಇವೆಲ್ಲ ಕಾರ್ಯಕ್ರಮಗಳ ಕೊನೆಯ ಗುರಿಯಾಗಿತ್ತು. ಕಾಂಗ್ರೆಸ್ಸಿನ ಘಟನೆಯಲ್ಲಿ ಬದಲು ಮಾಡಿ, ಎಲ್ಲ ಶಾಂತ ಮತ್ತು ಯೋಗ್ಯವಾದ ಉಪಾಯಗಳಿಂದ ಸ್ವರಾಜ್ಯವನ್ನು ದೊರಕಿಸುವದೆ ಕಾಂಗ್ರೆಸ್ಸಿನ ಗುರಿಯೆಂದು ಗೊತ್ತಾಯಿತು. ದೇಶದಲ್ಲೆಲ್ಲ ಜಾಗೃತಿಯಾಯಿತು.

ಸರಕಾರದವರು ದಬ್ಬಾಳಿಕೆಯನ್ನು ಪ್ರಾರಂಭಿಸಿದರು. ೧೯೨೧ನೆಯ ಇಸ್ವಿಯ ಕೊನೆಗೆ ಸಾವಿರಾರು ಗಂಡಸರೂ ಹೆಂಗಸರೂ ಸೆರೆಮನೆಗೆ ಕಳಿಸಲ್ಪಟ್ಟರು. ಸರಕಾರದೊಡನೆ ಒಪ್ಪಂದವನ್ನು ಮಾಡುವ ಪ್ರಯತ್ನಗಳು ನಿಷ್ಫಲವಾದವು. ಸಂಯುಕ್ತಪ್ರಾಂತದೊಳಗಿನ ಚೌರಿಚೋರಾದಲ್ಲಿ ಘಟಿಸಿದ ಅತ್ಯಾಚಾರಗಳ ಮೂಲಕ ಕರಬಂದಿಯ ಕಾರ್ಯಕ್ರಮವು ನಿಲ್ಲಿಸಲ್ಪಟ್ಟಿತು.

ಅನಂತರ ಮೆಲ್ಲಮೆಲ್ಲಗೆ ಅಸಹಕಾರದ ಉಳಿದ ಕಾರ್ಯಕ್ರಮಗಳು ನಿಲ್ಲಿಸಲ್ಪಟ್ಟು ಕಾಂಗ್ರೆಸ್ಸಿನ ಸಭಾಸದರು ಕಾಯದೆಮಂಡಳಗಳನ್ನು ಪ್ರವೇಶಿಸಿದರು.

೧೯೨೦ರ ರಾಜ್ಯಘಟನೆಯನ್ನು ಪರೀಕ್ಷಿಸಲು ಬ್ರಿಟಿಶ ಪಾರ್ಲಿಮೆಂಟಿನವರು ಸಾಯಮನ್ ಕಮಿಶನ್ನನ್ನು ನೇಮಿಸಿದರು. ಆ ಕಮಿಶನ್ನಿನಲ್ಲಿ ಹಿಂದೀ ಮನುಷ್ಯನು ಒಬ್ಬನೂ ಇರಲಿಲ್ಲ. ಇದರಿಂದ ದೇಶದಲ್ಲಿ ಇನ್ನೊಂದು ಆಂದೋಲನವಾಗಿ ಕಾಂಗ್ರೆಸ್ಸಿನವರು ಉಳಿದ ಸಾರ್ವಜನಿಕ ಸಂಸ್ಥೆಗಳೊಡನೆ ಸಹಕರಿಸಿ ವಸಾಹಾತಿನಸ್ವರಾಜ್ಯವನ್ನೆ ಗುರಿಯಾಗಿಟ್ಟುಕೊಂಡು ಒಂದು ಘಟನೆಯನ್ನು ಸಿದ್ಧಮಾಡಿದ್ದರು. ಆದರೆ ಸರಕಾರದಿಂದ ಯಾವದೆ ತರಹದ ಸಹಾನುಭೂತಿಪರವಾದ ಉತ್ತರವು ದೊರೆಯದ್ದರಿಂದ ಕಾಂಗ್ರೆಸ್ಸಿನ ಲಾಹೋರದ ಅಧಿವೇಶನದಲ್ಲಿ ಯೋಗ್ಯ ಮತ್ತು ಶಾಂತ ಉಪಾಯಗಳಿಂದ ಪೂರ್ಣ ಸ್ವರಾಜ್ಯವನ್ನು ದೊರಕಿಸುವದು ಕಾಂಗ್ರೆಸ್ಸಿನ ಗುರಿಯೆಂದು ಗೊತ್ತಾಯಿತು. ೧೯೩೦ರ ಪ್ರಾರಂಭಕ್ಕೆ ಕಾಯದೆಭಂಗವೂ ಕರಬಂದಿಯೂ ಏರ್ಪಡಿಸಲ್ಪಟ್ಟವು.

ಬ್ರಿಟಿಶ ಸರಕಾರದವರು ಹಿಂದುಸ್ತಾನದ ರಾಜ್ಯಘಟನೆಯನ್ನು ಕುರಿತು ಸಲಹೆಗಳನ್ನು ಕೇಳಲು ಕೆಲವು ಹಿಂದೀ ಜನರನ್ನು ನೇಮಿಸಿಕೊಂಡು ಒಂದು ಪರಿಷತ್ತನ್ನು ಏರ್ಪಡಿಸಿದರು; ಇತ್ತ ಕಾಯದೆಭಂಗದ ಚಳವಳಿಯನ್ನು ಮುರಿಯಲು ಅತ್ಯಂತ ಕಠೋರವಾದ ಆರ್ಡಿನನ್ಸುಗಳನ್ನೊಳಗೊಂಡ ದಬ್ಬಾಳಿಕೆಯ ಉಪಾಯಗಳನ್ನು ಅವಲಂಬಿಸಿದರು. ೧೯೩೧ರ ಮಾರ್ಚ ತಿಂಗಳಲ್ಲಿ ಬ್ರಿಟಿಶ ಸರಕಾರದ ಪರವಾಗಿ ವ್ಹಾಯಿಸರಾಯರಾಗಿದ್ದ ಲಾರ್ಡ ಆಯರ್ವಿನ್ನ ಮತ್ತು ಕಾಂಗ್ರೆಸ್ಸಿನ ಪರವಾಗಿ ಮಹಾತ್ಮಾ ಗಾಂಧಿ ಇವರಿಬ್ಬರೊಳಗೆ ಒಪ್ಪಂದವಾಗಿ ಕಾಯದೆಭಂಗವು ನಿಲ್ಲಿಸಲ್ಪಟ್ಟಿತು.

೧೯೩೦ರ ಕೊನೆಗೆ ಜರುಗಿದ ದುಂಡುಮೇಜಿನ ಪರಿಷತ್ತಿಗೆ ಮಹಾತ್ಮಾ ಗಾಂಧಿಯವರು ಹೋಗಿದ್ದರು. ಆ ಪರಿಷತ್ತಿನಿಂದ ಏನೂ ಪ್ರಯೋಜನ ವಾಗಲಿಲ್ಲ. ೧೯೩೨ರ ಪ್ರಾರಂಭಕ್ಕೆ ಕಾಂಗ್ರೆಸ್ಸು ಮತ್ತೆ ಕಾಯದೆ ಭಂಗ ವನ್ನು ಪ್ರಾರಂಭಿಸಬೇಕಾಯಿತು. ೧೯೩೩ರ ವರೆಗೆ ಕಾಯದೆ ಭಂಗವು ನಡೆದು ಮತ್ತೆ ನಿಲ್ಲಿಸಲ್ಪಟ್ಟಿತು. ೧೯೩೦ರ ಮತ್ತು ೧೯೩೨ ಈ ಎರಡೂ ವರ್ಷಗಳ ಆಂದೋಲಗಳಲ್ಲಿ ಲಕ್ಷಾವಧಿ ಗಂಡಸರೂ ಹೆಂಗಸರೂ ಹುಡುಗರೂ ಸೆರೆಮನೆಯನ್ನು ಸೇರಿದರು. ಲಾಠಿಯ ಪೆಟ್ಟುಗಳನ್ನು ತಿಂದರು. ಅನೇಕ ತರಹದ ಯಾತನೆಗಳನ್ನು ಸಹಿಸಿದರು. ಆಸ್ತಿಪಾಸ್ತಿಗಳನ್ನು ಕಳೆದು ಕೊಂಡರು. ಸರಕಾರೀ ಅಧಿಕಾರಿಗಳು ಜನಸಂದಣಿಯ ಮೇಲೆ ಗುಂಡು ಹಾರಿಸಿದ್ದರಿಂದ ಅನೇಕರು ಸಾವಿಗೆ ಈಡಾದರು. ಸತ್ಯಾಗ್ರಹಿಗಳು ಬಳಿ ಪ್ರಶಂಸನೀಯವಾದ ತಾಳ್ಮೆಯನ್ನೂ ಸಂಘಟನಾಶಕ್ತಿಯನ್ನೂ ತೋರಿ ಸಿದರು. ಎಂತಹ ಕಠೀಣ ಪ್ರಸಂಗಗಳಲ್ಲಿಯೂ ಅಹಿಂಸಾವ್ರತವನ್ನು ಬಿಡಲಿಲ್ಲ. ಕಾಂಗ್ರೆಸ್ಸಿನ ಸಂಘಟನೆಯಲ್ಲಿ ಒಳ್ಳೆ ಕಸುವೂ, ಪರಿಸ್ಥಿತಿಗೆ ತಕ್ಕಂತೆ ವರ್ತಿಸುವ ಸಾಮರ್ಥ್ಯವೂ, ಕಂಡುಬಂದವು. ಆದುದರಿಂದಲೆ ಸರಕಾರದ ಪ್ರಬಲವಾದ ಆಘಾತವನ್ನು ತಡೆದುಕೊಂಡು ಕಾಂಗ್ರೆಸ್ಸು ಜೀವ ಹಿಡಿದು ನಿಂತಿತು. ಈ ದಿವ್ಯ ಪರೀಕ್ಷೆಯಲ್ಲಿ ರಾಷ್ಟ್ರವು ಯಶಸ್ಸು ತಂದು ಕೊಂಡಿತು. ಆದರೆ ಪೂರ್ಣ ಸ್ವರಾಜ್ಯದ ಗುರಿಯನ್ನು ಮಾತ್ರ ಸಾಧಿಸಲಿಲ್ಲ.

ಕರಾಚಿಯಲ್ಲಿ ಪಾಸಾದ ಒಂದು ಠರಾವಿನಲ್ಲಿ ಕಾಂಗ್ರೆಸ್ಸು ಎಲ್ಲ ಹಿಂದೀ ಯರಿಗೂ ಕೆಲವು ಮೂಲ ಭೂತವಾದ ಹಕ್ಕುಗಳ ವಿಷಯಕ್ಕೆ ಆಶ್ವಾಸ ವನ್ನು ಕೊಟ್ಟಿದೆ; ಮತ್ತು ಆರ್ಥಿಕ, ಸಾಮಾಜಿಕ, ಕಾರ್ಯಕ್ರಮವನ್ನೇರ್ಪ ಡಿಸಿಕೊಂಡಿದೆ. ಬಡಜನರ ಸುಲಿಗೆಯು ನಿಲ್ಲಬೇಕಾದರೆ ರಾಜಕೀಯ ಸ್ವಾತಂತ್ರ್ಯದಲ್ಲಿ ಆರ್ಥಿಕ ಸ್ವಾತಂತ್ರ್ಯವು ಅಡಕವಾಗಬೇಕೆಂಬ ತತ್ವವನ್ನು ಕಾಂಗ್ರೆಸ್ಸು ಸ್ಪಷ್ಟವಾಗಿ ಹೇಳಿದೆ. ಭಾಷಣ ಸ್ವಾತಂತ್ರ್ಯ, ಸಂಘಸ್ವಾ ತಂತ್ರ್ಯ, ಆಸ್ತಿವ್ಯಕ್ತಿಗಳ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಇವೆಲ್ಲವೂ ನಾಗರಿಕರ ಮೂಲಭೂತ ಹಕ್ಕುಗಳೆಂದು ಕಾಂಗ್ರೆಸ್ಸು ಸಾರಿದೆ. ಕೂಲಿ ಕಾರರಿಗೆ ಯೋಗ್ಯವಾದ ಪರಿಸ್ಥಿತಿಯನ್ನು ಒದಗಿಸಿಕೊಟ್ಟು ಅವರು ಕೆಲಸ ಮಾಡುವ ಅವಧಿಯನ್ನು ಗೊತ್ತುಪಡಿಸಿ, ಅವರಿಗೂ ಯಜಮಾನರಿಗೂ, ಆಗ

ಬಹುದಾದ ನ್ಯಾಯಗಳನ್ನು ಬಗೆಹರಿಸುವ ಉಪಾಯಗಳನ್ನು ಕೈಕೊಂಡು ಮುಪ್ಪು ಅನಾರೋಗ್ಯ ಇವುಗಳಿಂದುಂಟಾಗಬಹುದಾದ ತೊಂದರೆಗಳಿಗೆ ತಕ್ಕ ಯೋಜನೆಮಾಡಿ ಅವರಿಗೆ ಸಂಘಗಳನ್ನೇರ್ಪಡಿಸುವ ಸ್ವಾತಂತ್ರ್ಯವನ್ನು ಕೊಟ್ಟು ಕೂಲಿಕಾರರ ಹಿತಸಂರಕ್ಷಣೆಯನ್ನು ಮಾಡಬೇಕೆಂದು ಅದೇ ಠರಾವಿನಲ್ಲಿ ನಿರ್ಧರಿಸಿದ್ದಾರೆ. ಲಾವಣಿಯನ್ನೂ ಹಪ್ತೆಯನ್ನೂ ಅವಶ್ಯ ವಿದ್ದಲ್ಲಿ ಕಡಿಮೆಮಾಡಿ ಭೂಮಿಯ ಭಾರವನ್ನು ಕಡಿಮೆಮಾಡುವ ದಾಗಿಯೂ, ಲಾಭವಿಲ್ಲದ ಭೂಮಿಯ ಮೇಲಿನ ಹಪ್ತೆಲಾವಣಿಗಳನ್ನು ರದ್ದುಪಡಿಸುವದಾಗಿಯೂ ಕಾಂಗ್ರೆಸ್ಸಿನವರು ಆಶ್ವಾಸನವನ್ನು ಕೊಟ್ಟಿ ದ್ದಾರೆ; ಈ ಮಾತಿನಿಂದ ಹಾನಿಪಡುವ ಭೂಮಿಯ ಮಾಲಕರಿಗೆ ಯೋಗ್ಯ ವಾದ ಸಹಾಯವನ್ನು ಮಾಡಬೇಕೆಂದು ಗೊತ್ತುಪಡಿಸಿರುವರು. ಕೆಲವು ಮರ್ಯಾದೆಗಿಂತ ಹೆಚ್ಚಿನ ಭೂಮಿಯ ಉತ್ಪನ್ನದ ಮೇಲೆ ಕರವನ್ನು ಕೂಡಿಸ ಬೇಕೆಂದೂ ಕೆಲವೊಂದು ಆಳತೆಗಿಂತ ಹೆಚ್ಚಿನ ಉತ್ಪನ್ನದ ಮೇಲೆ "ಸಾವಿನ ಕಂದಾಯ"ವನ್ನು ಕೂಡಿಸಬೇಕೆಂದೂ ಸೈನ್ಯ ಮತ್ತು ಆಡಳಿತೆ ಇವುಗಳ ವೆಚ್ಚವನ್ನು ಕಡಿಮೆ ಮಾಡಬೇಕೆಂದೂ, ಸರಕಾರೀ ನೋಕರರ ಸಂಬಳವು ಹೆಚ್ಚೆಂದರೆ ೫೦೦ ರೂಪಾಯಿಗಳವರೆಗೆ ಇರಬೇಕೆಂದೂ, ಅದೇಠರಾವಿನಲ್ಲಿ ಗೊತ್ತಾಗಿದೆ. ಇದೂ ಅಲ್ಲದೆ ಪರದೇಶೀ ವಸ್ತ್ರ ಬಹಿಷ್ಕಾರ, ಸ್ವದೇಶಿ ಉದ್ಯೋಗಗಳಿಗೆ ಪ್ರೋತ್ಸಾಹನ, ಮದ್ಯ ಪ್ರತಿಬಂಧ, ಒಕ್ಕಲಿಗರ ಸಾಲದ ಪರಿಹಾರ, ದೇಶಕ್ಕೆ ಹಿತವಾಗುವಂತೆ ನಾಣ್ಯವಿನಿಮಯಗಳ ನಿಯಮನ, ರಾಷ್ಟ್ರದ ಸಂರಕ್ಷಣೆಗಾಗಿ ನಾಗರಿಕರಿಗೆ ಸೈನಿಕ-ಶಿಕ್ಷಣವನ್ನು ಕೊಡುವ ಏರ್ಪಾಟು, ಮುಖ್ಯೋದ್ಯೋಗಗಳ ರಾಷ್ಟ್ರೀ ಕರಣ, ಇವೆಲ್ಲವುಗಳನ್ನೊಳ ಗೊಂಡ ಆರ್ಥಿಕ ಸಾಮಾಜಿಕ ಕಾರ್ಯಕ್ರಮವು ಗೊತ್ತುಮಾಡಲ್ಪಟ್ಟಿದೆ."

೧೯೩೪ರ ಆಕ್ಟೋಬರದಲ್ಲಿ ಜರುಗಿದ ಮುಂಬೈ ಕಾಂಗ್ರೆಸ್ಸಿನ ಅಧಿವೇ ಶನದಲ್ಲಿ ಕಾಯದೆಮಂಡಳಗಳನ್ನು ಪ್ರವೇಶಿಸುವ ಕಾರ್ಯಕ್ರಮಕ್ಕೆ ಬೆಂಬಲವು ದೊರೆಯಿತು. ಕೈನೂಲು ಕೈನೇಯ್ಗೆಗಳ ಪ್ರೋತ್ಸಾಹನ,ಹಳ್ಳಿಯ ಕೈಗಾರಿಕೆಗಳಿಗೆ ಉತ್ತೇಜನ, ಹಳ್ಳಿಯ ಜೀವನದ ಆರ್ಥಿಕ ಶೈಕ್ಷಣಿಕ ಸಾಮಾಜಿಕ ಆರೋಗ್ಯ ವಿಷಯಕ ಸುಧಾರಣೆ, ಅಸ್ಪೃತಾ ನಿವಾರಣೆ, ಜಾತಿಜಾತಿಗಳೊಳಗಿನ ಒಕ್ಕಟ್ಟು, ಮದ್ಯ ಪ್ರತಿಬಂಧ, ರಾಷ್ಟ್ರೀಯಶಿಕ್ಷಣ,

ಜನತೆಯಲ್ಲಿ ಯೋಗ್ಯ ಜ್ಞಾನದ ಪ್ರಸಾರ ಕೂಲಿಕಾರರ ಮತ್ತು ಒಕ್ಕಲಿಗರ ಸಂಘಟನೆ ಕಾಂಗ್ರೆಸ ಸಂಸ್ಥೆಯ ಬಲಸಂವರ್ಧನ ಇವೆಲ್ಲ ಮಾತು ಗಳನ್ನೊಳಗೊಂಡ ವಿಧಾಯಕ ಕಾರ್ಯಕ್ರಮವು ನಿರ್ಧರಿಸಲ್ಪಟ್ಟಿತು. ಘಟನೆಯಲ್ಲಿ ಮಾರ್ಪಾಟುಗಳಾದವು. ಪ್ರತಿನಿಧಿಗಳ ಸಂಖ್ಯೆಯು ಕಡಿಮೆ ಮಾಡಲ್ಪಟ್ಟು ಇಂತಿಷ್ಟು ಪ್ರಾಥಮಿಕ ಸಭಾಸದರು ಪ್ರತಿನಿಧಿಗಳನ್ನು ಆರಿಸಿ ಕೊಡಬೇಕೆಂದು ಗೊತ್ತಾಯಿತು. ಕಾಂಗ್ರೆಸ್ಸಿನ ಯಾವದೆ ಸಂಸ್ಥೆಗೆ ಆರಿಸಲ್ಪಟ್ಟ ಸಭಾಸದರೂ, ಕಾಂಗ್ರೆಸ್ಸಿನ ಅಧಿಕಾರಿಗಳೂ, ಖಾದಿ ಯನ್ನು ಯಾವಾಗಲೂ ತೊಟ್ಟೇತೀರಬೇಕೆಂದೂ, ನಿರ್ದಿಷ್ಟವಾದ ಶಾರೀರಿಕ ಶ್ರಮವನ್ನು ಮಾಡಿಯೇ ತೀರಬೇಕೆಂದೂ ನಿರ್ಧರಿಸಲ್ಪಟ್ಟಿತು.

ಈ ರೀತಿ ಮೆಲ್ಲ ಮೆಲ್ಲಗೆ ಕಾಂಗ್ರೆಸ್ಸು ಮುಂದೆ ಸಾಗಿದೆ. ಸದ್ಯಕ್ಕೆ ರಾಷ್ಟ್ರೀಯ ಜೀವನದ ಪ್ರತಿಯೊಂದು ಕ್ಷೇತ್ರವನ್ನು ವ್ಯಾಪಿಸಿಬಿಟ್ಟಿದೆ. ಜನತೆಯ ಆರ್ಥಿಕ ಸ್ಥಿತಿಯನ್ನು ಸುಧಾರಿಸಿ ಯೋಗ್ಯ ಕರ್ತವ್ಯವನ್ನು ಮಾಡಿ ಉಂಟಾಗುವಂತಹ ಆತ್ಮವಿಶ್ವಾಸವನ್ನು ಹುಟ್ಟಿಸಿ ಪೂರ್ಣ ಸ್ವರಾಜ್ಯ ದೆಡೆಗೆ ಅವರನ್ನೊಯ್ಯುವ ವಿಧಾಯಕ ಕಾರ್ಯಕ್ರಮದಲ್ಲಿ ಕಾಂಗ್ರೆಸ್ಸು ತೊಡಗಿದೆ. ಪ್ರಾರಂಭಕ್ಕೆ ಅದೊಂದು ಚಿಕ್ಕ ಸಂಸ್ಥೆಯಾಗಿದ್ದಿತು. ಈಗ ಅದು ಇಡೀ ದೇಶವನ್ನೆ ವ್ಯಾಪಿಸಿದೆ. ಅದರ ಶಾಖೋಪಶಾಖೆಗಳು ಎಲ್ಲ ಕಡೆಗೂ ಪಸರಿಸಿವೆ. ಅದು ಈಗ ಜನರ ವಿಶ್ವಾಸಕ್ಕೆ ಪಾತ್ರವಾಗಿದೆ. ಅದರ ಕೂಗಿಗೆ ಕಿವಿಕೊಟ್ಟು ಸ್ವರಾಜ್ಯಸಾಧನೆಗಾಗಿ ಜನರು ದೊಡ್ಡ ಸ್ವಾರ್ಥತ್ಯಾಗ ವನ್ನು ಮಾಡಲು ಮುಂದೆ ಬಂದರು; ಕಾಂಗ್ರೆಸ್ಸಿನಿಂದ ಈ ಮೊದಲೆ ಶ್ರೇಷ್ಠ ವಾದ ಕಾರ್ಯವು ಕೈಗೂಡಿದೆ. ಆ ಸಂಘಟನೆಯೆ ರಾಷ್ಟ್ರದ ದೊಡ್ಡ ಸಂಪತ್ತಾಗಿದೆ. ಮುಂದಿನ ಸ್ವಾತಂತ್ರ್ಯದ ಹೋರಾಟದಲ್ಲಿ ಅದರಿಂದಲೆ ದೊಡ್ಡ ಕಾರ್ಯವು ಆಗಿಯೆ ತೀರುವುದು. ದಣುವನ್ನು ಆರಿಸಿಕೊಳ್ಳುವ ಸಮಯವು ಇದಲ್ಲ. ಇನ್ನೂ ಮಾಡಬೇಕಾಗಿದ್ದ ಕಾರ್ಯವು ದೊಡ್ಡ ದಿದೆ. ಬೇಸರವಿಲ್ಲದ ದುಡಿತವೂ ನಿಸ್ಸೀಮ ಸ್ವಾರ್ಥತ್ಯಾಗವೂ ಅಭೇದ್ಯ ನಿಶ್ಚಯವೂ ಬೇಕಾಗಿವೆ. ಪೂರ್ಣ ಸ್ವರಾಜ್ಯವನ್ನು ದೊರಕಿಸದೆ ಕಾರ್ಯ ವನ್ನು ಮುಗಿಸಿದಂತಾಗಲಿಲ್ಲ. ರಾಷ್ಟ್ರಕ್ಕಾಗಿ ದೇಹವನ್ನು ಅರ್ಪಿಸಿ ಕಷ್ಟ ನಷ್ಟಗಳನ್ನು ಸಹಿಸಿದ, ಇನ್ನೂ ರಾಷ್ಟ್ರಪ್ರೇಮದ ಕಟುಫಲವನ್ನು

ಅನುಭವಿಸುತ್ತಲಿರುವ, ಗಂಡಸರಿಗೂ ಹೆಂಗಸರಿಗೂ ಹುಡುಗರಿಗೂ-ಅವರು ಪ್ರಸಿದ್ಧರಿರಲಿ, ಅಪ್ರಸಿದ್ಧರಿರಲಿ, - ನಮ್ಮ ವಂದನೆಗಳನ್ನು ನಮ್ರತೆಯಿಂದ ಸಮರ್ಪಿಸುವಾ.

ಈ ದೊಡ್ಡ ಸಂಸ್ಥೆಯು ಬೀಜವನ್ನೂರಿ ತಮ್ಮ ದುಡಿತದಿಂದಲೂ ತ್ಯಾಗದಿಂದಲೂ ಈ ಸಸಿಯನ್ನು ಬೆಳೆಸಿದ ಎಲ್ಲರನ್ನು ಕೃತಜ್ಞತೆಯಿಂದಲೂ ಆದರದಿಂದಲೂ ನೆನಿಸಿಕೊಳ್ಳುವಾ. ೫೦ ವರ್ಷಗಳ ಹಿಂದೆ ನೆಟ್ಟ ಈ ಸಸಿಯು ಈಗ ದೊಡ್ಡ ಮರವಾಗಿದೆ. ಆದರ ಶಾಖೆಗಳು ದೇಶವನ್ನೆಲ್ಲ ವ್ಯಾಪಿಸಿಕೊಂಡಿವೆ. ಅಸಂಖ್ಯ ಬಂಧುಭಗಿನಿಯರ ಸ್ವಾರ್ಥತ್ಯಾಗದ ಹೂಗಳು ಅದಕ್ಕೆ ಆಗಿವೆ. ಈ ಮರಕ್ಕೆ ಸೇವೆಯಿಂದಲೂ ಸ್ವಾರ್ಥತ್ಯಾಗದಿಂದಲೂ ಪೋಷಣೆಯನ್ನು ಕೊಟ್ಟು ಅದಕ್ಕೆ ಫಲಗಳು ಬಂದು ನಿಸರ್ಗದ ಅಪೇಕ್ಷೆಯಂತೆ ಹಿಂದುಸ್ಥಾನವನ್ನು ಸ್ವತಂತ್ರವಾದ ಸಂಪನ್ನವಾದ ಭೂಮಿಯಾಗುವಂತೆ ಮಾಡುವ ಕಸುವನ್ನು ಕೊಡುವದು ಹಿಂದೆ ಉಳಿದವರ ಕರ್ತವ್ಯವಾಗಿದೆ.

೧೨ನೆಯ ಡಿಸೆಂಬರ ೧೯೩೫ 　　　　 **ರಾಜೇಂದ್ರ ಪ್ರಸಾದ**

# ಕಾಂಗ್ರೆಸಿನ ಕಥೆ

## ಮೊದಲನೆಯ ಭಾಗ

### ರಾಷ್ಟ್ರೀಯ ಜೀವನದ ಪ್ರಾರಂಭವು (೧೮೫೮–೧೮೮೫)

**(೧) ವ್ಹಿಕ್ಟೋರಿಯಾ ಮಹಾರಾಣಿಯ ಜಾಹೀರನಾಮೆ ೧೮೫೮)**:– ೧೮೫೭ ರಲ್ಲಿ ಈಸ್ಟ ಇಂಡಿಯಾ ಕಂಪನಿಯ ಹಿಂದೀ ಸೈನಿಕರು ಹೂಡಿದ ಬಂಡಾಯವು ಶಾಂತವಾದ ನಂತರ ಇನ್ನು ಮುಂದೆ ಹಿಂದುಸ್ಥಾ ದಂತಹ ದೊಡ್ಡ ಸಾಮ್ರಾಜ್ಯವನ್ನು ಒಂದು ವ್ಯಾಪಾರಿ ಕಂಪನಿಯ ವಶ ದಲ್ಲಿರಿಸುವದು ಅಯೋಗ್ಯವೆಂದು ಮನಗಂಡು ಬ್ರಿಟಿಶ ಪಾರ್ಲಮೆಂಟಿನವರು ಬ್ರಿಟಿಶ ಸರಕಾರದ ವಶಕ್ಕೆ ಒಪ್ಪಿಸಿಕೊಟ್ಟರು. ಈ ಮಾತನ್ನು ಉಲ್ಲೇಖಿಸಿ ಪ್ಹಿಕ್ಟೋರಿಯಾ ಮಹಾರಾಣಿಯ ಹೆಸರಿನಿಂದ ತಾ|| ೧ ನೊವ್ಹೆಂಬರ ೧೮೫೮ ರ ಒಂದು ಜಾಹೀರನಾಮೆಯು ಹೊರಡಿಸಲ್ಪಟ್ಟಿತು. ಆ ಜಾಹೀರನಾಮೆ ಯಲ್ಲಿ ಹಿಂದುಸ್ಥಾನದ ರಾಜ್ಯಭಾರವನ್ನು ತಾನು ವಹಿಸಿದ ಸಂಗತಿಯನ್ನು ಹೇಳಿ, ಬಂಡಾಯದಲ್ಲಿ ಭಾಗವಹಿಸಿದವರಿಗೆ ಕ್ಷಮೆಯನ್ನು ತೋರಿಸಬೇ ಕೆಂಬ ಇಚ್ಛೆಯನ್ನು ವ್ಯಕ್ತಮಾಡಿ, ಸಂಸ್ಥಾನಿಕರೊಡನೆ ಕಂಪನಿಯವರು ಮಾಡಿಕೊಂಡ ಒಪ್ಪಂದಗಳನ್ನು ತಾನಾದರೂ ತಪ್ಪದೆ ಕಾಯುವೆನೆಂದು ಅಭಿ ವಚನವನ್ನಿತ್ತು, ಜನರ ಧಾರ್ಮಿಕ ಭಾವನೆಗಳಿಗೆ ಯಾವ ತರದ ಧಕ್ಕೆ ಯನ್ನುಂಟು ಮಾಡದೆ ರಾಜ್ಯವನ್ನು ಸಾಗಿಸುವೆನೆಂದು ಅಭಯವನ್ನು ಮಹಾರಾಣಿಯು ಕೊಟ್ಟಿದ್ದಳು. ಪ್ರಜೆಗಳ ಪರಿಪಾಲನೆಯ ವಿಷಯದಲ್ಲಿ ಈ ಮಾತುಗಳು ಬರೆಯಲ್ಪಟ್ಟಿದ್ದವು:–

"ಹಿಂದುಸ್ಥಾನದ ಪ್ರಜೆಗಳ ವಿಷಯದಲ್ಲಿ ನಾವು ಮಾಡಬೇಕಾದ ಕರ್ತವ್ಯವು ನಮ್ಮ ಉಳಿದ ಪ್ರಜೆಗಳ ವಿಷಯದಲ್ಲಿರುವ ಕರ್ತವ್ಯದಂತೆಯೆ ಇರುವದು; ದೇವರ ದಯೆಯಿಂದ ನಾವು ಆ ನಮ್ಮ ಕರ್ತವ್ಯವನ್ನು ವಿಶ್ವಾ ಸದಿಂದ ಮಾಡುತ್ತ ಹೋಗುವೆವು... ನಮ್ಮ ಪ್ರಜೆಗಳು ಯಾವದೇ

ವಂಶದವರಿರಲಿ ಜಾತಿಯವರಿರಲಿ,ಅವರ ಶಿಕ್ಷಣ ಯೋಗ್ಯತೆ ಮತ್ತು ಪ್ರಾಮಾಣಿಕತೆ ಇವುಗಳಿಗನುಗುಣವಾಗಿ ಯಾವದೇ ತರದ ಪಕ್ಷಪಾತವಿಲ್ಲದೆ ನಿರಾತಂಕವಾಗಿ ನಮ್ಮ ಅಧಿಕಾರದಲ್ಲಿಯ ಹುದ್ದೆಗಳನ್ನು ಕೊಡುವೆವು... ದೇವರ ದಯೆಯಿಂದ ಹಿಂದುಸ್ತಾನದಲ್ಲಿ ವ್ಯಾಪಾರೋದ್ಯೋಗಗಳೂ ಸಾರ್ವಜನಿಕರಿಗೆ ಉಪಯುಕ್ತವಾಗುವ ಕಾರ್ಯಗಳೂ ಮುಂದುವರಿಯುವ ಯೋಜನೆಗಳನ್ನು ಕೈಕೊಳ್ಳಬೇಕೆಂದೂ, ನಮ್ಮ ರಾಜ್ಯದಲ್ಲಿಯ ಎಲ್ಲ ಪ್ರಜೆಗಳಿಗೆ ಸುಖವಾಗುವಂತೆ ಆಡಳಿತೆಯನ್ನು ಸಾಗಿಸಬೇಕೆಂದೂ, ನಮ್ಮ ಉತ್ಕಟ ಇಚ್ಛೆಯಿದೆ. ನಮ್ಮ ಪ್ರಜೆಗಳ ಸುಖದಲ್ಲಿಯೆ ನಮ್ಮ ಕಸುವು, ಅವರ ಸಮಾಧಾನದಲ್ಲಿಯೆ ನಮ್ಮ ಸ್ಥಿರತೆ, ಅವರ ಕೃತಜ್ಞತೆಯಲ್ಲಿಯೆ ನಮ್ಮ ಕಷ್ಟದ ಸಫಲತೆ. ಸರ್ವಶಕ್ತಿವಂತನಾದ ಪರಮೇಶ್ವರನು ಈ ನಮ್ಮ ಆಕಾಂಕ್ಷೆಗಳು ಪ್ರಜೆಗಳಿಗೆ ಹಿತಕರವಾಗಿ ಕೈಗೂಡುವಂತೆ ವರ್ತಿಸುವ ಶಕ್ತಿಯನ್ನು ನಮಗೂ ನಮ್ಮ ಕೈಕೆಳಗಿನ ಅಧಿಕಾರಿಗಳಿಗೂ ದಯಪಾಲಿಸಲಿ!" ರಾಣಿಯ ಜಾಹೀರನಾಮೆಯನ್ನು ಮುಂಬಯಿಯಲ್ಲಿ ಪ್ರಚುರಪಡಿಸಿದಾಗ ಅಲ್ಲಿಯ ನಾಗರಿಕರಲ್ಲಿ ಅಪೂರ್ವವಾದ ಆನಂದವಾಯಿತೆಂದು ದಾದಾಭಾಯಿ ನೌರೋಜಿಯವರು ಹೇಳಿರುವರು. ಮೇಲ್ಕಾಣಿಸಿದ ಜಾಹೀರನಾಮೆಯನ್ನು ಓದಿ ಹಿಂದುಸ್ತಾನದಲ್ಲಿಯ ಅನೇಕರಿಗೆ ಆ ಮೊದಲಿನ ಈಸ್ಟ ಇಂಡಿಯಾ ಕಂಪನಿಯ ಅವ್ಯವಸ್ಥೆಯ ಆಳ್ಕೆಯು ಅಳಿದು ಪ್ರಜೆಗಳಿಗೆ ಹಿತವನ್ನುಂಟು ಮಾಡುವ ಆಳ್ಕೆಯು ಉದಯವಾಗುವದೆಂದು ನಂಬಿಗೆಯಾಗಿರುವದು ಸಾಹಜಿಕವಿದೆ. ಆದರೆ ಜಾಹೀರನಾಮೆಯಲ್ಲಿ ದೇವರಿಗೆ ಮಾಡಿದ ಪ್ರಾರ್ಥನೆಯು ಸುಳ್ಳಾಗಿ ಮನುಷ್ಯಸ್ವಭಾವದಲ್ಲಿ ಅಡಕವಾಗಿರುವ ಸ್ವಾರ್ಥಬುದ್ಧಿಯು ಮೇಲಾಯಿತು. ರಾಣಿಯ ಆಶ್ವಾಸನವು ಮುಂಜಾವಿನ ಮಂಜಿನಂತೆ ಸ್ವಲ್ಪ ಕಾಲದಲ್ಲಿಯೆ ಕರಗಿ ಹೋಯಿತು. ಮುಂದೆ ಲಾರ್ಡ ಲಿಟನರು ಈ ಆಶ್ವಾಸನಗಳನ್ನು ಕುರಿತು, " ಹಿಂದೀ ಜನರ ಈ ವಿಷಯದಲ್ಲಿಯ ಆಸೆಗಳನ್ನು ಪೂರೈಸುವದು ಸಾಧ್ಯವಿದ್ದಿಲ್ಲವೆಂಬುದು ನಮ್ಮೆಲ್ಲರಿಗೆ ಗೊತ್ತಿದೆ; ಅವರಿಗೆ ಇಲ್ಲವೆಂದಾದರೂ ಹೇಳಬೇಕಿತ್ತು; ಇಲ್ಲವೆ ಮೋಸಗೊಳಿಸಬೇಕಿತ್ತು; ಇವೆರಡರಲ್ಲಿ ವಾಮಮಾರ್ಗವನ್ನು ನಾವು ಅನುಸರಿಸಿರುವೆವು " ಎಂದು ಬರೆಯುವ ಪ್ರಸಂಗವು ಬಂದಿತು. ಬ್ರಿಟಿಶ ವ್ಯಾಪಾರಿಗಳು ಹಿಂದುಸ್ತಾನಕ್ಕೆ ಬಂದದ್ದು

ವ್ಯಾಪಾರಕ್ಕಾಗಿ, ಲಾಭಮಾಡಿಕೊಳ್ಳುವದಕ್ಕಾಗಿ; ಪರೋಪಕಾರವನ್ನು ಮಾಡಿ ಪರಮಾರ್ಥವನ್ನು ಸಾಧಿಸಿಕೊಳ್ಳಲಿಕ್ಕಲ್ಲ. ಬಂಡಾಯದಿಂದೆದ್ದ ಬೇಗೆಯನ್ನು ಆರಿಸುವದಕ್ಕಾಗಿ ಆಡಿದ ಮಾತುಗಳೆ ಯಥಾರ್ಥವೆಂದು ತಿಳಿದುಕೊಂಡರೆ ಅದು ನಮ್ಮ ತಪ್ಪಲ್ಲವೆ?

ಮಹಾರಾಣಿಯವರ ಇಚ್ಛೆ ಎಷ್ಟೇ ಒಳ್ಳೆಯದಿದ್ದರೂ ಆ ಇಚ್ಛೆ ಕೂಡಲೆ ಕೈಗೂಡಲಿಲ್ಲವೆನ್ನುವದಂತೂ ನಿಜ.ರಾಜ್ಯಕ್ಕೆ ಮುಖ್ಯ ಆಧಾರವೆಂದರೆ ರಾಜ್ಯದಲ್ಲಿಯ ಸೈನ್ಯವು.ಬಂಡಾಯವು ಮುರಿದ ನಂತರ ಕೇವಲ ಮರಾಠಾ, ಸೀಖ, ಗುರ್ಖಾ,ಅಫಘಾನ ಮುಂತಾದ ಸೈನಿಕ ಜಾತಿಗಳಿಂದಲೆ ಸೈನಿಕರು ಸೇರಿಸಲ್ಪಡಹತ್ತಿದ್ದರು.ಮೊದಲಿನಂತೆ ದೊಡ್ಡ ಹುದ್ದೆಯ ಜಾಗೆಗಳೂ ಹಿಂದೀ ಜನರಿಗೆ ಕೊಡಲ್ಪಡಲಿಲ್ಲ. ತೋಫಖಾನೆಯಲ್ಲಿ ಹೊಸದಾಗಿ ಹಿಂದೀ ಜನರು ಸೇರಿಸಲ್ಪಡಲಿಲ್ಲ. ಮುಂದೆ ಲಾರ್ಡ ಲಿಟನನ ಆಳ್ವಿಕೆಯಲ್ಲಿ ಯಾವದೇ ಹಿಂದೀ ಮನುಷ್ಯನು ಅಪ್ಪಣೆಯಿಲ್ಲದೆ ಬಂದೂಕು ಕತ್ತಿ ಮುಂತಾದ ಆಯುಧಗಳನ್ನು ಹತ್ತಿರದಲ್ಲಿರಿಸಕೂಡದೆಂದು ಕಟ್ಟಳೆಯಾಯಿತು. ೧೮೫೭ ರ ಮೊದಲಿನಂತೆ ದೊಡ್ಡ ಹುದ್ದೆಗಳು (Commissioned officerships) ಹಿಂದೀ ಜನರಿಗೆ ಸಿಕ್ಕದಾದವು. ಸೈನ್ಯದ ಅಧಿಕಾರಗಳ ವಿಷಯದಲ್ಲಿ ಮಹಾರಾಣಿಯವರ ಸಮಾನತೆಯ ಘೋಷಣೆಯು ವಿಫಲವಾಯಿತು.ದೇಶದ ಜನರು ವರುಷವರುಷಕ್ಕೂ ಚಿನ್ನಹವನ್ನು ಮಾಡಿಕೊಂಡರೂ ೧೯೧೭ ರ ವರೆಗೆ ಯಾವ ಹಿಂದೀ ಮನುಷ್ಯನಿಗೂ ಬಾದಶಹನ ಕಮಿಶನ್ನು ದೊರಕಿರಲಿಲ್ಲ; ಆ ವರ್ಷ ಮಾತ್ರ ೯ ಹಿಂದೀ ಜನರು ಕಮೀಶನದ ಅಧಿಕಾರಿಗಳಾಗಿ ನೇಮಿಸಲ್ಪಟ್ಟರು. ಮೇಲ್ಕಾಣಿಸಿದಂತಹ ಕಲಿ-ಜಾತಿಗಳನ್ನುಳಿದು (Martial Races) ಉಳಿದ ಜಾತಿಯವರಿಗೆ ಸೈನ್ಯದಲ್ಲಿ ಆಸ್ಪದವೂ ಇರಲಿಲ್ಲ; ಸ್ವಯಂಸೈನಿಕ ಸೈನ್ಯಗಳನ್ನು ಮಾಡಲು ಅಪ್ಪಣೆಯೂ ಇರಲಿಲ್ಲ; ಅಪ್ಪಣೆಯಿಲ್ಲದೆ ಬಳಿಯಲ್ಲಿ ಆಯುಧಗಳನ್ನಿಡಲೂ ಆಸ್ಪದವಿರಲಿಲ್ಲ.

ಸೈನ್ಯದಲ್ಲಿಯ ದೊಡ್ಡ ಅಧಿಕಾರಗಳ ಸ್ಥಳಗಳಂತೆಯೆ ಉಳಿದ ದೊಡ್ಡ ಅಧಿಕಾರದ ಸ್ಥಳಗಳೂ ಹಿಂದೀ ಜನರಿಗೆ ದೊರಕುತ್ತಿದ್ದಿಲ್ಲ. ವ್ಹಾಯಿಸರಾಯ, ಗವರ್ನರ, ಲೆಫ್ಟಿನೆಂಟ ಗವರ್ನರ, ಹಾಯಕೋರ್ಟ ಜಜ್ಜ ಮುಂತಾದ ದೊಡ್ಡ ಹುದ್ದೆಗಳಂತೂ ಇರಲಿ. ಆದರೆ ಕಲೆಕ್ಟರ, ಡಿಸ್ಟ್ರಿಕ್ಟ ಜಜ್ಜ, ಪೋಲೀಸ

ಸುಪರಿಂಟೆಂಡೆಂಟ ಮುಂತಾದ ಅಧಿಕಾರಿಗಳು ಎಲ್ಲರೂ ಯುರೋಪಿಯನರೆ ಇರುತ್ತಿದ್ದರು. ಕಂಪನಿಯ ಆಳಿಕೆಯಲ್ಲಿ ಡಾಯರೆಕ್ಟರರೆ ಈ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಹಿಂದುಸ್ಥಾನದ ಆಡಳಿತೆಯು ಕಂಪನಿಯ ವಶದಿಂದ ಬ್ರಿಟಿಶ ಸರಕಾರದ ವಶಕ್ಕೆ ಬಂದನಂತರ ೧೮೫೮ರಲ್ಲಿ "ಇಂಡಿಯನ ಸಿವಿಲ ಸರ್ವಿಸ ಆಕ್ಟ" ಎಂಬ ಕಾಯದೆಯು ಪಾಸಾಯಿತು; ಆ ಕಾಯದೆಯಂತೆ ಆಯ. ಸಿ. ಎಸ್. ಪರೀಕ್ಷೆಯು ಲಂಡನದಲ್ಲಿ ಜರುಗಬೇಕೆಂದೂ ಆ ಪರೀಕ್ಷೆಯಲ್ಲಿ ತೇರ್ಗಡೆಯಾದವರೆ ಮೇಲ್ಕಾಣಿಸಿದ ಕಲೆಕ್ಟರ ಡಿಸ್ಟ್ರಿಕ್ಟ ಜಜ್ಜ ಮುಂತಾದ ಅಧಿಕಾರ ಸ್ಥಳಗಳಿಗೆ ನೇಮಿಸಲ್ಪಡಬೇಕೆಂದೂ ಗೊತ್ತಾಯಿತು. ಹಿಂದುಸ್ಥಾನದಿಂದ ಚಿಕ್ಕ ವಯಸ್ಸಿನಲ್ಲಿ ಇಂಗ್ಲಂಡದಂತಹ ದೂರ ದೇಶಕ್ಕೆ ಹೋಗಿ ಅಲ್ಲಿ ೨-೩ ವರುಷಗಳವರೆಗಿದ್ದು ಪರೀಕ್ಷೆ ಪಾಸಾಗಿ ಬರುವದು ಹಿಂದೀ ಜನರಿಗೆ ದುರ್ಘಟವಾದುದರಿಂದ ಸಾಹಜಿಕವಾಗಿಯೆ ಈ ದೊಡ್ಡ ಅಧಿಕಾರಸ್ಥಳಗಳಿಗೆ ಹಿಂದೀ ಜನರು ಎರವಾದಂತಾದರು.

ಹಿಂದುಸ್ಥಾನದ ಆಡಳಿತೆಯು ಬ್ರಿಟಿಶ ಸರಕಾರದ ವಶಕ್ಕೆ ಹೋದ ನಂತರ ರಾಜ್ಯವನ್ನು ದೃಢಪಡಿಸಲು ಅವಶ್ಯವಾದ ಉಳಿದ ಉಪಾಯಗಳೂ ಕೈಕೊಳ್ಳಲ್ಪಟ್ಟವು. ಹಿಂದುಸ್ಥಾನದಲ್ಲಿಯ ಮೊದಲನೆಯ ರೇಲ್ವೆಯ ಸ್ಥಾಪನೆಯು ೧೮೫೩ರಲ್ಲಿ ಆಯಿತು; ಲಾರ್ಡ ಡಾಲಹೌಸಿಯು ಒಳ್ಳೆ ಜೋರಿನಿಂದ ರೇಲ್ವೆಯ ಅವಶ್ಯಕತೆಯನ್ನು ಪ್ರತಿಪಾದಿಸಿದ್ದನು; ಆದರೆ ಬಂಡಾಯದ ಧಕ್ಕೆ ತಗಲುವವರೆಗೆ ಸರಕಾರದವರು ಈ ವಿಷಯದಲ್ಲಿ ಮನಸ್ಸು ಮಾಡಲಿಲ್ಲ. ೧೮೫೮ರ ತರುವಾಯ ರೇಲ್ವೆಯ ಕೆಲಸವು ಒಳ್ಳೆ ರಭಸದಿಂದ ಕೈಕೊಳ್ಳಲ್ಪಟ್ಟಿತು. ಪೋಸ್ಟು ತಾರಾಯಂತ್ರಗಳೂ ಬಂದವು. ಇವೆಲ್ಲ ಸೌಕರ್ಯಗಳು ಸರಕಾರಕ್ಕೆ ಬೇಕಾದಂತೆ ಜನರಿಗೂ ಬೇಕಾದವೆಂದೆನಿಸಿದವು. ಕಂಪನಿಯ ವಶಕ್ಕೆ ರಾಜ್ಯವಿರುವಾಗಲೆ ಹಿಂದೀ ಜನರಿಗೆ ಇಂಗ್ಲಿಷ ಶಿಕ್ಷಣವನ್ನು ಕೊಡಬೇಕೋ ಬೇಡವೊ ಎಂಬುದನ್ನು ಕುರಿತು ಒಳ್ಳೆ ನಿಕರದ ವಾದವಾಗಿತ್ತು. ಕಂಪನಿಯ ರಾಜ್ಯವು ಸುರಕ್ಷಿತವಾಗಿ ಸಾಗಬೇಕಾದರೆ ಇಂಗ್ಲಿಷಬಲ್ಲ ಹಿಂದೀ ನೌಕರರ ಅವಶ್ಯಕತೆಯಿತ್ತು; ಆದರೆ ಹಿಂದೀ ಜನರಿಗೆ ಇಂಗ್ಲಿಷ ಶಿಕ್ಷಣವನ್ನು ಕೊಟ್ಟರೆ ಅವರು ಮುಂದೆ ಸ್ವರಾಜ್ಯದ ಹಕ್ಕುಗಳನ್ನು ಬೇಡಬಹುದೆಂದು ಒಂದು ಪಕ್ಷದವರು ಪ್ರತಿಪಾದಿಸುತ್ತಿದ್ದರು. ಕೊನೆಗೆ

ಲಾರ್ಡ ಮೆಕಾಲೆ, ಮತ್ತು ರಾಮ ಮೋಹನರಾಯರ ಪ್ರಯತ್ನದಿಂದ ಹಿಂದೀ ಜನರಿಗೆ ಇಂಗ್ಲಿಷ ಪದ್ಧತಿಯ ಶಿಕ್ಷಣವನ್ನು ಕೊಡಬೇಕೆಂದೂ ಶಿಕ್ಷಣಕಾರ್ಯಕ್ಕಾಗಿ ಕನಿಷ್ಠ ೧ ಲಕ್ಷ ರೂಪಾಯಿಗಳನ್ನು ಕಂಪನಿಯವರು ವೆಚ್ಚ ಮಾಡಬೇಕೆಂದೂ ೧೮೩೫ರಲ್ಲಿ ಗೊತ್ತಾಯಿತು. ಈ ಮೊದಲೆ ಮುಂಬಯಿಯಲ್ಲಿ "ಎಲ್ಫಿನ್ಸ್ಟನ ಇನ್ಸ್ಟಿಟ್ಯೂಶನ" ಎಂಬ ಸಂಸ್ಥೆಯೂ (೧೮೨೮), ಪುಣೆಯಲ್ಲಿ "ಪೂನಾ ಸಂಸ್ಕೃತ ಕಾಲೇಜ" (೧೮೨೧) ಎಂಬ ಸಂಸ್ಥೆಯೂ ಸ್ಥಾಪಿಸಲ್ಪಟ್ಟಿದ್ದವು; ಇವೆ ಮುಂದೆ ಎಲ್ಫಿನಸ್ಟನ ಕಾಲೇಜ ಮತ್ತು ಡೆಕ್ಕನ ಕಾಲೇಜುಗಳಾದವು. ದೇಶೀ ದರಬಾರಗಳಿಂದ ಸಂಸ್ಕೃತ ವಿದ್ಯೆಗೆ ದೊರೆಯುತ್ತಿರುವ ಉತ್ತೇಜನವು ನಿಂತು ಹೋಯಿತು. ಹಿಂದುಸ್ತಾನವು ಮುಂದೆ ಬ್ರಿಟಿಶ ಸರಕಾರದ ವಶಕ್ಕೆ ಹೋದನಂತರ ಕೂಡಲೆ ಮುಂಬಯಿ (೧೮೫೭), ಕಲಕತ್ತೆ (೧೮೫೮), ಮದ್ರಾಸ, ಅಲಹಾಬಾದ (೧೮೮೨), ಲಾಹೋರ (೧೮೮೨) ಇವೆಲ್ಲ ಪಟ್ಟಣಗಳಲ್ಲಿ ವಿಶ್ವವಿದ್ಯಾಲಯಗಳು ಸ್ಥಾಪಿಸಲ್ಪಟ್ಟು ಉಚ್ಚತರಗತಿಯ ಶಿಕ್ಷಣವು ಕೊಡಲ್ಪಡಹತ್ತಿತು.

(೨) **ಮೊದಲಿನ ರಾಜ್ಯಘಟನೆ:—** (೧೮೫೮-೧೮೯೨) ಸಿಪಾಯರ ಬಂಡಾಯವನ್ನು ಮುರಿದನಂತರ ಆಗಿನ ವ್ಹಾಯಿಸರಾಯರಾಗಿದ್ದ ಲಾರ್ಡ ಕ್ಯಾನಿಂಗರ ಮನಸ್ಸು ಪೂರ್ಣವಾಗಿ ಆಡಳಿತೆಯನ್ನು ಸ್ಥಿರಪಡಿಸುವದರಲ್ಲಿಯೆ ತೊಡಗಿತು. ಪಿನಲ್‌ಕೋಡ, ಮತ್ತು ಕ್ರಿಮಿನಲ್ ಪ್ರೊಸಿಜರಕೋಡ ಇವೆರಡು ತಯಾರಿಸಲ್ಪಟ್ಟವು. ೧೮೬೧ರಲ್ಲಿ ಪಾಸು ಮಾಡಿದ ಇಂಡಿಯಾ ಕೌನ್ಸಿಲ್ ಆಕ್ಟದಂತೆ ಹಿಂದುಸ್ಥಾನದ ಆಡಳಿತೆಯ ಎಲ್ಲ ಹೊಣೆಯು ಗವ್ಹರ್ನರ ಜನರಲನಿಗೂ ಮತ್ತು ಅವನಿಂದ ನೇಮಿಸಲ್ಪಟ್ಟ ೫ ಜನ ಕಾರ್ಯಕಾರೀ ಸಭಾಸದರಿಗೂ ಒಪ್ಪಿಸಲ್ಪಟ್ಟಿತ್ತು. ಕಾಯದೆಗಳನ್ನು ಮಾಡಲು ಕಾರ್ಯಕಾರೀ ಮಂಡಲದ ಸಭಾಸದರ ಜೊತೆಗೆ ಗವ್ಹರ್ನರ ಜನರಲ್‌ನು ೬ಕ್ಕೆ ಕಡಿಮೆಯಾಗದೆ ೧೨ಕ್ಕೆ ಮಿಕ್ಕದಷ್ಟು ಸಭಾಸದರನ್ನು ಸೇರಿಸಿಕೊಳ್ಳಬೇಕೆಂದು ಗೊತ್ತಾಯಿತು. ಹೆಚ್ಚಿಗೆ ನೇಮಿಸಲ್ಪಟ್ಟ ಈ ಸಭಾಸದರಲ್ಲಿ ಅರ್ಧದಷ್ಟಾದರೂ ಸರಕಾರಿ ನೌಕರರು ಅಲ್ಲದವರು ಇರಬೇಕೆಂದು ಗೊತ್ತಾಯಿತು.ಆದರೆ ಇವರೆಲ್ಲರೂ ಗವರ್ನರಜನರಲನಿಂದಲೇ ನೇಮಿಸಲ್ಪಟ್ಟವರಾದುದರಿಂದ ಯಾವದೇ ಮಾತಿನಲ್ಲಿ ಸರಕಾರದ ವಿರುದ್ಧವಾಗಿ ಅಭಿಪ್ರಾಯವನ್ನು

ಕೊಡುವ ಧೈರ್ಯವು ಇವರಿಗೆ ಇರುತ್ತಿರಲಿಲ್ಲ. ಗವ್ಹರ್ನರ ಜನರ ಲರು ತನಗೆ ಅವಶ್ಯ ಕಂಡಾಗ ಬೇಕಾದ ಆರ್ಡಿನನ್ಸನ್ನು ಹೊರಡಿಸುವ ಅಧಿಕಾರವು ಅವರಿಗೆ ಕೊಡಲ್ಪಟ್ಟಿತು. ಮದ್ರಾಸ ಮತ್ತು ಮುಂಬಯಿ ಈ ಇಲಾಖೆಗಳಲ್ಲಿ ಕಾಯುದೆಗಳನ್ನು ಮಾಡಲಿಕ್ಕೆ ಆಯಾ ಪ್ರಾಂತಗಳ ಗವ್ಹರ್ನರನೂ ಮೂರು ಮಂದಿ ಕಾರ್ಯಕಾರೀ ಮಂಡಲದ ಸಭಾಸದರೂ ಆ ಪ್ರಾಂತದ ಅಡ್ವೋಕೇಟ ಜನರಲ ಮತ್ತು ನಾಲ್ಕಕ್ಕೆ ಕಡಿಮೆಯಾಗದೆ ಎಂಟಕ್ಕೆ ಮೀರದಷ್ಟು ಗವ್ಹರ್ನರಿನಿಂದ ನೇಮಿಸಲ್ಪಟ್ಟ ಸಭಾಸದರೂ ಕೂಡಿ ಒಂದು ಕಾಯುದೇ ಕೌನ್ಸಿಲು ಏರ್ಪಡಿಸಲ್ಪಡಬೇಕೆಂದು ಗೊತ್ತಾಯಿತು. ಪ್ರಾಂತಿಕ ಕಾಯುದೆಮಂಡಲಗಳು ಪಾಸು ಮಾಡಿದ ಕಾಯುದೆಗೆ ಆಯಾ ಪ್ರಾಂತದ ಗವರ್ನರ ಮತ್ತು ಹಿಂದುಸ್ತಾನದ ಗವರ್ನರ ಜನರಲ ಇವರಿಬ್ಬರ ಸಮ್ಮತಿಯು ಅವಶ್ಯವಿತ್ತು. ಬಂಗಾಲಕ್ಕೂ ಇದೇ ತರದ ಕಾಯುದೆ ಕೌನ್ಸಿಲ್ಲನ್ನು ಗವರ್ನರ ಜನರಲ್‌ರು ಏರ್ಪಡಿಸಬೇಕೆಂದು ಗೊತ್ತಾಯಿತು. ವಾಯುವ್ಯಪ್ರಾಂತ ಅಂದರೆ ಈಗಿನ ಸಂಯುಕ್ತಪ್ರಾಂತ ಮತ್ತು ಪಂಜಾಬ ಇವುಗಳಿಗಾದರೂ ಯೋಗ್ಯವೆನಿಸಿದಾಗ ಇದೇ ತರದ ಕೌನ್ಸಿಲು ಏರ್ಪಡಿಸುವ ಅಧಿಕಾರವು ಗವರ್ನರಜನರಲ್‌ನಿಗೆ ಕೊಡಲ್ಪಟ್ಟಿತು. ಈ ಘಟನೆಯಂತೆ ಕಾಯುದೆಮಂಡಲಗಳಲ್ಲಿ ಕೆಲವು ಸರಕಾರೇತರ ಸಭಾಸದರು ಇರಬಹುದಾಗಿದ್ದರೂ ಅವರು ಲೋಕಮತದ ನಿಜವಾದ ಪ್ರತಿನಿಧಿಗಳೆಂದು ಹೇಳಲಿಕ್ಕೆ ಬರುವಂತಿದ್ದಿಲ್ಲ. ಇದೆ ರಾಜ್ಯಘಟನೆಯೆ ೧೮೯೨ರ ವರೆಗೆ ನಿರಾತಂಕವಾಗಿ ಸಾಗಿತು.

**(೩) ಸುಶಿಕ್ಷಿತರ ಅವನತಿ:—** ಹೊಸ ಶಿಕ್ಷಣವನ್ನು ಪಡೆದವರ ಮನೋವೃತ್ತಿಯು ಹೇಗಿತ್ತೆಂಬುದನ್ನು ಲಾಲಾಲಜಪತರಾಯರು ಒಳ್ಳೇ ಮನೋವಿಧವಾಗಿ ವರ್ಣಿಸಿರುವರು. "ಬಂಡಾಯುದನಂತರ ಆಡಳಿತೆಯನ್ನು ಸ್ಥಿರಪಡಿಸುವ ಕಾರ್ಯದಲ್ಲಿ ಇಂಗ್ಲಿಷಕಲಿತ ಈ ಜನರ ಕರ್ತೃತ್ವ ಶಕ್ತಿಗೆ ಅವಕಾಶವುಂಟಾಗಿತು. ಇಂಗ್ಲೀಷ ಕಲಿತವರು ಇಂಗ್ಲಿಷ ಕಲಿಯದೆ ಇದ್ದವರ ಮುಂದೆ ಹೋದರು. ಇಂಗ್ಲಿಷ ಕಲಿತವರಾದರೂ ಬಹಳೇ ಸ್ವಲ್ಪ ಜನರಿದ್ದರು. ಇಂಗ್ಲಿಷ ಭಾಷೆಯ ಜ್ಞಾನವಿದ್ದ ಅಧಿಕಾರಸ್ಥಳಗಳು ಬಹಳವಾದವು. ಆದುದರಿಂದ ಇಂಗ್ಲಿಷ ಭಾಷೆಯನ್ನು ಕಲಿತ ಹಿಂದೀ ಜನರು

ದೊಡ್ಡ ದೊಡ್ಡ ಸ್ಥಳಗಳನ್ನು ಆಕ್ರಮಿಸಿ ಸುಖಿಗಳಾದರು. ಇಡೀ ಉತ್ತರ ಹಿಂದುಸ್ಥಾನದಲ್ಲೆಲ್ಲ ಬಂಗಾಲೀ ಸುಶಿಕ್ಷಿತರು ಪಸರಿಸಿದರು. ಆಡಳಿತೆಯ ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿಯೂ ಅವರೆ ಮುಂದಾದರು. ಜನರಿಗೂ ಸರಕಾರದವರಿಗೂ ಅವರೆ ಮಾರ್ಗದರ್ಶಕರಾಗಿದ್ದರು. ಸರಕಾರದಿಂದ ದೊರೆತ ಮಾನಮರ್ಯಾದೆಯಿಂದ ಅವರು ಸರಕಾರದಲ್ಲಿ ಒಳ್ಳೇ ಪೂಜ್ಯ ಬುದ್ಧಿಯುಳ್ಳವರಾದರು. ಈ ದೇಶೀ ಅಧಿಕಾರಿಗಳು ಒಳ್ಳೆ ಬುದ್ಧಿವಂತ ರಾದುದರಿಂದ ಬ್ರಿಟಿಶ ಅಧಿಕಾರಿಗಳ ಕೆಲಸವಾದರೂ ಹಗುರಾಯಿತು. ಹಿಂದೀ ಅಧಿಕಾರಿಗಳು ಯುರೋಪೀಯನ್ನರನ್ನು ತಾಯಿತಂದೆಗಳಂತೆ ಪೂಜಿ ಸಿದರು. ಮಾತು ಮಾತಿನಲ್ಲಿಯೂ ಅವರ ಅನುಕರಣವನ್ನು ಮಾಡಿದರು. ಅವರ ಜೀವನವು ಅವರ ಉಡುಪು ತೊಡುಪು ಇಂಗ್ಲಿಷರಂತೆಯೇ ಆಯಿತು. ಇಂಗ್ಲೀಷ ವಾಙ್ಮಯ ಮತ್ತು ಇಂಗ್ಲಿಷ ವಿಚಾರ ಇವು ಈ ಸುಶಿಕ್ಷಿತ ಜನರಿಗೆ ಪ್ರಿಯವಾದವು. ಈ ರೀತಿ ಬಂಗಾಲಿ ಜನರ ಮೊದಲನೇ ಸುಶಿಕ್ಷಿತ ಪೀಳಿಗೆಯು ಪೂರ್ಣ ಇಂಗ್ಲಿಷಮಯವಾಗಿ ಹೋಯಿತು. ''
ಅವರು ತಮ್ಮ ಧರ್ಮವನ್ನು ಕೀಳುಗಳೆದರು; ತಮ್ಮ ಸಮಾಜವನ್ನು ತುಚ್ಛೀ ಕರಿಸಿದರು; ತಮ್ಮ ಹಳೆಯ ಇತಿಹಾಸವನ್ನು ಮರೆತು ಬೂಟು ಪಾಟ್ಲೂನು ಗಳನ್ನು ಹಾಕಿ ಸಾಹೇಬರಾದರು. ಕೆಲವರು ಕ್ರಿಶ್ಚನ್ನ ಧರ್ಮವನ್ನು ಸ್ವೀಕ ರಿಸಿದರು. ಈ ಮೊದಲೇ ಈ ಪ್ರವೃತ್ತಿಯನ್ನು ಕಂಡು ರಾಮ ಮೋಹನ ರಾಯರಂಥವರು ಸ್ವಧರ್ಮದ ರಕ್ಷಣೆಗಾಗಿ ಪ್ರಯತ್ನವನ್ನು ಮಾಡಿದ್ದರು. ಆದರೂ ಆ ಪ್ರಯತ್ನಗಳು ಯಶಸ್ವಿಯಾಗಲಿಲ್ಲ. ಇನ್ನೂ ಅನುಕರಣವೃ ತ್ತಿಯು ಹಾಗೆಯೆ ನಿರಾತಂಕವಾಗಿ ನಡೆಯಿತು. ಇಂಗ್ರೀಷರು ವರ್ತಮಾನ ಪತ್ರಗಳನ್ನು ಓದುತ್ತಿದ್ದರೆಂದು ಹಿಂದೀ ಜನರು ಓದಹತ್ತಿದರು. ಇಂಗ್ಲಿಷ ಜನರಂತೆ ನಮ್ಮ ಜನರೂ ಕ್ಲಬ್ಬುಗಳನ್ನು ಏರ್ಪಡಿಸಿಕೊಂಡರು. ಹಿಂದು ಸ್ಥಾನದ ಯಾವ ಮಾತಾದರೂ ಈ ಸುಶಿಕ್ಷಿತರಿಗೆ ಬೇಡಾಯಿತು. ಹಿಂದೀ ಜನರೆಂದರೆ ಕಾಡು ಜನರು; ಅವರ ಧರ್ಮವೆಂದರೆ ಒಂದು ಅಂಧಶ್ರದ್ಧೆಯ ಮೊಟ್ಟೆ; ಹಿಂದೀ ಜನರೆಂದರೆ ಸಂಕುಚಿತ ದೃಷ್ಟಿಯ ಧರ್ಮಗೇಡಿಗಳು ಎಂದು ಈ ಬಿಳಿ ಛಾಯೆಯವರ ಕಲ್ಪನೆಯಾಯಿತು. ಆದರೆ ಇಷ್ಟೆಲ್ಲ ಅನುಕರಣ ವನ್ನು ಮಾಡಿದರೂ ರಾಜ್ಯದಾಡಳಿತೆಯ ವಿಷಯದಲ್ಲಿ ತಮ್ಮನ್ನು ಇಂಗ್ಲಿಷ

ಅಧಿಕಾರಿಗಳು ಕೇಳುಗಳೆಯುತ್ತಾರೆಂಬ ಮಾತು ಅವರ ಲಕ್ಷ್ಯಕ್ಕಾದರೂ ಸ್ವಲ್ಪ ವರ್ಷಗಳಲ್ಲಿಯೇ ಬಂದಿತು. ಎಲ್ಲ ಮಾತಿನಂತೆಯೂ ರಾಷ್ಟ್ರೀಯ ಅವನತಿಯಾದರೂ "ನೀಚೈರ್ಗಚ್ಛತ್ಯುಪರಿಚದಶಾಂ ಚಕ್ರನೇಮಿಕ್ರಮೇಣ" ಈ ಸೃಷ್ಟಿ ನಿಯಮವನ್ನೆ ಅನುಸರಿಸಿತು. ಪಾಶ್ಚಿಮಾತ್ಯ ಜನರ ವಾಙ್ಮಯದಿಂದ ಮೆಲ್ಲಗೆ ಕೆಲ ಕೆಲವರ ಮನಸ್ಸಿನಲ್ಲಿ ಜಾಗೃತಿಯು ಉಂಟಾಗಿತು. ಜನರಲ್ಲಿ ಸ್ವಾತಂತ್ರ್ಯ ಮತ್ತು ರಾಷ್ಟ್ರೀಯತೆಯ ಭಾವನೆಗಳು ಪಸರಿಸಿದವು. ಮಿಶನರಿಗಳು ಹೂಡಿದ ಏರಾಟದ ಮೇಲಿಂದ ಹಿಂದೀ ಜನರು ತಮ್ಮ ಧರ್ಮ ಮತ್ತು ಸಂಸ್ಕೃತಿಯ ವಿಷಯಕ್ಕೆ ಹೆಚ್ಚು ವಿಚಾರವನ್ನು ಮಾಡತೊಡಗಿದರು. ಬಂಗಾಲದಲ್ಲಿ ದೇವೇಂದ್ರನಾಥ ಟಾಗೋರ, ರಾಜೇಂದ್ರಲಾಲ ಮಿತ್ರ, ಮಹಾರಾಷ್ಟ್ರದಲ್ಲಿ ರಾನಡೆ, ವಿಷ್ಣು ಪಂಡಿತ, ಉತ್ತರ ಹಿಂದುಸ್ಥಾನದಲ್ಲಿ ಸ್ವಾಮಿ ದಯಾನಂದ ಮತ್ತು ಸಯ್ಯದ ಅಹಮ್ಮದ, ಮದ್ರಾಸಿನಲ್ಲಿ ಮ್ಯಾಡೆಮ್ ಬ್ಲ್ಯಾವ್ಹಟ್ಸ್ಕಿ ಮತ್ತು ಥಿಯೊಸೊಫಿ ಪಂಥಕ್ಕೆ ಸೇರಿದವರು ಹಳೆಯ ಸಂಸ್ಕೃತಿಯ ವಿಷಯಕ್ಕೆ ತೇಜಸ್ವಿ ಬರಹಗಳಿಂದ ಹೊಸ ಜಾಗೃತಿಯನ್ನುಂಟುಮಾಡಿದರು. ಆನಿಬೆಝಾಂಟ ಮತ್ತು ಸ್ವಾಮಿ ವಿವೇಕಾನಂದರು ತಮ್ಮ ಅಮೋಘವಾದ ವಾಣಿಯಿಂದ ಈ ಜಾಗೃತಿಯನ್ನೇ ದೃಢಪಡಿಸಿದರು. ಬ್ರಹ್ಮೋಸಮಾಜ, ಥಿಯಾಸೊಫಿಕಲ್-ಸೊಸಾಯಿಟಿ, ಬಂಗಾಲ ಸಾಹಿತ್ಯ ಪರಿಷತ್ತು, ಮಹಾರಾಷ್ಟ್ರ ಸಭೆ, ಆರ್ಯಸಮಾಜ ಸನಾತನ ಸಭೆ, ಈ ತರದ ಸಂಸ್ಥೆಗಳು ಜಾಗೃತಿಯ ಕಾರ್ಯವನ್ನು ದೃಢಪಡಿಸಿದವು.

ಹಿಂದೀ ಜನರಲ್ಲಿ ಇಂಗ್ಲಿಷತರದ ಶಿಕ್ಷಣಪದ್ಧತಿಯು ಪ್ರಾರಂಭವಾದ ಹಾಗೆಯೆ ಇಂಗ್ಲಿಷ ತರದ ಚಟುವಟಿಕೆಗಳೂ ತಲೆದೋರಹತ್ತಿದವು. ೧೮೫೧ರಲ್ಲಿ ಬ್ರಿಟಿಶ ಇಂಡಿಯನ ಅಸೋಸಿಯೇಶನ ಎಂಬ ಸಂಸ್ಥೆಯು ಸ್ಥಾಪಿಸಲ್ಪಟ್ಟಿತು. ರಾಜೇಂದ್ರಲಾಲ ಮಿತ್ರ, ಕ್ರಿಸ್ಟೊದಾಸ ಪಾಲ ಮುಂತಾದವರ ನೇತೃತ್ವದಲ್ಲಿ ಅದು ತನ್ನ ಕಾರ್ಯವನ್ನು ಸಾಗಿಸಿತು. ಆದರೆ ಅದು ಮುಖ್ಯವಾಗಿ ಜಮೀನುದಾರರ ಸಂಸ್ಥೆಯಾಗಿದ್ದರಿಂದ ಅದರ ಕಾರ್ಯಕ್ರಮವು ಸಾಮಾನ್ಯ ಜನರಿಗೆ ವಿಶೇಷವಾಗಿ ಸಂಬಂಧಿಸಿದಂತಹದಿರಲಿಲ್ಲ; ಸರಕಾರದವರು ಹೊಸದೊಂದು ಕಾಯದೆ-ಕಾನೂನು ಮಾಡುವ ಕಾಲದಲ್ಲಿ ಬ್ರಿಟಿಶ

ಇಂಡಿಯನ ಅಸೋಸಿಯೇಶನದವರು ತಮ್ಮ ಸೂಚನೆಗಳನ್ನೂ ಅಭಿಪ್ರಾಯ ವನ್ನೂ ವ್ಯಕ್ತಪಡಿಸುತ್ತಿದ್ದರು. ಇತ್ತ ಮುಂಬಯಿಯಲ್ಲಿಯೂ ಬಾಂಬೆ ಅಸೋಶಿಯೇಶನ ಎಂಬ ಸಂಸ್ಥೆಯು ಹೊರಟಿತ್ತು. ಮದ್ರಾಸದ ಮಹಾಜನ ಸಭೆಯು ೧೮೮೪ರಲ್ಲಿ ಸ್ಥಾಪಿಸಲ್ಪಟ್ಟಿತು. ಪುಣೆಯಲ್ಲಿ ಸಾರ್ವಜನಿಕ ಸಭೆಯೂ ಮಹಾದೇವ ಗೋವಿಂದ ರಾನಡೆಯವರ ನೇತೃತ್ವದಲ್ಲಿ ೧೮೭೦ರಲ್ಲಿ ಸ್ಥಾಪಿ ಸಲ್ಪಟ್ಟಿತ್ತು. ಇವೆಲ್ಲ ಸಂಸ್ಥೆಗಳ ಮುಖಾಂತರವಾಗಿ ಹಿಂದೀ ಸಾರ್ವಜನಿಕ ಜೀವನದ ಬೀಜವು ಬಿತ್ತಲ್ಪಟ್ಟಿತ್ತು. ೧೮೭೬ರಲ್ಲಿ ಕಲ್ಕತ್ತೆಯಲ್ಲಿ ಇಂಡಿಯನ ಅಸೋಶಿಯೇಶನ ಎಂಬ ಸಂಘವನ್ನು ಸುರೇಂದ್ರನಾಥ ಬ್ಯಾನರ್ಜಿಯವರು ಹೊರಡಿಸಿದರು. ಈ ಸಂಸ್ಥೆಗಳ ಸಭೆಗೆ ಮುಖ್ಯವಾಗಿ ಸುಶಿಕ್ಷಿತ ಪ್ರಮುಖರು ಬರುತ್ತಿದ್ದರು; ಆದರೂ ಸಾರ್ವಜನಿಕ ಅಸಂತೋಷಕ್ಕೆ ಯೋಗ್ಯವಾದ ಮಾರ್ಗವು ಒಡೆದಂತಾಗಿ ಸುಶಿಕ್ಷಿತ ಜನರು ಒಂದೆಡೆಗೆ ಸೇರಿ, ಜನತೆಗೆ ಯಾವುದು ಹಿತಕರವು ಯಾವುದು ಅಹಿತಕರವು ಎಂಬುದರ ಚರ್ಚೆಯು ಸಾರ್ವಜನಿಕರೀತಿಯಲ್ಲಿ ನಡೆಯಲು ಪ್ರಾರಂಭವಾಯಿತು.

**(೪) ಬ್ರಿಟಿಶ ರಾಜ್ಯದ ಮೊದಲಿನ ಆಳ್ಕೆ (೧೮೫೮-೧೮೮೫):-** ಆದರೆ ಹಿಂದುಸ್ಥಾನದಲ್ಲಿ ರಾಜಕೀಯ ಜಾಗೃತಿಯು ಆಗಬೇಕಿದ್ದರೆ ರಾಜ ಕೀಯ ಅಸಂತೋಷವೆ ಉಂಟಾಗಬೇಕಾಗಿತ್ತು. ಲಾರ್ಡ ಕ್ಯಾನಿಂಗನ ಆಳಿಕೆಯಲ್ಲಿ ಬಂಗಾಲದ ಕೆಲವು ಭಾಗಗಳಲ್ಲಿ ವಿಶೇಷವಾಗಿ ನದಿಯಾ ಜಿಲ್ಹೆ ಯಲ್ಲಿ ನೀಲಿಯನ್ನು ಬೆಳೆಸುವ ಯುರೋಪಿಯನ್ ಜಮೀನದಾರರಿಗೂ ಬಂಗಾಲಿ ರೈತರಿಗೂ ತಿಕ್ಕಾಟವಾಯಿತು. ಕೆಲವು ಕಡೆಗೆ ದಂಗೆಗಳು ಆದವು. ನೀಲದರ್ಪಣವೆಂಬ ಬಂಗಾಲಿ ನಾಟಕದಲ್ಲಿ ದೀನಬಂಧು ಮಿತ್ರರೆಂಬವರು ಈ ಜಮೀನದಾರರ ಅನ್ಯಾಯದ ಚಿತ್ರಗಳನ್ನು ಒಳ್ಳೆ ಕುಶಲತೆಯಿಂದ ಬಣ್ಣಿಸಿದರು. ಆ ನಾಟಕದಿಂದ ಜನರಲ್ಲಿ ಕ್ಷೋಭವು ಉಂಟಾಯಿತು, ಅದರ ಭಾಷಾಂತರವನ್ನು ಇಂಗ್ಲಿಷದಲ್ಲಿ ಮಾಡಿದವರಿಗೆ ದಂಡವೂ ಶಿಕ್ಷೆಯೂ ವಿಧಿಸಲ್ಪಟಿತು. ಆದರೆ ಈ ತರದ ಅನ್ಯಾಯಗಳ ವಿಷಯಕ್ಕೆ ಚರ್ಚೆ ಮಾಡು ವಂಥ ಯಾವ ಸಂಸ್ಥೆಯೂ ಆಗ ಇರಲಿಲ್ಲ. ೧೮೬೧ರಲ್ಲಿ ಆಗ್ರಾ ಪಂಜಾಬ ರಜಪುತಾನಾ ಮತ್ತು ಕಚ್ಛ ಇವೆಲ್ಲ ಪ್ರಾಂತಗಳಲ್ಲಿ ದೊಡ್ಡ ಬರಗಾಲ

ವಾಯಿತು. ಆದರ ವ್ಯವಸ್ಥೆಯು ಹೇಗಾಯಿತೆಂಬದನ್ನು ಯಾರೂ ವಿಚಾರಿಸ ಲಿಲ್ಲ.

ಲಾರ್ಡ ಕ್ಯಾನಿಂಗರ ನಂತರ ಲಾರ್ಡ ಎಲಜಿನರು ೧೮೬೨ರ ಮಾರ್ಚ ದಲ್ಲಿ ವ್ಹಾಯಿಸರಾಯರಾದರು. ಆದರೆ ಅದೆ ವರ್ಷ ನವ್ಹಂಬರದಲ್ಲಿ ಅವರು ತೀರಿಹೋಗಿ ಅವರ ನಂತರ ಸರ ಜಾನ್ ಲಾರೆನ್ಸರು ವ್ಹಾಯಿಸರಾಯರಾಗಿ ಬಂದರು. ಅವರ ಆಳಿಕೆಯಲ್ಲಿ ಸಂಸ್ಥಾನಿಕರನ್ನು ಸಂತೋಷಪಡಿಸಬೇಕೆಂದು ಸಂಸ್ಥಾನಿಕರ ದತ್ತಕ ಸಂತತಿಯು ರಾಜ್ಯಕ್ಕೆ ಬಾಧ್ಯವಾಗುವದೆಂದು ಬ್ರಿಟಿಶ ಸರಕಾರದವರು ಸಾರಿದರು. ಅದೂ ಅಲ್ಲದೆ ಆ ಮೊದಲಿಗೆ ಸಂಸ್ಥಾನಿಕರಿಗೆ ಈಸ್ಟ ಇಂಡಿಯಾ ಕಂಪನಿಯವರಿಂದ ಸಲ್ಲಬೇಕಾಗಿದ್ದ ಮಾನಮರ್ಯಾದೆ ಗಳಿಗೆ ಯಾವ ಆತಂಕವನ್ನೂ ಉಂಟುಮಾಡುವದಿಲ್ಲೆಂದು ಮಹಾರಾಣಿಯ ವರು ಜಾಹೀರ ಪಡಿಸಿದರು. ೧೮೬೫ರಲ್ಲಿ ಮಳೆ ಸಾಕಷ್ಟು ಬೀಳಲಿಲ್ಲ. ಆದು ದರಿಂದ ಓಡಿಸಾಪ್ರಾಂತದಲ್ಲಿಯೂ, ಕಲಕತ್ತೆಯಿಂದ ಮದ್ರಾಸದವರೆಗೆ ಸಮುದ್ರದ ದಂಡೆಗುಂಟ ಇರುವ ಪ್ರದೇಶದಲ್ಲಿಯೂ, ಛೋಟಾನಾಗಪೂರ ದಲ್ಲಿಯೂ ದೊಡ್ಡ ಬರಗಾಲವು ಬಿದ್ದಿತು.ಬರಗಾಲದ ಸ್ವರೂಪವು ಓಡಿಸಾ ಪ್ರಾಂತದಲ್ಲಿಯಂತೂ, ಬಹಳ ಭೀಕರವಾಗಿದ್ದಿತು. ಸರಕಾರದಿಂದ ತಕ್ಕ ವ್ಯವಸ್ಥೆ ಆಗದ್ದರಿಂದ ಆ ಒಂದೆ ಪ್ರಾಂತದಲ್ಲಿ ಹತ್ತು ಲಕ್ಷ ಜನರು ಸಾವಿಗೆ ತುತ್ತಾದರು.

ಸರಜಾನ ಲಾರೆನ್ಸರ ನಂತರ ಲಾರ್ಡ ಮೇಯೋ ಇವರು ವ್ಹಾಯಿಸ ರಾಯರಾದರು(೧೮೬೯)– ಇವರು ಅಫಗಾನಿಸ್ಥಾನದೊಡನೆ ಸ್ನೇಹಸಂಬಂಧ ವನ್ನು ಬೆಳಿಸಿದರು. ಇವರ ಆಳಿಕೆಯ ವೇಳೆಯಲ್ಲಿಯೆ ವ್ಹಿಕ್ಟೋರಿಯಾ ಮಹಾರಾಣಿಯವರ ಎರಡನೆಯ ಮಗನಾದ ಡ್ಯೂಕ ಆಫ್ ಎಡಿನಬರೋ ಇವನು ಹಿಂದುಸ್ಥಾನಕ್ಕೆ ಬಂದು ಹೋದನು. ಲಾರ್ಡಮೇಯೋ ಇವರು ೧೮೭೨ರಲ್ಲಿ ಅಂದಮಾನಕ್ಕೆ ಹೋದಾಗ ಅಲ್ಲಿ ಅವರನ್ನು ಒಬ್ಬ ಪಠಾಣ ಕೈದಿಯು ಕೊಂದು ಬಿಟ್ಟನು. ಲಾರ್ಡಮೇಯೋರ ನಂತರ ಲಾರ್ಡ ನಾರ್ಥ ಬ್ರುಕರು ವ್ಹಾಯಿಸರಾಯರಾದರು (೧೮೭೨). ಇವರ ಆಳಿಕೆಯಲ್ಲಿಯೆ ಬಡೋದೆಯ ಮಲ್ಹಾರರಾಯ ಮಹಾರಾಜರು ತಮ್ಮ ರಾಜ್ಯದಲ್ಲಿ ಅವ್ಯವ ವಸ್ಥೆಯನ್ನುಂಟು ಮಾಡಿದರೆಂಬ ಆರೋಪದ ಮೇಲಿಂದ ಪಟ್ಟದಿಂದ ತಳ್ಳಲ್ಪ

ಟ್ಟರು. ೧೮೭೫-೭೬ರಲ್ಲಿ ವ್ಹಿಕ್ಟೋರಿಯಾ ಮಹಾರಾಣಿಯ ಚೊಚ್ಚಲ ಮಗನಾದ ೭ನೆಯ ಎಡ್ವರ್ಡನು ಹಿಂದುಸ್ಥಾನಕ್ಕೆಬಂದು ಭೆಟ್ಟಿಕೊಟ್ಟು ಹೋದನು. ಅದಕ್ಕೂ ಮೊದಲೆ ೧೮೭೩ರಲ್ಲಿ ಬಿಹಾರ ಪ್ರಾಂತದಲ್ಲಿ ಬರಗಾಲವು ಬಿದ್ದಿತ್ತು. ಆ ಬರಗಾಲದ ವಿಷಯದಲ್ಲಿ ಮಾತ್ರ ಸರಕಾರದವರು ಸ್ವಲ್ಪ ಜಾಗ್ರತೆಯನ್ನು ತೋರಿಸಿದರು.

ಲಾರ್ಡ ನಾರ್ಥಬ್ರುಕರ ನಂತರ ಲಾರ್ಡ ಲಿಟನರು ವ್ಹಾಯಿಸರಾಯ ರಾದರು. (೧೮೭೬) ಬ್ರಿಟಿಶ ಸಾಮ್ರಾಜ್ಯದಲ್ಲಿ ಜನರಿಗಿದ್ದ ವಿಶ್ವಾಸಕ್ಕೆ ಧಕ್ಕೆ ಕೊಡುವಂಥ ಪ್ರಸಂಗಗಳು ಮೊದಲಿಗೆ ಲಾರ್ಡ ಲಿಟನ್ನರ ಆಳಿಕೆಯಲ್ಲಿ ಉಂಟಾದವು. ೧೮೭೬ರ ರಿಂದ ೭೮ರ ವರೆಗೆ ಮತ್ತೆ ಬರಗಾಲವು ಬಂದಿತು. ಮೈಸೂರ ಮಹಾರಾಷ್ಟ್ರ ಮತ್ತು ಕರ್ನಾಟಕ, ಮದ್ರಾಸ ಇಲಾಖೆಯಲ್ಲಿ ಅನೇಕ ಭಾಗಗಳೂ ೧೮೭೭ರಲ್ಲಿ ಮಧ್ಯಪ್ರಾಂತ ಮತ್ತು ಸಂಯುಕ್ತ ಪ್ರಾಂತ ಗಳಲ್ಲಿಯೂ, ಬರಗಾಲದ ಹಾವಳಿಗೆ ತುತ್ತಾದವು. ಈ ಬರಗಾಲದಲ್ಲಿ ಬ್ರಿಟಿಶ ಹಿಂದುಸ್ಥಾನದಲ್ಲಿ ೫೦ ಲಕ್ಷ ಜನರು ಮರಣ ಹೊಂದಿದರು. ಇದೇ ಸುಮಾ ರಿಗೆ ಮಹಾರಾಷ್ಟ್ರದಲ್ಲಿ ವಾಸುದೇವ ಬಳವಂತ ಫಡಕೆ ಇವರು ಸರಕಾರದ ವಿರುದ್ಧ ಒಂದು ಚಿಕ್ಕದೊಂದು ಬಂಡಾಯವನ್ನು ಹೂಡಿದರು; ಅವರ ಹೆಸರನ್ನು ಕೇಳಿದ ಕೂಡಲೆ ಇಂಗ್ಲಿಷ ಜನರ ಮೈ ಜುಮ್ಮೆನ್ನುತ್ತಿತ್ತು. ಲಾರ್ಡ ಲಿಟನರ ಕಾಲದಲ್ಲಿಯೆ ಆಯ. ಸಿ. ಎಸ. ಪರೀಕ್ಷೆಗೆ ಕೂಡುವವರ ವಯೋಮರ್ಯಾದೆಯು ಕಡಿಮೆ ಮಾಡಲ್ಪಟ್ಟಿತು; ಹಾಗೂ ದೇಶೀ ವೃತ್ತ ಪತ್ರಗಳ ಮೇಲೆ ನಿಯಂತ್ರಣದ ನಿಯಮಗಳನ್ನು ಹೇರುವ ಅಧಿಕಾರವನ್ನು ಸರಕಾರಕ್ಕೆ ಕೊಡುವ ಕಟ್ಟಳೆಯು ಪಾಸಾಯಿತು. ಬಂಡಾಯದ ನಂತರ ಈ ತರದ ದಬ್ಬಾಳಿಕೆಯು ಆದದ್ದೆಂದರೆ ಲಾರ್ಡ ಲಿಟನನ ಕಾಲದಲ್ಲಿಯೆ. ಜನರಲ್ಲಿಯೂ ಈ ದಬ್ಬಾಳಿಕೆಯ ಕಟ್ಟಳೆಗಳಿಂದ ಗೊಂದಲವೆದ್ದು ದೊಡ್ಡ ಆಂದೋಲನವಾಯಿತು. ಅವರ ವಿವರವನ್ನು ಮುಂದೆ ಕೊಟ್ಟಿದೆ.

**(೫) ಸಯ್ಯದ ಅಹಮದರ ವಿಚಾರಗಳು** (೧೮೬೬):– ಹಿಂದು ಸ್ಥಾನದ ಅರ್ವಾಚೀನ ಇತಿಹಾಸದಲ್ಲಿಯ ರಾಜಕೀಯ ಅಸಂತೋಷವು ಉತ್ಕಟ ರೀತಿಯಿಂದ ಲಾರ್ಡ ಲಿಟನರ ಆಳಿಕೆಯಲ್ಲಿ ಪ್ರಾರಂಭವಾದರೂ

ರಾಜಕೀಯ ಚಟುವಟಿಕೆಗಳು ಯಾವದೊಂದು ವಿಧದಿಂದ ಪ್ರಾರಂಭವಾಗ ಬೇಕೆಂದು ಈ ಮೊದಲೆ ವಿಚಾರವಂತರು ತಿಳಿದುಕೊಂಡಿದ್ದರು. ೧೮೬೬ನೆಯ ಇಸ್ವಿಯ ಮೇ ೧೦ನೇ ತಾರೀಖಿನ ದಿನ ಸಯ್ಯದ ಅಹಮ್ಮದಖಾನರು ಅಲಿಗಡದಲ್ಲಿ ಒಂದು ಸಭೆಯಲ್ಲಿ ಮಾತನಾಡುವಾಗ ಇದೆ ವಿಚಾರವನ್ನು ಮುಂಡಿಸಿದರು. ಅವರು ಹೇಳಿದ ಮಾತುಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತೇವೆ.

"ಬ್ರಿಟಿಶ ಪಾರ್ಲಮೆಂಟಿನ ವಿಷಯದಲ್ಲಿ ಹಿಂದುಸ್ತಾನದ ಜನರು ತೋರಿಸುವ ಅನಾಸ್ಥೆಯನ್ನು ನೋಡಿದರೆ ಮನಸ್ಸಿಗೆ ವಿಷಾದವಾಗುತ್ತದೆ. ನಿಮಗೆ ಸಂಬಂಧಿಸಿದ ವಿಷಯಗಳನ್ನು ನೀವು ಅವರೆದುರಿಗೆ ಇಡದಿದ್ದರೆ ಅವರು ನಿಮ್ಮ ಹಿತಸಂಬಂಧವನ್ನು ಹೇಗೆ ರಕ್ಷಿಸಬೇಕು ? ಪಾರ್ಲಮೆಂಟಿನ ಲ್ಲಿಯೂ ಎಷ್ಟೋ ಉದಾರ ಮತವಾದಿಗಳು ಇದ್ದಾರೆ. ಅವರಿಗೆ ಯೋಗ್ಯ ವಾದ ಅರಿವನ್ನುಂಟು ಮಾಡಿ ಕೊಡುವದು ಅವಶ್ಯವಿದೆ. ಒಮ್ಮೆ ಅವರಲ್ಲಿ ಜಾಗ್ರುತಿಯಾಯಿತೆಂದರೆ, ಜ್ಯೂ, ಹಿಂದು, ಕ್ರಿಶ್ಚನ, ಮುಸಲ್ಮಾನ, ಮುಂತಾದ ಎಲ್ಲ ಜನಾಂಗಗಳ ಕೊರತೆಗಳು ದೂರಾಗುವವು. ಹಿಂದು ಸ್ತಾನದ ಹಿತ ಸಂಬಂಧಗಳನ್ನು ಬ್ರಿಟಿಶ ರಾಷ್ಟ್ರದೆದುರಿಗೆ ಇಡುವ ಹೊತ್ತು ಬಂದಿದೆಯೆಂದು ನನಗೆ ಅನಿಸುತ್ತದೆ. ಹಿಂದುಸ್ತಾನದಲ್ಲಿಯ ಯುರೋಪಿ ಯನ್ನ ಜನರು ಒಂದು ಸಂಘವನ್ನು ಲಂಡನದಲ್ಲಿಯೂ ಸ್ಥಾಪಿಸಿರುವರು. ಅವರ ಈ ಪ್ರಯತ್ನಗಳಿಗೆ ನೀವು ಸಹಾಯ ಮಾಡದಿದ್ದರೆ ಆ ಸಂಸ್ಥೆಯು ಬೆಳೆಯಲಾರದು. ಯುರೋಪಿಯನ್ನರು ತಮಗೆ ಬೇಕಾದ ಹಕ್ಕುಗಳನ್ನು ದೊರಕಿಸಬಹುದು; ನೀವು ಮಾತ್ರ ಹಾಗೆಯೆ ಕೂತಿರಬೇಕಾಗುವದು.....

"ನೀವು ಈ ರೀತಿ ಚಳವಳಿಯನ್ನು ಮಾಡಿದರೆ ಜಿಲ್ಲಾಧಿಕಾರಿಗಳು ನಿಮ್ಮ ಮೇಲೆ ರೇಗಿಗೇಳುವರೆಂದು ತಿಳಿದುಕೊಂಡು ನೀವು ಮುಂದೆ ಬರ ಲೊಲ್ಲಿರೆಂದು ನನಗೆ ಅನಿಸುತ್ತವೆ. ಇದೇನು ಸರಿಯಲ್ಲ; ಈ ತರದ ನೈತಿಕ ಹೇಡಿತನವು ಸರಿಯಾದುದಲ್ಲ. ಹಿಂದುಸ್ತಾನದ ಆಡಳಿತೆಯಲ್ಲಿ ಜನರಿಗೆ ಯಾವ ತರದ ಪ್ರಾತಿನಿಧ್ಯವೂ ಇಲ್ಲ. ಈ ಮಾತನ್ನು ನೆನೆದು ಅವರು ಅಂತಃ ಕರುಣದಲ್ಲಿ ಅಸಂತೋಷವಿದ್ದರೂ ಮೇಲೆ ಮೇಲೆ ತೋರಿಕೆಗೆ ಮಾತ್ರ ಸುಖದಿಂದಿರುವಂತೆ ತೋರಿಸುತ್ತಾರೆ. ನಿಮ್ಮ ನಿಮ್ಮ ಮನೆಗಳಲ್ಲಿ ಸರಕಾರದ

ರದ ಅನೇಕ ಕೃತ್ಯಗಳ ವಿರುದ್ಧವಾಗಿ ಬೇಕಾದ ಹಾಗೆ ಬಾಯಿ ಬಿಡುತ್ತೀರಿ! ಆದರೆ ಯುರೋಪಿಯನ್ನ ಜನರಿದುರಿಗೆ ಮಾತ್ರ ಸರಕಾರದ ಆಡಳಿತೆಯಿಂದ ನಿಮಗೆ ಒಳ್ಳೆ ಸುಖವಾಯಿತೆಂದು ಹೇಳುವಿರಿ. ಇದೇನು ರಾಷ್ಟ್ರಹಿತದ ದೃಷ್ಟಿಯಿಂದ ಯೋಗ್ಯವಾದ ಮಾತಲ್ಲ. ಸರಕಾರದ ಕೃತಿಗಳ ವಿಷಯಕ್ಕೆ ಇರುವ ನಿಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ನೀವು ಆಡಿ ತೋರಿಸ ಬೇಕು. ಜಾನ್ ಸ್ಟುಅರ್ಟ ಮಿಲ್ಲನು ಹೇಳಿದಂತೆ ತಾನು ತನ್ನ ಹಕ್ಕಿಗಾಗಿ ಹೋರಾಡುವ ಮನುಷ್ಯನ ಹಿತ-ಸಂಬಂಧಗಳು ಸುರಕ್ಷಿತವಾಗಿರುವವು.... ನೀವು ಅಂಜಬೇಕೇಕೆ? ಸರಕಾರಕ್ಕೆ ಬಂಡಾಯದ ಕಾಲದಲ್ಲಿ ಸಹಾಯ ಮಾಡಿದವರಲ್ಲಿ ನಾನೊಬ್ಬನು. ಸರಕಾರದಲ್ಲಿ ಜನರ ವಿಶ್ವಾಸವು ಹೆಚ್ಚೆಚ್ಚು ಆದಹಾಗೆ ದೇಶಕ್ಕೆ ಹೆಚ್ಚು ಹಿತವು ಆಗುವದೆಂದು ನನ್ನ ನಂಬಿಗೆಯಿದೆ. ನಿಮ್ಮ ಅಂತಃಕರಣದಲ್ಲಿ ರಾಜಭಕ್ತಿಯಿರಲಿ; ಆಳುವವರಲ್ಲಿ ವಿಶ್ವಾಸವಿರಲಿ; ನಿಮ್ಮ ಮನಸ್ಸಿನಲ್ಲಿ ಇದ್ದದ್ದನ್ನು ಬಿಚ್ಚಿ ಮಾತನಾಡುವ ಪ್ರವೃತ್ತಿ ಇರಲಿ. ಅಂದರೆ ನಿಮಗೆ ಸಲ್ಲಬೇಕಾದ ಎಲ್ಲ ಹಕ್ಕುಗಳು ನಿಮಗೆ ದೊರೆಯುವವು.''

**(೬) ಆಯ. ಸಿ. ಎಸ. ಪರೀಕ್ಷೆಯ ಆಂದೋಲನವು (೧೮೭೭-೭೯)**—: ಹಿಂದುಸ್ಥಾನದ ಸಾರ್ವಜನಿಕ ಮುಖಂಡರ ಚಿತ್ತ ವನ್ನು ಒಳ್ಳೆ ಬಲದಿಂದ ಎಳೆದುಕೊಂಡ ಮೊದಲನೆಯ ಪ್ರಶ್ನೆಯೆಂದರೆ ಆ. ಸಿ. ಎಸ. ಪರೀಕ್ಷೆಯ ಪ್ರಶ್ನೆ. ಈ ಪ್ರಶ್ನೆಯ ವಿಷಯಕ್ಕೆ ದಾದಾಭಾಯಿ ನೌರೋಜಿಯವರು ಇಂಗ್ಲಂಡದಲ್ಲಿ ಒಳ್ಳೆ ರಭಸದಿಂದ ಚಳವಳಿಯನ್ನು ಹೂಡಿದ್ದರು. ಮೇಲೆ ಹೇಳಿದಂತೆ ೧೮೫೮ರಿಂದ ಆಯ. ಸಿ.ಎಸ. ಪರೀಕ್ಷೆಯು ಇಂಗ್ಲಂಡದಲ್ಲಿ ಜರುಗಹತ್ತಿತ್ತು. ೧೮೬೦ರಲ್ಲಿ ಇಂಡಿಯಾ ಕೌನ್ಸಿಲ್ಲನಿಂದ ನೇಮಿಸಲ್ಪಟ್ಟ ಕಮೀಟಿಯವರು ಈ ಪರೀಕ್ಷೆಯು ಇಂಗ್ಲಂಡ ಮತ್ತು ಹಿಂದುಸ್ಥಾನ ಇವೆರಡೂ ದೇಶಗಳಲ್ಲಿ ಜರುಗಬೇಕೆಂದು ಸೂಚಿಸಿದ್ದರು. ಆದರೆ ಆ ಸೂಚನೆಯು ಅಮಲಿನಲ್ಲಿ ಬರದೆ ಹಾಗೆಯೆ ಉಳಿಯಿತು; ಹಿಂದೀ ಜನರಿಗೆ ಇಂಗ್ಲಂಡಕ್ಕೆ ಹೋಗಲು ಅನುಕೂಲವಾಗಬೇಕೆಂದು ೯ ಸ್ಕಾಲರ ಶಿಪ್ಪುಗಳು ಏರ್ಪಡಿಸಲ್ಪಡಬೇಕೆಂಬುದಿಷ್ಟೆ ಗೊತ್ತಾಯಿತು. ಮುಂದೆ ೧೮೭೦ರಲ್ಲಿ, ೧೮೬೧ರ ಕಾಯದೆಯಂತೆ ಸಿವಿಲಸರ್ವಿಸಿನವರಿಗಾಗಿ ಕಾದಿಡ ಲ್ಪಟ್ಟ ಜಾಗೆಗಳಲ್ಲಿ ಕೆಲವು ವ್ಹಾಯಿಸರಾಯರಿಂದ ನೇಮಿಸಲ್ಪಟ್ಟ ಹಿಂದೀ

ಜನರಿಗಾಗಿ ಕಾದಿಡಲ್ಪಡಬೇಕೆಂದು ಗೊತ್ತಾಯಿತು; ಇದು ಗೊತ್ತಾದ ನಂತರ ೯ ವರ್ಷಗಳವರೆಗೆ ಅವರ ವಿಷಯದಲ್ಲಿನ ನಿಯಮಗಳೇ ಹೊರಬೀಳಲಿಲ್ಲ. ೧೮೭೭ರಲ್ಲಿ ಆಯ. ಸಿ. ಎಸ. ಪರೀಕ್ಷೆಗೆ ಕೂಡುವ ವಿದ್ಯಾರ್ಥಿಗಳ ವಯಸ್ಸು ೨೧ರಿಂದ ೧೯ಕ್ಕೆ ಇಳಿಸಲ್ಪಟ್ಟಿತು. ಅಂದರೆ ಹಿಂದೀ ವಿದ್ಯಾರ್ಥಿಗಳು ಈ ಪರೀಕ್ಷೆಗೆ ಕೂಡ್ರುವದು ಕೇವಲ ಅಶಕ್ಯವಾದ ಮಾತಾಯಿತು. ಈ ಅನ್ಯಾಯದ ವಿರುದ್ಧ ಹಿಂದುಸ್ಥಾನದ ಎಲ್ಲ ಪ್ರಮುಖ ಪಟ್ಟಣಗಳಲ್ಲಿ ಸಭೆಗಳನ್ನು ಮಾಡಬೇಕೆಂದು ಇಂಡಿಯನ ಅಸೋಶಿಯೇಶನದವರು ನಿರ್ಧರಿಸಿದರು. ಮೊದಲನೆಯ ಸಭೆಯು ೧೮೭೭ರ ಮಾರ್ಚ ತಿಂಗಳ ೨೪ ತಾರೀಕಿನ ದಿನ ಜರುಗಿತು. ರಾಜಕಾರಣದಲ್ಲಿ ಈ ಮೊದಲು ಎಂದಿಗೂ ಭಾಗವಹಿಸದ ಕೇಶವ ಚಂದ್ರ ಸೇನರೂ ಈ ಸಭೆಗೆ ಬಂದಿದ್ದರು. ಇಂಡಿಯನ ಅಸೋಶಿಯೇಶನದ ಪ್ರತಿನಿಧಿಗಳಾಗಿ ಸುರೇಂದ್ರನಾಥ ಬಾನರ್ಜಿಯವರು ೧೮೭೭ರಲ್ಲಿ ಆಗ್ರಾ, ಲಾಹೋರ, ಅಮೃತಸರ, ಮೀರತ, ಅಲ್ಲಹಾಬಾದ, ದಿಲ್ಲಿ, ಕಾನಪುರ, ಲಖನೌ, ಅಲಿಗಡ, ಕಾಶಿ, ಲಾಹೋರ ಪಟ್ಟಣಗಳಿಗೆ ಹೋಗಿ ಸಭೆಗಳನ್ನು ಸೇರಿಸಿ ಸಿವಿಲ ಸರ್ವಿಸ ಪರೀಕ್ಷೆಗೆ ಕೂಡುವ ವಿದ್ಯಾರ್ಥಿಗಳ ವಯೋಮರ್ಯಾದೆಯನ್ನು ಬೆಳೆಯಿಸಬೇಕೆಂಬ ಠರಾವುಗಳನ್ನು ಮಾಡಿಕೊಂಡರು. ಲಾಹೋರ ಮೀರತ ಅಲ್ಲಹಾಬಾದ ಕಾನಪುರ ಪಟ್ಟಣಗಳಲ್ಲಿ ಕಲಕತ್ತೆಯ ಇಂಡಿಯನ ಅಸೋಶಿಯೇಶನದೊಡನೆ ಸಹಕರಿಸುವ ಸಂಘಗಳೂ ಸ್ಥಾಪಿಸಲ್ಪಟ್ಟವು.ಲಾಹೋರದಲ್ಲಿಯೂ ಒಂದು "ಹಿಂದೀ ಸಂಘವು" ಸ್ಥಾಪಿಸಲ್ಪಟ್ಟಿತು. ಮರುವರ್ಷ ಸುರೇಂದ್ರನಾಥರು ಮುಂಬಯಿ, ಅಹಮದಾಬಾದ, ಪುಣೆ ಮತ್ತು ಮದ್ರಾಸಿಗೆ ಹೋಗಿ ಬಂದರು; ಮದ್ರಾಸನ್ನುಳಿದು ಉಳಿದ ಮೂರು ಪಟ್ಟಣಗಳಲ್ಲಿಯೂ ಯಥಾಕ್ರಮವಾಗಿ ಸಭೆಗಳು ಜರುಗಿದವು. ಸುರೇಂದ್ರನಾಥರ ಈ ಪ್ರವಾಸವು ಕೇವಲ ಅಭೂತಪೂರ್ವವಾದದ್ದು; ಯಾವದೆ ಸಾರ್ವಜನಿಕ ಪ್ರಶ್ನೆಗಾಗಿ ಈ ತರದ ಅಖಿಲಭಾರತ ಚಳವಳಿಯು ಈ ಮೊದಲು ಹೂಡಲ್ಪಟ್ಟಿರಲಿಲ್ಲ. ಇಷ್ಟಕ್ಕೆ ನಿಲ್ಲದೆ ಇಂಡಿಯನ ಅಸೋಶಿಯೇಶನ್ನಿನವರು ಬಂಗಾಲದ ಪ್ರಸಿದ್ಧ ಬ್ಯಾರಿಸ್ಟರರಾದ ಲಾಲ ಮೋಹನ ಘೋಷರನ್ನೂ ಇಂಗ್ಲಂಡಿಗೆ ಕಳಿಸಿದರು; ಅವರ ಇಂಗ್ಲಂಡದ ಪ್ರವಾಸದ ಖರ್ಚಿಗಾಗಿ ಸಾರ್ವಜನಿಕ ಫಂಡು ಕೂಡಿಸಿದರು. ಜಾನ ಬ್ರಾಯಟರ

ಅಧ್ಯಕ್ಷತೆಯಲ್ಲಿ ವ್ರುಯಿಲ್ಸರೂಮ ಎಂಬ ಸ್ಥಳದಲ್ಲಿ ದೊಡ್ಡ ಸಭೆಯಾಯಿತು. ಸಭೆಯಾದ ೨೪ ಗಂಟೆಗಳೊಳಗಾಗಿಯೆ ಆಯ. ಸಿ. ಎಸ. ಪರೀಕ್ಷೆಯ ಹೊಸ ನಿಯಮಗಳು ಪ್ರಸಿದ್ಧವಾದವು. ಆದರೆ ಅವೇನು ಅಷ್ಟೊಂದು ಸಮಾಧಾನಕರವಾಗಿರಲಿಲ್ಲ.

ಈ ಹೊಸನಿಯಮಗಳಂತೆ ಸ್ಟೇಟಸೆಕ್ರೆಟರಿಯವರು ಇಂಗ್ಲಂಡದಲ್ಲಿ ನೇಮಿಸುವ ಆಯ. ಸಿ. ಎಸ. ನೋಕರರ ೧/೫ ರಷ್ಟು ಹಿಂದೀ ಜನರು ಆಯಾ ಪ್ರಾಂತಿಕ ಸರಕಾರದವರಿಗೆ ನೇಮಿಸಿಕೊಳ್ಳಬಹುದು; ಆದರೆ ಕಲೆಕ್ಟರ ಕಮೀಶನರ ಮುಂತಾದ ದೊಡ್ಡ ಹುದ್ದೆಗಳಿಗೆ ಹಿಂದೀಜನರು ನೇಮಿಸಲ್ಪಡ ಕೂಡದು. ವಯಸ್ಸಿನ ನಿರ್ಬಂಧವು ಹಾಗೆಯೆ ಉಳಿಯಿತು; ಮತ್ತೆ ಚಳವಳಿ ಯಾಗಿ ವಯಸ್ಸಿನ ಮರ್ಯಾದೆಯು ಮತ್ತೆ ಮೊದಲಿನಂತೆ ಏರಿಸಲ್ಪಟ್ಟ ಹಿಂದೀ ಜನರಿಗೆ ಪರೀಕ್ಷೆಗೆ ಕೂಡಲು ಸ್ವಲ್ಪ ಅನುಕೂಲತೆಯಾದಂತಾ ಯಿತು.

**(೭)ದೇಶೀ ವೃತ್ತಪತ್ರಗಳ ಕಾಯದೆ:—** ಇದೇ ಸಮಯಕ್ಕೆ ರಶಿಯಾ ಮತ್ತು ಇಂಗ್ಲಂಡ ಇವೆರಡರ ನಡುವಿನ ಸ್ನೇಹಕ್ಕೆ ಬಾಧೆ ಬಂದಿತ್ತು. ದೇಶೀವೃತ್ತಪತ್ರಿಕೆಗಳಲ್ಲಿ ಇಂಗ್ಲಂಡವನ್ನು ನಿಂದಿಸಿ, ರಶಿಯಾ ದೇಶವನ್ನು ಹೊಗಳುವ ಬ್ರಿಟಿಶ ಅಧಿಕಾರಿಗಳ ಕೊಲೆಗಳನ್ನು ಸೂಚಿಸುವ ಬ್ರಿಟಿಶ ರಾಜ್ಯವನ್ನು ಕಿತ್ತುಹಾಕಬೇಕೆಂದು ಉದ್ಘೋಷಿಸುವ ಬರಹಗಳು ದೇಶೀವೃತ್ತಪತ್ರಗಳಲ್ಲಿ ಪ್ರಸಿದ್ಧವಾದವೆಂದು ವಿನ್ಸೆಂಟ್ ಸ್ಮಿಥರ ಅಭಿಪ್ರಾ ಯವು. ಇಂತಹ ಬರಹಗಳನ್ನು ತಡೆಯುವದಕ್ಕಾಗಿ ಅವಶ್ಯವೆನಿಸಿದಾಗ ದೇಶೀವೃತ್ತಪತ್ರಕಗಳಿಂದ ಜಾಮೀನು ತೆಗೆದುಕೊಳ್ಳಬಹುದೆಂದು ಹೊಸ ಕಟ್ಟಳೆಯನ್ನು ಲಾರ್ಡ ಲಿಟನ್ನರು ತಮ್ಮ ಕೌನ್ಸಿಲಿನಿಂದ ಪಾಸು ಮಾಡಿ ಕೊಂಡರು. ದೇಶೀವೃತ್ತಪತ್ರಗಳ ಕಾಯದೆಯು ೧೮೭೮ರ ಎಪ್ರೀಲ ತಿಂಗಳ ಕೌನ್ಸಿಲಿನ ಒಂದೇ ಕೂಟದಲ್ಲಿ ಪಾಸಾಯಿತು.ಬ್ರಿಟಿಶ ಇಂಡಿಯನ್ನ ಅಸೋ ಶಿಯೇಶನ್ನದ ಸನ್ಮಾನ್ಯ ಸಹಾಯಕರೂ ಬಂಗಾಲೀ ಜನಾಂಗದ ಪ್ರಮು ಖರಲೊಬ್ಬರೂ ಆದ ಜ್ಯೋತೀಂದ್ರಮೋಹನ ಟಾಗೋರರು ಈ ಕಾಯ ದೆಗೆ ವಿರೋಧ ಮಾಡಲಿಲ್ಲ. ಮದ್ರಾಸ ಪ್ರಾಂತಿಕ ಸರಕಾರದವರು ಮಾತ್ರ ಈ ಕಟ್ಟಳೆಗೆ ತಮ್ಮ ವಿರೋಧವನ್ನು ಪ್ರದರ್ಶಿಸಿದ್ದರು. ವೃತ್ತಾಸುರನ ಈ

ಪ್ರಥಮ ಅವತಾರದ ವಿರುದ್ಧ ಸುಶಿಕ್ಷಿತ ಸಮಾಜದಲ್ಲಿ ತೀಕ್ಷ್ಣವಾದ ಅಸಂತೋಷವುಂಟಾಯಿತು. ಬ್ರಿಟಿಶ ಇಂಡಿಯನ ಅಸೋಶಿಯೇಶನದ ವರೂ ಸ್ತಬ್ಧರಾಗಿದ್ದರು. ಆದುದರಿಂದ ಸುರೇಂದ್ರನಾಥ ಬ್ಯಾನರ್ಜಿಯವರೆ ಮುಂದಾಳುಗಳಾಗಿ ಸಮಾಜದಲ್ಲಿಯ ಮುಖಂಡರ ಅನಾಸ್ಥೆಯನ್ನು ಲೆಕ್ಕಿಸದೆ ಡಾ. ಕೆ. ಎಮ್. ಬ್ಯಾನರ್ಜಿ, ರೆವ್ಹರೆಂಡ ಕೆ. ಎಸ. ಮ್ಯಾಕಡೋನಾಲ್ಡರ ಸಹಾಯದೊಂದಿಗೆ ಚಳವಳವನ್ನು ಹೂಡಿದರು. ಕಲಕತ್ತಾ ಟಾವುನ ಹಾಲಿನಲ್ಲಿ ದೊಡ್ಡ ಸಭೆಯಾಗಿ ಸುರೇಂದ್ರನಾಥ, ಆನಂದಮೋಹನ ಬೋಸರ ವ್ಯಾಖ್ಯಾನಗಳಾದವು. ಇಂಗ್ಲಂಡದಲ್ಲಿಯ ಹೆಸರು ಪಡೆದ ಮುಖಂಡರಾದ ಗ್ಲ್ಯಾಡಸ್ಟನರೂ ತಮ್ಮ ಮಿಡ್ಲೋಥಿಯನದ ಭಾಷಣದಲ್ಲಿ ಶಸ್ತ್ರಪ್ರತಿಬಂಧಕ ಕಾಯದೆಯನ್ನೂ ದೇಶಿ ವೃತ್ತಪತ್ರದ ಕಾಯದೆಯನ್ನೂ ನಿಷೇಧಿಸಿದರು. ಇದೆಲ್ಲ ಚಳವಳಿಯ ಪರಿಣಾಮವಾಗಿ ಲಾರ್ಡ ರಿಪನರ ಆಳಿಕೆಯಲ್ಲಿ ದೇಶಿವೃತ್ತಪತ್ರಗಳ ಕಾಯದೆಯು ರದ್ದುಪಡಿಸಲ್ಪಟ್ಟಿತು.

ಇದೆ ಸಂದರ್ಭದಲ್ಲಿ ಒಂದು ಮನೋರಂಜಕ ಸಂಗತಿಯು ಒದಗಿತು. ಕಲಕತ್ತೆಯ ಅಮೃತಬಝಾರ ಪತ್ರಿಕೆಯು ಮೊದಲು ಬಂಗಾಲಿ ಪತ್ರಿಕೆಯಿದ್ದಿತು. ಅದರ ಸಂಪಾದಕರರು ಶಿಶಿರ ಕುಮಾರ ಘೋಸರು; ಒಳ್ಳೆ ಮೇಲ್ತರಗತಿಯ ಟೀಕಾಲೇಖಕರು. ಇವರು ಆಗಾಗ್ಗೆ ತಮ್ಮ ಪತ್ರಿಕೆಯಲ್ಲಿ ಬಲು ತೀಕ್ಷ್ಣವಾದ ಬರಹಗಳನ್ನು ಬರೆಯುತ್ತಿದ್ದರು. ಮುಖ್ಯವಾಗಿ ಅಮೃತಬಝಾರ ಪತ್ರಿಕೆಗಾಗಿಯೆ ಮೇಲಿನ ಕಾಯದೆಯು ಮಾಡಲ್ಪಟ್ಟಿತ್ತೆಂದು ಕೆಲವರ ಗ್ರಹಿಕೆಯಿದೆ.ಆದರೆ ಕಾಯದೆಯು ಅಮಲಿನಲ್ಲಿ ಬರುವ ಮೊದಲು ಒಂದೇ ರಾತ್ರಿಯಲ್ಲಿ ಅಮೃತಬಝಾರ ಪತ್ರಿಕೆಯ ಒಡೆಯರು ಅದಕ್ಕೆ ಇಂಗ್ಲಿಷ ಭಾಷೆಯ ತೊಡುಪನ್ನು ಕೊಟ್ಟು ಅದನ್ನು ಈ ಹೊಸ ಕಾಯದೆಯ ಕಾಟದಿಂದ ತಪ್ಪಿಸಿಕೊಂಡರು.ಅಂದಿನಿಂದ ಅಮೃತಬಝಾರ ಪತ್ರಿಕೆಯು ದೇಶಸೇವೆಯನ್ನು ಒಳ್ಳೆ ನಿಷ್ಠೆಯಿಂದ ಮಾಡಿತು.ಶಿಶಿರಕುಮಾರ ಘೋಷರ ನಂತರ ಅವರ ತಮ್ಮಂದಿರಾದ ಮೋತೀಲಾಲ ಘೋಸರು ತಮ್ಮ ಅಣ್ಣಂದಿರ ಉಜ್ವಲ ಪರಂಪರೆಯನ್ನು ಮುಂದೆ ಸಾಗಿಸಿದರು. ೧೯೦೫ರ ಚಳವಳಿಯಲ್ಲಿ ಹೊಸದಾಗಿ ಹೊರಟ ರಾಷ್ಟ್ರೀಯ ಪಕ್ಷದ ಮುಖ್ಯಾಧಾರಗಳಲ್ಲಿ ಮೋತೀಲಾಲ ಘೋಷರೂ ಒಬ್ಬರಾಗಿದ್ದರು.

**(೮) ಲಾರ್ಡರಿಪನರ ಆಳ್ಕೆ (೧೮೮೦-೧೮೮೪) ಇಲ್ಬರ್ಟ ಬಿಲ್ಲಿನ ಚಳವಳಿ:–** ಲಾರ್ಡ ಲಿಟನರ ತರುವಾಯ ಹಿಂದುಸ್ತಾನಕ್ಕೆ ವ್ಹಾಯಿಸರಾಯರಾಗಿ ಬಂದ ಲಾರ್ಡ ರಿಪನ್ನರು ತಮ್ಮ ಉದಾರವಾದ ಆಳಿಕೆಯಿಂದ ಜನರಿಗೆ ಬಹಳ ಲೋಕಪ್ರಿಯರಾದರು. ಜನರಿಗೆ ಸ್ವರಾಜ್ಯದ ಅಲ್ಪಸ್ವಲ್ಪವಾದ ಹಕ್ಕುಗಳನ್ನು ಒದಗಿಸಿಕೊಡಬೇಕೆಂದು ಮುನಸಿಪಾಲ್ಟಿ ಮತ್ತು ಲೋಕಲ್‌ಬೋರ್ಡುಗಳನ್ನು ಸ್ಥಾಪಿಸುವ ಕಾಯದೆಯು ಇವರ ಆಳಿಕೆಯಲ್ಲಿಯೆ ಪಾಸಾಯಿತು. ಮುನಸಿಪಾಲ್ಟಿ ಮತ್ತು ಲೋಕಲ್ ಬೋರ್ಡುಗಳು ಜನರಿಗೆ ಕೇವಲ ರಾಜಕೀಯ ಶಿಕ್ಷಣದ ಸಾಧನವೆಂದು ಸ್ಥಾಪಿಸಲ್ಪಟ್ಟವೆಂದು ಲಾರ್ಡ ರಿಪನ್ನರು ಹೇಳಿದರು.

ಲಾರ್ಡ ರಿಪನರ ಆಳಿಕೆಯಲ್ಲಿಯೆ ಹಿಂದುಸ್ತಾನದ ಎಲ್ಲ ಸುಶಿಕ್ಷಿತರಲ್ಲಿ ಒಳ್ಳೆ ಜಾಗೃತಿಯನ್ನುಂಟು ಮಾಡುವಂತಹ ಒಂದು ಘಟನೆಯು ಒದಗಿತು. ೧೮೮೩ರಲ್ಲಿ ವ್ಹಾಯಿಸರಾಯರ ಕೌನ್ಸಿಲ್ಲಿನಲ್ಲಿಯ ಕಾಯದೆಪಂಡಿತರಾದ ಇಲ್ಬರ್ಟರು "ನೇಟಿವ್ಹ ಜ್ಯೂರಿಸಡಿಕ್ಶನ ಬಿಲ್ಲ"ನ್ನು ಕಾಯದೆಮಂಡಲದ ವಿಚಾರಕ್ಕಾಗಿ ಮಂಡಿಸಿದರು. ಈ ಮೊದಲು ಯುರೋಪಿಯನನು ಯಾವದೆ ಅಪರಾಧವನ್ನು ಮಾಡಿರಲಿ, ಆ ಅಪರಾಧದ ಚೌಕಶಿಯನ್ನು ಯುರೋಪಿಯನ ಮ್ಯಾಜಿಸ್ಟ್ರೇಟನೆ ಮಾಡಬೇಕೆ ಹೊರತು ಯಾವ ಹಿಂದೀ ಮ್ಯಾಜಿಸ್ಟ್ರೇಟನಿಗೂ ಆ ಅಧಿಕಾರವಿರಲಿಲ್ಲ. ಹಿಂದೀ ಮತ್ತು ಯುರೋಪಿಯನ ನ್ಯಾಯಾಧೀಶರ ನಡುವಿನ ಈ ಅಧಿಕಾರ-ಭೇದವನ್ನು ತೆಗೆದು ಹಾಕುವ ಉದ್ದೇಶದಿಂದ ಲಾರ್ಡ ರಿಪನರ ಪ್ರೇರಣೆಯಿಂದ ಇಲ್ಬರ್ಟರು ಈ ಬಿಲ್ಲನ್ನು ಕೌನ್ಸಿಲ್ಲಿನೆದುಗೆರಿ ತಂದರು. ಜಾತಿಮದದಿಂದ ಪ್ರೇರಿತರಾಗಿದ್ದ ಯುರೋಪಿಯನರು ಈ ಬಿಲ್ಲಿನ ವಿರುದ್ಧ ಚಳವಳವನ್ನು ಹೂಡಿದರು;ಅದಕ್ಕಾಗಿ ೧॥ಲಕ್ಷ ರೂಪಾಯಿ ಕೂಡಿಸಿದರು; ಈ ಬಿಲ್ಲು ಮಂಜೂರಾಗಿ ಕಟ್ಟಳೆಯೆ ಆದದ್ದಾದರೆ ಲಾರ್ಡ ರಿಪನರ ಕೈಕಾಲು ಕಟ್ಟಿ ಹಡಗದಲ್ಲಿ ಹಾಕಿ ಇಂಗ್ಲಂಡಕ್ಕೆ ತಿರುಗಿ ಕಳಿಸಬೇಕೆಂದು ಖುದ್ದ ಬಂಗಾಲದ ಲೆಫ್ಟಿನೆಂಟ ಗವರ್ನರನ ಮೂಕ ಸಮ್ಮತಿಯಿಂದ ಗೊತ್ತು ಮಾಡಿದರು.

ನಿಜವಾಗಿ ವಿಚಾರಮಾಡಿ ನೋಡಿದರೆ ನ್ಯಾಯಾಸನದೆದುರಿಗೆ ಯುರೋಪಿಯನರೂ ಹಿಂದೀಯರೂ ಸರಿಸಮಾನರೆ ಸೈ. ಈ ವಿಷಯದಲ್ಲಿ ವಿಷಮತೆ

ಯಿದ್ದರೆ ಅದನ್ನು ಹೋಗಲಾಡಿಸುವದು ರಾಜ್ಯದ ಸುಧಾರಣೆಯ ದೃಷ್ಟಿ ಯಿಂದ ಅವಶ್ಯವಾಗಿದ್ದ ಮಾತಾಗಿತ್ತು. ಇದೂ ಅಲ್ಲದೆ ಈ ವಿಷಮತೆಯಿಂದ ಯುರೋಪಿಯನರು ಮಾಡಿದ ಅಪರಾಧದ ವಿಷಯದಲ್ಲಿ ಹಿಂದೀ ಜನರಿಗೆ ಯಾವ ನ್ಯಾಯವೂ ದೊರೆಯುದಂತಾಗಿತ್ತು. ಫೆರೋಜಶಾಹಾ ಮೆಹತಾರವರು ತಮ್ಮ ಮುಂಬಯಿಯಲ್ಲಿಯ ಮಾತಿನಲ್ಲಿ ಒಂದು ಉದಾಹರಣೆಯನ್ನು ಹೇಳಿದರು; ಸುರತಕಡೆಗಿದ್ದ ಒಬ್ಬ ಯುರೋಪಿಯನ್ನನು ಎಲ್ಲ ಕಡೆಗೂ ಜಂಭ ಕೊಚ್ಚುತ್ತ ತಿರುಗಾಡುತ್ತಿದ್ದನು: “ನಾನು ದೇಶಿ ಜನರನ್ನು ಬೇಕಾದ ಹಾಗೆ ಕಾಡುವೆನು, ಪೀಡಿಸುವೆನು; ನನ್ನ ಅಪರಾಧದ ಚೌಕಶಿಯನ್ನು ಯಾವ ಹಿಂದೀ ಮ್ಯಾಜಿಸ್ಟ್ರೇಟನೂ ಮಾಡಲಾರನು; ಚೌಕಶಿಯನ್ನು ಮಾಡುವ ಯಾವ ಯುರೋಪಿಯನ ಮ್ಯಾಜೀಸ್ಟ್ರೇಟನೂ ನೇಟಿವ್ಹ ಸಾಕ್ಷೀದಾರರ ಮಾತು ನಂಬಲಾರನು.” ಈ ರೀತಿಯ ಪರಿಸ್ಥಿತಿಯಿದ್ದುದರಿಂದ ಯುರೋಪಿಯನ್ನನ ವಿರುದ್ಧ ಖಟಲೆಯನ್ನು ಮಾಡುವದೆ ಹಿಂದೀ ಜನರಿಗೆ ಜಡವಾದ ಮಾತಾಗಿತ್ತು. ಹೊಸ ಬಿಲ್ಲಿನ ವಿರೋಧಕರು ಬಿಲ್ಲಿಗೆ ತರತರದ ಆಕ್ಷೇಪಣೆಗಳನ್ನೆತ್ತುತ್ತಿದ್ದರು; ಹಿಂದೀ ಮ್ಯಾಜಿಸ್ಟ್ರೇಟರ ಮನಸ್ಸಿನಲ್ಲಿ ಯುರೋಪಿಯನರ ವಿಷಯಕ್ಕೆ ಪ್ರತಿಕೂಲ ಭಾವನೆಗಳಿರುತ್ತವೆ; ಹಿಂದೀ ಸಾಕ್ಷೀದಾರರು ಸುಳ್ಳು ಸಾಕ್ಷಿ ಹೇಳುತ್ತಾರೆ. ಅದುದರಿಂದ ಯುರೋಪಿಯನ ಆರೋಪಿತರ ವಿಷಯನಲ್ಲಿ ಹಿಂದೀ ಮ್ಯಾಜಿಸ್ಟ್ರೇಟರಿಂದ ನ್ಯಾಯವಾಗುವದು ಸಾಧ್ಯವಿಲ್ಲ; ಯುರೋಪಿನ ಜನರ ರೀತಿನಡತೆಗಳ ಪರಿಚಯವು ಹಿಂದೀ ಮ್ಯಾಜಿಸ್ಟ್ರೇಟರಿಗೆ ಸಾಕಷ್ಟು ಇರುವದಿಲ್ಲ. ಆದರೆ ಇವೆಲ್ಲ ಆಕ್ಷೇಪಣೆಗಳಲ್ಲಿ ಹುರುಳಿದ್ದಿಲ್ಲ; ಈ ಆಕ್ಷೇಪಣೆಗಳಲ್ಲಿ ತಥ್ಯವಿದ್ದರೆ ಅವು ಯುರೋಪಿಯನ ಮ್ಯಾಜಿಸ್ಟ್ರೇಟರಿಗೂ ಅನ್ವಯಿಸುತ್ತವೆಯೆಂಬುದನ್ನು ಬುದ್ರುದ್ದೀನ ತಯ್ಯಬಜಿಯವರು ತಮ್ಮ ಮುಂಬಯಿಯಲ್ಲಿಯ ಭಾಷಣದಲ್ಲಿ ವಿಶದವಾಗಿ ಹೇಳಿದರು. ಬಿಲ್ಲಿಗೆ ವಿರೋಧ ಮಾಡುವವರ ನಿಜವಾದ ಕಾರಣವು ಯುರೋಪಿಯನ ಜನಾಂಗದ ಸ್ವಜಾತಿಪಕ್ಷಪಾತವೆ ಆಗಿತ್ತು. ಹಿಂದೀ ಮನುಷ್ಯನು ಯುರೋಪಿಯನ ಅಪರಾಧಿಯ ಅಪರಾಧದ ಚೌಕಶಿಯನ್ನು ಮಾಡುವದೆಂದರೆ, ಅದೆಂತಹ ಘೋರವಾದ ಅನ್ಯಾಯ?

ಇಲ್ಬರ್ಟ ಬಿಲ್ಲಿನ ವಿರೋಧವನ್ನು ಮಾಡಲು ಕಲಕತ್ತೆಯ ಆಲಬರ್ಟ

ಹಾಲಿನಲ್ಲಿ ಯುರೋಪಿನರ ಸಭೆ ಸೇರಿತ್ತು; ಆ ಸಭೆಯಲ್ಲಿ ಬ್ರಾನ್ಸನ ನೆಂಬುವನು ಹಿಂದೀ ಜನರ ವಿಷಯಕ್ಕೆ ಬೇಕುಬೇಕಾದ ಅಶ್ಲೀಲ ಮಾತು ಗಳನ್ನಾಡಿದನು. ಇಲ್ಬರ್ಟ ಬಿಲ್ಲಿನಲ್ಲಿ ಅಡಕವಾಗಿದ್ದ ಸುಧಾರಣೆಯನ್ನು ಸೂಚಿಸಿದ ಬಿಹಾರಿಲಾಲ ಗುಪ್ತರೆಂಬ ಕಲ್ಕತ್ತೆಯ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇ ಟನನ್ನು ಮನಬಂದಂತೆ ಹಳಿದನು; ಈ ಹೊಸ ಬಿಲ್ಲು "ಮದದಿಂದ ಉಬ್ಬಿ ಹೋದ ಕೆಲ ಬಂಗಾಲಿ ಬಾಬೂಗಳ ಅಸಂತೋಷವನ್ನು ದೂರ್ಪಡಿಸುವದ ಕ್ಕೋಸ್ಕರವೆ ಮುಂದೆ ಚಾಚಲ್ಪಟ್ಟಿದೆಯೆಂದು ಹೇಳಿದನು, ಹಿಂದು ಜನರು ಜಿತಜನಾಂಗವೆಂದು ತಿರಸ್ಕಾರದಿಂದ ಹೇಳಿದನು; ಇಷ್ಟು ಸಾಲದೆ ಹಿಂದು ಸ್ಥಾನದ ಸ್ತ್ರೀಯರು ಬೀದಿಯಲ್ಲಿಯ ನಾರಿಯರೆಂದು ಅಂದು ಬಿಟ್ಟನು. ಈ ಕೀಳು ನುಡಿಗಳಿಗೆ ಸರಿಯಾದ ಉತ್ತರವನ್ನು ಲಾಲಮೋಹನ ಘೋಸರು ಮುಂದೆ ಕೆಲವು ದಿನಗಳಲ್ಲಿಯೆ ಜರುಗಿದ ಸಭೆಯಲ್ಲಿ ಕೊಟ್ಟರು. ಹಿಂದೀ ಸ್ತ್ರೀಯರ ನೀತಿಯನ್ನು ಜರೆದು ಆಡಿದ ಮಾತುಗಳಿಗೆ ಅಷ್ಟೆ ತೀಕ್ಷ್ಣವಾದ ಉತ್ತರವನ್ನು ಲಾಲಮೋಹನರು ಕೊಟ್ಟರು. ಈ ವಿಷಯವನ್ನೆತ್ತಿ ಅವರಂದು ದೇನಂದರೆ: "ಆದರೆ ಉನ್ಮತ್ತತೆಯ ಪರಮಾವಧಿಯು ಮುಂದಿನ ಮಾತಿ ನಲ್ಲಿದೆ. ನಿರಪರಾಧಿಯರಾದ ಹಿಂದಿ ಸ್ತ್ರೀಯರ ಮೇಲೆ ನಿಂದೆಯ ಮಾತುಗಳ ನ್ನೆತ್ತಿ ಅವನು ತನ್ನ ತಲೆಯ ಮೇಲೆ ಎಂದಿಗೂ ಅಳಿಸಲಾರದ ಅಪಕೀರ್ತಿ ಯನ್ನು ತಂದುಕೊಂಡನು; ಈ ಕೃತಿಯು ಕೇವಲ ಪಶುಗಳಿಗೆ ಒಪ್ಪುನಂತ ಹದು; ಈ ಮಾತಿನಲ್ಲಿ ತೋರಿದ ನಾಚಿಕೆಗೇಡಿತನಕ್ಕೆ ಮಿತಿಯೆ ಇಲ್ಲ. ಹಿಂದೀ ಸ್ತ್ರೀಯರೆಂದರೆ ಬೀದಿಯ ನಾರಿಯರೆಂದು ಇವನು ಹೇಳುವ ಧೈರ್ಯಮಾಡಿದನು; ಅಖಂಡ ರಾಷ್ಟ್ರವೆ ಎನ್ನು ಬಾಡೇ ಕೂಗಿನಿಂದ ಈ ಮಾತಿನ ವಿಷಯದಲ್ಲಿಯ ತನ್ನ ಅಭಿಪ್ರಾಯವನ್ನು ಸಾರಲಿ! ಈ ನಿಂದಕರು ಇನ್ನಾವ ಸಭೆಯಲ್ಲಿ ತಮ್ಮ ಮೋರೆಯನ್ನು ತೋರಿಸಿದ್ದಾದರೆ ಆ ಮೋರೆಯ ಮೇಲೆ ತಿರಸ್ಕಾರದ ಮಳೆ ಕರೆಯಲಿ; ತಮ್ಮ ವಿಷಮಯವಾದ ಉಸುರಿ ನಿಂದ ಅಪವಿತ್ರವನ್ನಾಗಿ ಮಾಡಿದ ಭೂಮಿಯಿಂದ ದೂರ ಓಡಿ ಹೋಗುವ ಬುದ್ಧಿಯಾದರೂ ಆದೀತು! (ಚಪ್ಪಾಳೆ)." ಕಲ್ಕತ್ತೆಯಂತೆಯೆ ಮುಂಬಯಿ ಯಲ್ಲಿಯೂ ಸಭೆಯಾಗಿ ಫೆರೋಜಶಹಾ ಮೆಥಾ, ಬುದ್ರುದ್ದೀನ ತಯ್ಯಬಜಿ, ಕಾಶಿನಾಥ ತ್ರಿಯಂಬಕ ತೆಲಂಗ ಮುಂತಾದವರ ಭಾಷಣಗಳಾದವು.

ಹಿಂದೀ ಜನರು ಬಿಲ್ಲಿನ ಪರವಾಗಿ ಒಳ್ಳೆ ಕಸುವಿನಿಂದ ಹೋರಾಡಿದರು; ಆದರೆ ಯುರೋಪಿಯನರು ಹೂಡಿದ ಚಳವಳಿಯು, ಅಂಶತಃ ಯಶಸ್ವಿಯಾಗಿ ಫಕ್ತ ಕಲೆಕ್ಟರ ಇಲ್ಲವೆ ಡಿಸ್ಟ್ರಿಕ್ಟ ಜಜ್ಜರ ಹುದ್ದೆಯ ದೇಶೀ ಅಧಿಕಾರಿಗಳಿಗೆ ಮಾತ್ರ ಯುರೋಪಿಯನರ ಕೆಲವು ಅಪರಾಧಗಳನ್ನು ಚೌಕಶಿ ಮಾಡುವ ಅಧಿಕಾರವು ದೊರೆಯಿತು. ಆ ಕಾಲಕ್ಕೆ ಯುರೋಪಿಯನ ಹಿಂದಿಯರ ಹಕ್ಕುಗಳಲ್ಲಿಯ ಈ ಭೇದವು ಅಳಿದು ಹೋಗಲು ಪೂರ್ಣವಾಗಿ ಸಾಧ್ಯವಾಗಲಿಲ್ಲ; ೪೦ ವರುಷಗಳ ನಂತರ ಲಾರ್ಡ ರೀಡಿಂಗರ ಆಳಿಕೆಯಲ್ಲಿ ಕಾಯದೆಯಾಗಿ ಈ ವಿಷಯದಲ್ಲಿಯ ವಿಷಮತೆಯು ದೂರ್ಮಡಿಸಲಾಯಿತು.

**(೯) ಕಾಂಗ್ರೆಸಪೂರ್ವದ ಚಟುವಟಿಕೆಗಳು:—** ಮೇಲೆ ಹೇಳಿದ ಮಾತುಗಳಿಂದ ಕಾಂಗ್ರೆಸಿನ ಸ್ಥಾಪನೆಯ ಪೂರ್ವದಲ್ಲಿಯೆ ಹಿಂದೀ ರಾಜಕೀಯ ಜೀವನದ ಪ್ರಾರಂಭವಾಗಿತ್ತೆಂಬುದು ಒಡೆದು ಕಾಣುವದು. ರಾಜಕೀಯ ಜೀವನದ ಬೆಳುವಣಿಗೆಗೆ ರಾಜಕೀಯ ಮುಖಂಡರು ಅವಶ್ಯವಾಗಿ ಬೇಕಾಗುವರು. ಬಂಡಾಯದ ನಂತರ ಸಂಸ್ಥಾನಿಕರೂ ಸರದಾರರೂ ಸುಮ್ಮನಾದರು. ಜಮೀನದಾರರಲ್ಲಿ ರಾಜೇಂದ್ರಲಾಲ ಮಿತ್ರರಂತಹ ಒಬ್ಬಿಬ್ಬರು ಸಾರ್ವಜೀವನವನ್ನು ಸೇರಿದರು. ಸರಕಾರೀ ನೋಕರರಂತೂ ಹೇಳಿಕೇಳಿ ದಾಸರು. ವ್ಯಾಪಾರಿಗಳೂ ಒಕ್ಕಲಿಗರೂ ವಿದ್ಯಾವಂತರಿರದ್ದರಿಂದ ಸಾರ್ವಜನಿಕ ಪ್ರಶ್ನೆಗಳನ್ನು ಕುರಿತು ಚರ್ಚೆ ಮಾಡಲು ಸಮರ್ಥರಿರಲಿಲ್ಲ. ಆದುದರಿಂದ ಸಾರ್ವಜನಿಕ ಜೀವನವನ್ನು ಸಾಗಿಸುವ ಭಾರವು ಮುಖ್ಯವಾಗಿ ಬ್ಯಾರಿಸ್ಟರ-ವಕೀಲರ ಮೇಲೆಯೆ ಬಿದ್ದಿತು. ಬಂಗಾಲದ ಪ್ರಮುಖ ಕಾರ್ಯಕರ್ತರಲ್ಲಿ ಮನಮೋಹನ ಘೋಸ, ಲಾಲಮೋಹನ ಘೋಸ, ಆನಂದಮೋಹನಬೋಸ, ಉಮೇಶಚಂದ್ರ ಬ್ಯಾನರ್ಜಿ, ಇವರೂ, ಮುಂಬಯಿಯಲ್ಲಿ ವಿಶ್ವನಾಥ ನಾರಾಯಣ ಮಂಡಲಿಕ, ಕಾಶಿನಾಥ ತ್ರಿಂಬಕ ತೆಲಂಗ, ಫಿರೋಜಶಹಾ ಮೆಥಾ, ಬುದ್ರುದ್ದಿನ ತಯ್ಯಬಜಿ, ನಾರಾಯಣ ಗಣೇಶ ಚಂದಾವರಕರ, ಇವರೆಲ್ಲರೂ ವಕೀಲಿ ಧಂದೆಗೆ ಸೇರಿದವರು. ಸರಕಾರಿ ನೋಕರಿಯಲ್ಲಿದ್ದರೂ ನ್ಯಾಯಮೂರ್ತಿ ರಾನಡೆ ಮತ್ತು ರಮೇಶಚಂದ್ರ ದತ್ತರು ಹಿಂದೀ ಆಕಾಂಕ್ಷೆಗಳಿಗೆ ತಮ್ಮ ಪೂರ್ಣ ಸಹಾನುಭೂತಿಯನ್ನಿತ್ತರು. ಕಾಂಗ್ರೆಸು ಉದಯವಾಗುವ ಸುಮಾರಿಗೆ ಮಹಾರಾಷ್ಟ್ರ

ಪಂಜಾಬಗಳಲ್ಲಿ ಸಾರ್ವಜನಿಕ ಜೀವನಕ್ಕೆ ಕಳೆ ತಂದುಕೊಡಬಲ್ಲಂತಹ ಕೆಲವು ವ್ಯಕ್ತಿಗಳೂ ಸಂಸ್ಥೆಗಳೂ ಉದಯವಾದವು. ಲಾಲಾ ಲಜಪತರಾಯ ಲಾಲಾ ಹಂಸರಾಯರು ಆರ್ಯಸಮಾಜದ ಪರವಾಗಿಯೂ ಮಹಾರಾಷ್ಟ್ರದಲ್ಲಿ ವಿಷ್ಣುಶಾಸ್ತ್ರಿ ಚಿಪಳೂಣಕರ, ಆಗರಕರ, ಟಿಳಕ, ಮುಂತಾದವರೂ ಸ್ವತಂತ್ರರಾಗಿಯೂ ಶಿಕ್ಷಣ ಸಂಸ್ಥೆಗಳನ್ನೇರ್ಪಡಿಸುವದರಲ್ಲಿ ತೊಡಗಿದ್ದರು. ರಾಷ್ಟ್ರೀಯ ಒಲವಿನ ವೃತ್ತಪತ್ರಗಳೂ ಅಲ್ಲಲ್ಲಿ ಸ್ಥಾಪಿಸಲ್ಪಟ್ಟವು. ಲಾಹೋರದಲ್ಲಿ ಟ್ರಿಬ್ಯೂನ, ಕಲಕತ್ತೆಯಲ್ಲಿ ಬಂಗಾಲಿ, ಪುಣೆಯಲ್ಲಿ ಕೇಸರಿ-ಮರಾಠಾ, ಮದ್ರಾಸಿನಲ್ಲಿ ಹಿಂದೂ ಇಂತಹ ರಾಷ್ಟ್ರೀಯ ವೃತ್ತಪತ್ರಗಳು ಹೊರಡ ಹತ್ತಿದವು.

**(೧೦) ರಾಜಕೀಯ ಮತಪ್ರಚಾರವು: ಸುಶಿಕ್ಷಿತರ ವಿಚಾರಗಳು** (೧೮೭೫):- ದೇಶಿ ವರ್ತಮಾನಪತ್ರಗಳ ಕಾಯದೆ, ಸಿವಿಲ ಸರ್ವಿಸ, ಇಲ್ಬರ್ಟ ಬಿಲ ಮುಂತಾದ ಪ್ರಶ್ನೆಗಳ ಆಂದೋಲನದಂತೆಯೆ ಸಾಮಾನ್ಯವಾಗಿ ಹಿಂದೀ ಜನರಿಗೆ ರಾಜ್ಯದಾಡಳಿತೆಯಲ್ಲಿ ಹೆಚ್ಚು ತರಗತಿಯ ಅಧಿಕಾರಗಳಿರಬೇಕೆಂದು ಮತಪ್ರಚಾರವು ಕಾಂಗ್ರೆಸಿನ ಮೊದಲೆ ಪ್ರಾರಂಭಿಸಲ್ಪಟ್ಟಿತ್ತೆಂಬುದು ಮೇಲಿನ ಮಾತಿನಿಂದ ಗೊತ್ತಾಗುವದು. ಬ್ರಿಟಿಶ ರಾಜ್ಯದಿಂದ ಹಿಂದುಸ್ಥಾನಕ್ಕೆ ಅಲಭ್ಯ ಲಾಭಗಳಾಗಿರುವವೆಂದು ಆಗಿನ ಮುಖಂಡರ ಮನವರಿಕೆಯಾಗಿತ್ತು ಲಾಲ ಮೋಹನಘೋಸರು ೧೮೭೯ ಜುಲೈ ೩ ತಾರೀಖಿನ ದಿನ ಲಂಡನದಲ್ಲಿ ಮಾಡಿದ ಭಾಷಣದಲ್ಲಿ ಇಂಗ್ಲಿಷ ರಾಜ್ಯದ ಸ್ತುತಿಯನ್ನು ಈ ಮಾತಿನಿಂದ ಮಾಡಿದರು. "ಇಂಗ್ಲಂಡದ ಹಿತಮಯವಾದ ರಾಜ್ಯದ ಆಶ್ರಮದಲ್ಲಿ ಹಿಂದುಸ್ಥಾನದಲ್ಲಿ ಆರ್ಥಿಕ ನೈತಿಕ ಉನ್ನತಿಯ ಹೊಸಯುಗವು ಪ್ರಾರಂಭವಾದಂತಾಗಿದೆ. ನಮ್ಮ ದೇಶದಲ್ಲಿ ನೀವು ರೇಲ್ವೆಗಳ ಜಾಳಿಗೆಯನ್ನು ಹಬ್ಬಿಸಿರುವಿರಿ; ಪಾಶ್ಚಿಮಾತ್ಯ ಶಿಕ್ಷಣ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಯ ಲಾಭವನ್ನು ಮಾಡಿಕೊಟ್ಟಿರಿ. ನಿಮ್ಮ ವಾಙ್ಮಯ, ರಾಜಕೀಯ ಸ್ವಾತಂತ್ರ್ಯದ ವಿವೇಚನೆಯಾದ ನಿಮ್ಮ ಇತಿಹಾಸ ಇವುಗಳ ವಿಷಯಕ್ಕೆ ನಮ್ಮ ಮನಸ್ಸಿನಲ್ಲಿ ಒಳ್ಳೆ ಅಭಿಮಾನವನ್ನು ಹುಟ್ಟಿಸಿರುವಿರಿ. ನಿಮ್ಮ ಅಮರ ಕವಿಗಳ ಕಾವ್ಯಗಳೂ ನಿಮ್ಮ ಮಹನೀಯ ಇತಿಹಾಸಕಾರರ ಗ್ರಂಥಗಳೂ, ನಿಮ್ಮ ರಾಜಕೀಯ ಮುಖಂಡರ ಚರಿತ್ರೆಗಳೂ ಇಲ್ಲಿಯಷ್ಟೆಯೆ ಹಿಂದುಸ್ಥಾನದಲ್ಲಿಯೂ

ಸೂಕ್ಷ್ಮ ಅಧ್ಯಯನದ ವಿಷಯಗಳಾಗಿವೆ. ಇಂಗ್ಲಂಡವೆಂದರೆ ಸ್ವಾತಂತ್ರ್ಯದ ತವರ್ಮನೆ, ನ್ಯಾಯದೇವತೆಯ ಮಂದಿರ ಎಂಬ ಮಾತನ್ನು ನೀವು ನಮಗೆ ಕಲಿಸಿರುವಿರಿ; ಇಂಗ್ಲಂಡಿಗೆ ಬಂದು ಇಲ್ಲಿಯ ವೈಭವಪೂರ್ವಕವಾದ ಸಂಸ್ಥೆಗಳನ್ನು ನೋಡಿ ನಿಮ್ಮ ಆದರಾತಿಥ್ಯಗಳನ್ನು ಅನುಭವಿಸುವ ಭಾಗ್ಯವಿದ್ದ ನನ್ನಂತಹ ಪಾಮರರ ಮನಸ್ಸಿನಲ್ಲಿ ನಿಮ್ಮ ವಿಷಯವಾಗಿ ಆದರವೂ ಪ್ರೇಮವೂ ತುಂಬಿ ತುಳುಕುತ್ತವೆ. ನಮ್ಮ ಘೋರ ರಾಜಕೀಯ ನಿದ್ರೆಯೊಳಗಿಂದ ನಮ್ಮನ್ನು ಎಬ್ಬಿಸಿರುವಿರಿ; ನಮ್ಮಲ್ಲಿ ಹೊಸ ರಾಷ್ಟ್ರೀಯ ಚೈತನ್ಯವನ್ನು ಹುಟ್ಟಿಸಿರುವಿರಿ; ನೀವು ಮಾಡಿದ ಕಲ್ಯಾಣದಂತೆಯೆ ಹಿಂದೀ ಜನರ ಮನಸ್ಸಿನ ಕೃತಜ್ಞತೆಯೂ ದೃಢವಾಗುತ್ತ ನಡೆದಿದೆ." ಲಾಲಮೋಹನರು ಇದೇ ಭಾಷಣದಲ್ಲಿ ಲಾರ್ಡ ಲಿಟನರ ದಬ್ಬಾಳಿಕೆಯ ಧೋರಣವನ್ನು ನಿಷೇಧಿಸಿದರು. ಲಾರ್ಡ ಲಿಟನರ ಆಳಿಕೆಯ ಅನೇಕ ಅನ್ಯಾಯಗಳನ್ನು ವಿವರಿಸಿ ಲಾಲಮೋಹನರು ರಾಜ್ಯದಾಡಳಿತೆಯ ಮುಖ್ಯವಾದ ಕುಂದನ್ನು ವಿವರಿಸಿದರು: "ನಾನು ಇದುವರೆಗೆ ವಿವೇಚಿಸಿರುವ ಎಲ್ಲ ಕುಂದುಗಳಿಗೂ ಮೂಲಾಧಾರದಂತಿರುವ ಮಾತೆಂದರೆ, ಹಿಂದುಸ್ತಾನದ ಆಡಳಿತೆಯಲ್ಲಿ ಪ್ರಜೆಗಳಿಗೆ ಏನೂ ಪ್ರಾತಿನಿಧ್ಯವಿಲ್ಲ. ಯಾವದೊಂದು ಪ್ರಜಾಪದ್ಧತಿಯ ಆಡಳಿತೆಯು ನಮಗೆ ದಯಪಾಲಿಸಲ್ಪಡಬೇಕೆಂದು ಸುಶಿಕ್ಷಿತರ ಸ್ಥಿರವಾದ ಮನವರಿಕೆಯಾಗಿದೆ. ಇಂತಹ ಮಾತುಗಳ ಕಡೆಗೆ ಆಂಗ್ಲೋಇಂಡಿಯನರು ಕೇವಲ ತಿರಸ್ಕಾರದಿಂದ ನೋಡುವರೆಂದು ನಮಗೆ ಗೊತ್ತಿದೆ; ಆದರೆ ಅಖಂಡ ರಾಷ್ಟ್ರದ ಕೂಗು ನಮ್ಮ ನಿಮ್ಮ ನಡುವೆ ಪಸರಿಸಿರುವ ಸಮುದ್ರವನ್ನು ದಾಟಿ ತನ್ನ ಮನೋವಾಂಛೆಯನ್ನು ಸ್ವಲ್ಪ ಕಾಲದಲ್ಲಿ ಕೈಗೂಡಿಸಿಕೊಳ್ಳುವ ಸಮಯವು ಸಮೀಪಬರಹತ್ತಿದೆಯೆಂದು ನನಗೆ ಅನಿಸುತ್ತದೆ; ಉದಾರಪರಂಪರೆಯುಳ್ಳ ಇಂಗ್ಲಂಡು ತನ್ನ ಇತಿಹಾಸವನ್ನು ಅಲ್ಲಗಳೆದು ಪ್ರಜಾಸತ್ತಾತ್ಮಕ ರಾಜ್ಯದ ಹಕ್ಕುಗಳನ್ನು ನಮಗೆ ದಯಪಾಲಿಸದೆ ಇರಲಾರದೆಂದು ನನ್ನ ಭಾವನೆಯಿದೆ."

ಆಗಿನ ಸಮಾಜದ ಸುಶಿಕ್ಷಿತರ ಮನಸ್ಸಿನ ಮೇಲೆ ಮ್ಯಾಝಿನಿಯಂತಹ ರಾಷ್ಟ್ರೀಯ ತತ್ತ್ವಜ್ಞನ ಉದಾಹರಣೆಯ ಪರಿಣಾಮವೂ ಬಹಳವಾಯಿ

ತೆಂಬು ಸುರೇಂದ್ರನಾಥ ಬ್ಯಾನರ್ಜಿಯುವರು ತಮ್ಮ ಆತ್ಮವೃತ್ತದಲ್ಲಿ ಬರೆದಿರುವರು: " ನನ್ನ ಮನಸಿನ ಮೇಲೆ ಮ್ಯಾಝಿನಿಯು ಬರಹಗಳ ಪರಿಣಾಮವು ವಿಲಕ್ಷಣವಾಯಿತು. ಮ್ಯಾಝಿನಿಯ ಅತುಲ ದೇಶಭಕ್ತಿ, ಉಚ್ಚಧ್ಯೇಯಗಳು, ಭೂತದಯೆ, ಇವೆಲ್ಲವೂ ನನ್ನ ಅಂತಃಕರಣವನ್ನು ಆಕ್ರಮಿಸಿಕೊಂಡವು. ಮ್ಯಾಝಿನಿಯು ಕ್ರಾಂತಿಯ ತತ್ವಗಳು ನಮ್ಮ ದೇಶಕ್ಕೆ ಅಯುಕ್ತವಾದವುಗಳೆಂದು ಅವನ್ನು ಬಿಟ್ಟುಕೊಟ್ಟು ಅವನ ಸ್ವಾರ್ಥತ್ಯಾಗವನ್ನೂ ಕರ್ತವ್ಯದಕ್ಷತೆಯನ್ನೂ ಜನಹಿತಕ್ಕಾಗಿ ಅವನು ತೋರಿದ ದೃಢಶ್ರದ್ಧೆಯನ್ನೂ ನನ್ನ ಗುರಿಯನ್ನಾಗಿ ಮಾಡಿಕೊಂಡೆನು. ರಾಜಕೀಯ ಕ್ಷೇತ್ರದಲ್ಲಿ ಉದಾತ್ತ ವಿಚಾರಗಳ ಮೂರ್ತಿಮಂತ ಪುತ್ಥಳಿಯೂ, ಇಟಾಲಿಯನ ಐಕ್ಯದ ಪುರೋಹಿತನೂ, ಜನಾಂಗದ ಹಿತಚಿಂತಕನೂ ಆದ ಮ್ಯಾಝಿನಿಯು ಜೀವನಚರಿತ್ರೆಯನ್ನು ಆದರ್ಶವೆಂದು ನಾನು ವಿದ್ಯಾರ್ಥಿಗಳೆದುರಿಗೆ ಇಟ್ಟೆನು. ಮ್ಯಾಝಿನಿಯು ಇಟಾಲಿಯನ ಐಕ್ಯವನ್ನು ಪದೇಶಿಸಿದನು. ನಮಗೆ ಹಿಂದೀ ಐಕ್ಯವು ಬೇಕಾಗಿದ್ದಿತು. " ಈ ರೀತಿ ಪಾಶ್ಚಿಮಾತ್ಯ ಶಿಕ್ಷಣದಿಂದಲೂ, ಪಾಶ್ಚಿಮಾತ್ಯ ಆದರ್ಶ ವಿಭೂತಿಗಳ ಉದಾಹರಣೆಯಿಂದಲೂ, ಲಾರ್ಡ ಲಿಟನರಂತಹ ಅಳಸರ ದಬ್ಬಾಳಿಕೆಯಿಂದಲೂ ಜನರಲ್ಲಿ ದೇಶಾಭಿಮಾನದ ಜ್ಯೋತಿಯು ತೊಳಗಿ ಬೆಳಗಹತ್ತಿತು. ಕಾಂಗ್ರೆಸು ಹುಟ್ಟುವದಕ್ಕೆ ಮೊದಲೆ ಅಂತಹ ಸಂಸ್ಥೆಗೆ ಅನುಕೂಲ ವಾತಾವರಣವು ಉತ್ಪನ್ನವಾಗುತ್ತಲಿತ್ತು.

(೧೧) **ದಾದಾಭಾಯಿ ನೌರೋಜಿಯುವರ ವಿಚಾರಗಳು** (೧೮೮೦):— ಮೊದಲಿಗೆ ಖಾಸಗಿ ಕಾರ್ಯಕ್ಕೆಂದು ಇಂಗ್ಲೆಂಡಿಗೆ ಹೋಗಿದ್ದ ದಾದಾಭಾಯಿ ನೌರೋಜಿಯುವರು ಹಿಂದುಸ್ತಾನದ ಬಡತನದ ವಿಷಯಕ್ಕೆ ಅನೇಕ ಸಂಗತಿಗಳನ್ನು ಸೇಕ್ರೇಟರಿ ಆಫ್‌ಸ್ಟೇಟರವರಿಗೆ ತಿಳಿಸಿದರು. ಆಗಿನ ಹಿಂದುಸ್ತಾನದ ಪರಿಸ್ಥಿತಿಯ ವಿಷಯದಲ್ಲಿ ಹಿಂದುಸ್ತಾನದ ಸುಶಿಕ್ಷಿತರ ವಿಚಾರಗಳು ಹೇಗಿದ್ದವೆಂಬದನ್ನು ತಿಳಿದುಕೊಳ್ಳಲು ಈ ಪತ್ರಗಳ ಉಪಯೋಗ ಬಹಳವಾಗುತ್ತದೆ. ೧೮೮೦ನೇ ಇಸ್ವಿಯ ನೋವೆಂಬರ ೧೬ನೇ ತಾರೀಖಿನ ದಿವಸ "ಹಿಂದುಸ್ತಾನದ ಬಡತನ ಮತ್ತು ಬ್ರಿಟಿಶ ಸರಕಾರದ ಈಗಿನ ಧೋರಣದ ವಿಷಯಕ್ಕೆ ದೇಶೀ ಜನರ ಅಭಿಪ್ರಾಯವು " ಈ ತಲೆಬರಹವನ್ನು ಕೊಟ್ಟು ಒಳ್ಳೆ ಮನನೀಯವಾದ ಪತ್ರವನ್ನು ಅವರು ಸ್ಟೇಟ

ಸೆಕ್ರೇಟರಿ ಕಡಿಗೆ ಕಳಿಸಿದರು. ಆ ಪತ್ರದಲ್ಲಿಯ ಕೆಲವು ಅಂಶಗಳನ್ನು ಇದರ ಡಿಯಲ್ಲಿ ಕೊಟ್ಟಿರುವೆವು.

"ನಾನು ನನ್ನ ಹಿಂದಿನ ಪತ್ರದಲ್ಲಿ ಹಿಂದುಸ್ಥಾನವು ಸರಕಾರೀ ಧೋರಣದಿಂದ ಬಡತನಕ್ಕೆ ಈಡಾಗಿದೆ, ಈ ಬಡತನಕ್ಕೆ ಮುಖ್ಯವಾದ ಕಾರಣ ವೆಂದರೆ ಪರದೇಶಿ ಅಧಿಕಾರಿಗಳನ್ನು ನೇಮಿಸಿಕೊಂಡು ಅವರ ಸಂಬಳವೆಂದು ಪರದೇಶಕ್ಕೆ ಹೋಗುವ ದುಡ್ಡಿನ ಪ್ರವಾಹವು, ಈ ಪ್ರವಾಹವು ನಿಂತು ಹಿಂದುಸ್ಥಾನದ ಜನರಿಗೆ ಸಹಜವಾಗಿಯೆ ಸಲ್ಲುವ ಅಧಿಕಾರಗಳನ್ನು ಅವ ರಿಗೆ ಕೊಡುವವರೆಗೆ ಹಿಂದುಸ್ಥಾನಕ್ಕೆ ಸುಖದ ದಿನಗಳು ಬರಲಾರವು, ಎಂಬ ಮಾತುಗಳನ್ನು ನಾನು ವಿಶದಪಡಿಸಿದೆನು. ಈ ಪತ್ರದ ಮುಖಾಂತ ರವಾಗಿ ಹಿಂದುಸ್ಥಾನದಲ್ಲಿ ಆರ್ಥಿಕ ಅಧಃಪಾತದಷ್ಟೆ ತೀವ್ರವಾದ ನೈತಿಕ ಅಧಃಪಾತವು ನಡೆದಿದೆಯೆಂದು ನಾನು ತೋರಿಸಬಯಸುವೆನು.

"ಹಿಂದುಸ್ಥಾನದಲ್ಲಿ ಯುರೋಪಿಯನ್ನರೆ ದೊಡ್ಡ ದೊಡ್ಡ ಸ್ಥಳಗ ಳಿಗೆ ನೇಮಿಸಲ್ಪಡುತ್ತಾರೆ. ಹಿಂದುಸ್ಥಾನದಲ್ಲಿರುವಾಗ ಅವರು ದುಡ್ಡು ಗಳಿಸುತ್ತಾರೆ. ಜ್ಞಾನವನ್ನೂ, ಅನುಭವವನ್ನೂ ಗಳಿಸುತ್ತಾರೆ; ಅವರು ತಿರುಗಿ ಇಂಗ್ಲೆಂಡಿಗೆ ಹೋದರೆಂದರೆ, ಅವರೊಡನೆ ದುಡ್ಡೂ, ದೊರೆತ ಅನು ಭವವೂ ಕೂಡೇ ಹೋಗಿಬಿಡುತ್ತವೆ. ರಾಷ್ಟ್ರೀಯ ಏಳ್ಗೆಯ ಕಾರ್ಯ ದಲ್ಲಿ ಮುಖಂಡರಾಗಬಹುದಾದ ಹಿರಿಯರು ಹಿಂದುಸ್ಥಾನಕ್ಕೆ ದೊರೆಯು ವದೆ ಇಲ್ಲ. ಅಯ್ಯೋ ಇದೆಂತಹ ಹಾನಿಯು! ಪ್ರತಿಯೊಬ್ಬ ಯುರೋ ಪಿಯನ್ ಅಧಿಕಾರಿಯು ಜನರಿಂದ ದೂರದಲ್ಲಿರುವನು. ಅವನು ಜನರ ಬೌದ್ಧಿಕ ಸಾಮಾಜಿಕ ನೈತಿಕ ಜೀವನದಲ್ಲಿ ಮುಖಂಡನಾಗಲಾರನು. ಅವ ನಿಗೆ ಜನರ ಪರಿಚಯವಿಲ್ಲ. ಜನರ ಹಿತಕ್ಕಾಗಿ ಅವನು ಯಾವದೆ ರೀತಿ ಯಿಂದ ಚಿಂತೆಪಡುವದಿಲ್ಲ. ಯುರೋಪಿಯನ್ನರು ಜನರ ಮುಖಂಡರಾಗ ಲಾರರು. ಅವರು ಜನತೆಯವರಲ್ಲಿ ಜನತೆಯ ವಿಚಾರ ಮತ್ತು ಭಾವನೆ ಗಳನ್ನು ಅವರು ತಿಳಿದುಕೊಳ್ಳಲಾರರು. ಜನರ ಸುಖದುಃಖದ ಪರಿವೆಯು ಅವರಿಗಿರುವದಿಲ್ಲ. ಇಷ್ಟೆ ಅಲ್ಲ, ಯುರೋಪಿಯನ್ನ ಮತ್ತು ದೇಶೀ ಜನರ ನಡುವಿನ ವೈಷಮ್ಯವು ದಿನ ದಿನಕ್ಕೂ ಬೆಳೆಯುತ್ತ ಇದೆ. ಯುರೋಪಿಯ ನ್ನರು ಈ ತರದ ವೈಷಮ್ಯವನ್ನು ಬೆಳೆಯಿಸುತ್ತಿದ್ದಾರೆ. ರಾಷ್ಟ್ರಕ್ಕೆ ಯೋಗ್ಯ

ರಾಪ ಮುಖಂಡರಿರದಿದ್ದರೆ ರಾಷ್ಟ್ರದ ಮುಂದಿನ ಪೀಳಿಗೆಗಳು ಸರಕಾರಕ್ಕೆ ಅಹಿತವನ್ನು ಮಾಡುವಂಥ ದಿಕ್ಕುಗಳಲ್ಲಿ ಕಾರ್ಯಕ್ರಮವನ್ನು ಹೂಡ ಬಹುದು.ದೇಶದಲ್ಲಿಯ ಸುಶಿಕ್ಷಿತರಿಗೆ ತನ್ನ ಮಾತೃಭೂಮಿಯಲ್ಲಿ ಯೋಗ್ಯ ವಾದ ಸ್ಥಳವಿಲ್ಲ. ಅವರು ಬೇಕಾದರೆ ಬಿಕ್ಕೆ ಬೇಡಬಹುದು, ಬೀದಿಗಳಲ್ಲಿ ಕಲ್ಲು ಒಡೆಯಬಹುದು; ಆದರೆ ಅವರ ಆಸ್ತಿಯ ಅಪಹಾರವನ್ನು ಮಾಡಲು ನೂರಾರು ಯುರೋಪಿಯನ್ನ ಅಧಿಕಾರಿಗಳು ಇಂಗ್ಲಂಡದಿಂದ ಹೋಗಲೆ ಬೇಕು. ಈ ವಿಷಯದಲ್ಲಿ ಬ್ರಿಟಿಶ ಸರಕಾರದವರು ಕೊಟ್ಟ ವಚನಗಳು ಗಾಳಿಯ ಪಾಲಾಗಿ ಹೋದವು.

" ಇವೆಲ್ಲ ಅಪಕೃತ್ಯಗಳ ಫಲವನ್ನು ಬ್ರಿಟಿಶ ಸರಕಾರದವರು ಅನು ಭೋಗಿಸಲೆಬೇಕಾಗುವದು. ಸುಶಿಕ್ಷಿತರ ಕೂಗಾಟವೇನೋ ಸದ್ಯಕ್ಕೆ ಸ್ವಲ್ಪ ಇರಬಹುದು. ಸುಶಿಕ್ಷಿತರ ವಿಚಾರಗಳಿಗೆ ಇನ್ನೂ ಸ್ಥಿರವಾದ ರೂಪವು ಬಂದಿಲ್ಲ. ಒಮ್ಮೆ ಆ ವಿಚಾರಗಳು ಬೆಳೆಯಹತ್ತಿದವೆಂದರೆ ಅವು ಎಲ್ಲಿಯವರೆಗೆ ಬೆಳೆಯುವವೋ ದೇವರೇ ಬಲ್ಲ. ಇದೇ ರೀತಿಯ ಆರ್ಥಿಕ ಮತ್ತು ನೈತಿಕ ಅಧಃಪಾತವು ನಡೆದರೆ ಜನತೆಯಲ್ಲಿ ಒಂದು ದೊಡ್ಡ ಕ್ಷೋಭ ಉಂಟಾಗಿ ಹಿಂದುಸ್ತಾನವು ದಬ್ಬಾಳಿಕೆಯಿಂದ ನಾಶವಾಗಬಹುದು, ಇಲ್ಲವೆ ದಬ್ಬಾಳಿಕೆಯನ್ನು ಮಾಡುವ ಆಳರಸರ ಅಧಿಕಾರವನ್ನು ನಾಶಮಾಡಿ ಬಿಡಬಹುದು.

" ಹಿಂದುಸ್ತಾನದ ಬೇರೆ ಬೇರೆ ಜಾತಿಗಳಲ್ಲಿ ಒಡಕು ಇರುವವರೆಗೆ ಹಿಂದುಸ್ತಾನದಲ್ಲಿಯ ರಾಜ್ಯವು ಸುರಕ್ಷಿತವಾಗಿರುವದೆಂದು ಕೆಲವು ಇಂಗ್ಲಿ ಷರ ನಂಬಿಗೆಯಿದೆ. ಆದರೆ ವಿವಿಧ ಜನಾಂಗಗಳಲ್ಲಿ ಈಗ ಒಕ್ಕಟ್ಟು ಬೆಳೆಯ ಹತ್ತಿದೆ. ರಾಜಕೀಯ ಜೀವನದಲ್ಲಿ ಜನರು ಹೆಚ್ಚು ಲಕ್ಷ ಹಾಕಹತ್ತಿದ್ದಾರೆ. ಹಿಂದಿ ಕೈಗಾರಿಕೆಗಳು ನಷ್ಟವಾದದ್ದರ ವಿಷಯಕ್ಕೆ ಕೆಲವು ಹಾಡುಗಳನ್ನು ಪಶ್ಚಿಮ ಹಿಂದುಸ್ತಾನದ ಜನರು ಕಟ್ಟಿರುವರೆಂದು ಡಾ. ಬರ್ಡವುಡ್‌ರು ಹೇಳಿರುವರು. ಆ ಹಾಡುಗಳಲ್ಲಿ ರಾಜದ್ರೋಹವಿಲ್ಲವೆನ್ನುವದು ನಿಜ. ಆದರೆ ಈಗಿನ ಅವನತ ಸ್ಥಿತಿಯು ಹೀಗೆಯೆ ಮುಂದೆ ಸಾಗಿದರೆ ಇಂಗ್ಲಿಷ ರಾಜ್ಯದ ವಿರುದ್ಧ ಜನರ ಭಾವನೆಗಳು ಉಂಟಾಗಬಹುದು. ಸದ್ಯಕ್ಕಂತೂ ಹಿಂದಿ ಜನರು ರಾಜನಿಷ್ಠರಿರುವರು. ಆದರೆ ಇಂಗ್ಲಿಷ ರಾಜ್ಯಕರ್ತರ ನಡೆ

ಮತ್ತು ಸುಡಿ ಇವುಗಳ ನಡುವಿನ ಭೇದವನ್ನು ಹಿಂದಿ ಜನರು ಕಂಡು ಹಿಡಿಯುತ್ತಿದ್ದಾರೆ.

" ಇಂಗ್ಲಿಷರ ಮೊದಲು ಹಿಂದುಸ್ಥಾನಕ್ಕೆ ಬಂದ ಪರದೇಶೀ ದಾಳಿಕಾರರಲ್ಲಿ ಅನೇಕರು ಇಲ್ಲಿಯೇ ನೆಲೆಗೊಂಡರು. ದೇಶದಲ್ಲಿಯ ಧನವು ದೇಶದಲ್ಲಿಯೇ ಉಳಿಯಿತು. ಮೊದಲಿನ ಅರಸರು ಕಟುಕರಂತೆ ಅಲ್ಲಿ ಇಲ್ಲಿ ಕಡಿದು ಬಿಡುತ್ತಿದ್ದರು. ಆದರೆ ಇಂಗ್ಲಿಷರು ಮಾತ್ರ ಶಾಸ್ತ್ರಗನ್ನರಿತವರು; ಗಾಯವು ಕಾಣದ ಹಾಗೆ ಒಳಗಿಂದೊಳಗೆ ಅಂತಃಕರಣವನ್ನು ಹೇಗೆ ಕೊಯ್ಯಬೇಕೆಂಬುದು ಅವರಿಗೆ ಗೊತ್ತಿದೆ. ಮೇಲೆ ಮಾತ್ರ ಸುಧಾರಣೆ ಪ್ರಗತಿ ಮುಂತಾದ ನವಿಮಾತಿನ ಪ್ಲ್ಯಾಸ್ಟರ ಪಟ್ಟಿಯನ್ನು ಒಡಿದು ಬಿಡುತ್ತಾರೆ. "

" ನಿಜವಾಗಿ ವಿಚಾರ ಮಾಡಿ ನೋಡಿದರೆ ಹಿಂದುಸ್ಥಾನಕ್ಕೆ ರಾಜಕೀಯ ಹಕ್ಕುಗಳು ದೊರೆಯಬೇಕು. ಒಮ್ಮೆಲೆ ಇಂಗ್ಲಂಡದಲ್ಲಿರುವಂಥ ಪಾರ್ಲಮೆಂಟು ಹಿಂದುಸ್ಥಾನಕ್ಕೆ ದೊರೆಯಲಾರದೆಂದು ನಮಗೆ ಗೊತ್ತಿದೆ. ಆದರೆ ಆಡಳಿತೆಯಲ್ಲಿ ಜನರಿಗೆ ಪ್ರಾತಿನಿಧ್ಯವು ಇರುವಂತೆ ಸ್ವಲ್ಪಾದರೂ ಪ್ರಯತ್ನವನ್ನು ಇಂಗ್ಲಂಡವು ಮಾಡಿರುವದೆ? ಈಗಿನ ಕಾಯದೆ-ಮಂಡಲಗಳಲ್ಲಿ ಕೆಲವು ಅಪ್ರಬುದ್ಧ ಮೂಕರನ್ನು ಸರಕಾರದವರು ಸಭಾಸದರೆಂದು ನೇಮಿಸುತ್ತಾರೆ. ಈ ವಿಷಯದಲ್ಲಿ ಸುಧಾರಣೆಯನ್ನು ಪ್ರಾರಂಭಿಸುವ ಸಮಯವು ಬಂದಿದೆಯೆಂದು ನನಗೆ ಅನಿಸುತ್ತದೆ. ಉದಾಹರಣೆಗಾಗಿ ಮುಂಬಯಿ ಇಲಾಖೆಯನ್ನೆ ತೆಗೆದುಕೊಳ್ಳುವಾ. ಈಗಿನ ಕೌನ್ಸಿಲ್ಲಿನ ಸಭಾಸದರ ಸಂಖ್ಯೆಯನ್ನು ೨೧ರ ತನಕ ಬೆಳಿಸಿ ಸರಕಾರದಿಂದ ೧೩ ಜನರು ನೇಮಿಸಲ್ಪಡಬೇಕೆಂದೂ ಇಲಾಖೆಯಲ್ಲಿಯ ಪ್ರಮುಖ ಪಟ್ಟಣಗಳು ಎಂಟು ಸಭಾಸದರನ್ನು ಆರಿಸಿಕೊಡಬೇಕೆಂದೂ ಸರಕಾರದವರು ಗೊತ್ತು ಮಾಡಿದರೆಂದು ತಿಳಿದುಕೊಳ್ಳುವ. ಈ ತರದ ವ್ಯವಸ್ಥೆಯಿಂದ ಸರಕಾರಕ್ಕೆ ಬಹುಮತವಂತೂ ಉಳಿಯುವದು. ಜನತೆಯ ಅಭಿಪ್ರಾಯವನ್ನು ಜನತೆಯ ಪ್ರತಿನಿಧಿಗಳು ತಿಳಿಸಬಲ್ಲರು. ಅವರಿಂದ ಸರಕಾರಕ್ಕೆ ಹಿತವೆ ಆಗುವದೆ ಹೊರ್ತು ಅಹಿತವಾಗುವಂತಿಲ್ಲ.

" ಹಿಂದುಸ್ಥಾನಕ್ಕೆ ಬರುವ ಇಂಗ್ಲಿಷ ಅಧಿಕಾರಿಗಳು ಹಿಂದುಸ್ಥಾನದ ಉನ್ನತಿಯನ್ನಂತೂ ಮಾಡುವದಿಲ್ಲ. ಆದರೆ ತಾವೇ ಅಧಃಪಾತವನ್ನು

ಹೊಂದುತ್ತಿದ್ದಾರೆ. ಅವರು ಇಂಗ್ಲೆಂಡಿಗೆ ಮರಳಿ ಬಂದ ನಂತರ ಇಂಗ್ಲಿಷ ಜನರ ಸ್ವಭಾವದಲ್ಲಿಯಾದರೂ ಕಲುಷತೆಯು ಉಂಟಾಗಲಾರದೇ ?

" ಇಂಗ್ಲಿಷ ಜನರು ವಿಚಾರ ಸ್ವಾತಂತ್ರ್ಯದ ಎಲ್ಲಕ್ಕೂ ದೊಡ್ಡ ಪುರಸ್ಕರ್ತರು. ಆದರೆ ಈಗ ಅವರು ಹಿಂದುಸ್ತಾನದ ವಿಚಾರ ಸ್ವಾತಂತ್ರ್ಯವನ್ನು ಕುಗ್ಗಿಸುವ ಕಾಯದೆಯನ್ನು ಮಾಡಬೇಕೆಂದರೆ ಅವರ ಸ್ವಭಾವದಲ್ಲಿ ಎಂಥ ದೊಡ್ಡ ಅಧಃಪಾತವು ಆಗಿರಬೇಕು! ಬ್ರಿಟಿಶ ಸರಕಾರದ ಮೇಲೆ ಜನರ ಭಕ್ತಿಯಿರುವದೆಂದು ಸರಕಾರೀ ಅಧಿಕಾರಿಗಳು ಬಾಯಿಂದ ಹೇಳುತ್ತಾರೆ. ಆದರೆ ವಿಚಾರಸ್ವಾತಂತ್ರ್ಯವನ್ನು ಕುಗ್ಗಿಸುವ ಕಾಯದೆಯೂ ಜನರನ್ನು ನಿರಾಯುಧರನ್ನಾಗಿ ಮಾಡುವ ಕಾಯದೆಯೂ ಏನು ಹೇಳುತ್ತವೆ? ಈ ಕಾಯದೆಗಳ ಮುಖಾಂತರವಾಗಿ ಜನರ ಪ್ರೇಮವು ತಮ್ಮ ಮೇಲೆ ಇಲ್ಲವೆಂದು ಅಧಿಕಾರಿಗಳೆ ಸಾರಿದಂತಾಗಲಿಲ್ಲವೆ? ಹಿಂದುಸ್ತಾನದಲ್ಲಿಯು ತಮ್ಮ ಆಳಿಕೆಯು ಹಿಂದುಸ್ತಾನಕ್ಕೆ ಸುಖವಾಗುವಂತೆಯೂ ಇಂಗ್ಲಂಡಕ್ಕೆ ಭೂಷಣಾಸ್ಪದವಾಗುವಂತೆಯೂ ಹಿಂದುಸ್ತಾನಕ್ಕೆ ತನ್ನ ಆಡಳಿತೆಯಲ್ಲಿಯು ಯೋಗ್ಯವಾದ ಸ್ಥಾನವನ್ನು ಕೊಡುವದು ಇಂಗ್ಲಿಷರ ಕೈಯಲ್ಲಿದೆ. ದೇವರು ಅವರಿಗೆ ಯೋಗ್ಯವಾದ ಬುದ್ಧಿಯನ್ನು ಕೊಡಲಿ ! "

(೧೨) **ಹಿಂದುಸ್ತಾನದ ಇಂಗ್ಲಿಷ ಹಿತಚಿಂತಕರು**:– ಕಾಲಕಾಲಕ್ಕೆ ಇಂಗ್ಲಿಷ ಪಾರ್ಲಮೆಂಟಿನಲ್ಲಿ ಹಿಂದುಸ್ತಾನದ ವಿಷಯವಾಗಿ ನ್ಯಾಯಬುದ್ಧಿಯನ್ನು ತಾಳಿ ಹಿಂದುಸ್ತಾನದ ಹಿತಕ್ಕಾಗಿ ಹೆಣಗಾಡುವ ಇಂಗ್ಲಿಷರು ಆಗಿಹೋದರು. ಬರ್ಕನ ಟೀಕೆಯಿಂದ ಹಿಂದುಸ್ತಾನದ ಮೊದಲನೆಯ ಗವರ್ನರ ಜನರಲನಾದ ವಾರನಹೆಸ್ಟಿಂಗ್ಸನ ಮೇಲೆ ಹಾವುಸ ಆಫ ಕಾಮನ್ಸಿನವರು ದೊಡ್ಡ ಖಟಲೆಯನ್ನೆ ಹೂಡಿದರು. ಬರ್ಕನ ನಂತರ ಹಿಂದುಸ್ತಾನದ ಹಿತಾಹಿತಗಳಲ್ಲಿ ಲಕ್ಷ್ಯ ಹಾಕಿದ ಪಾರ್ಲಮೆಂಟಿನ ಸಭಾಸದನೆಂದರೆ ಜಾನ ಬ್ರಾಯಿಟ ಇವರು. ೧೮೪೭ ರಿಂದ ೧೮೮೯ರ ವರೆಗೆ ಇವರು ಪಾರ್ಲಮೆಂಟಿನ ಸಭಾಸದರಿದ್ದರು; ಆ ಅವಧಿಯಲ್ಲಿ ಅನೇಕಸಲ ಅವರು ಹಿಂದುಸ್ತಾನದ ಹಿತಕ್ಕಾಗಿ ಕಾದಿದರು. ೧೮೫೩ರಲ್ಲಿ ಅವರು ಪಾರ್ಲಮೆಂಟಿನಲ್ಲಿ ಹಿಂದುಸ್ತಾನದ ವಿಷಯಕ್ಕೆ ಚರ್ಚೆ ನಡೆದಾಗ ಹಿಂದುಸ್ತಾನದ ಆಡಳಿತೆಯ ಮುಖ್ಯದೋಷಗಳನ್ನು ಬೈಲಿಗೆಳೆದರು: " ಹಿಂದುಸ್ತಾನದ ವಿಷಯವೆಂದರೆ

ಒಂದು ವಿಶ್ವಾಸನಿಧಿಯೆಂದು ಬಾಯಿಂದ ಹೇಳುವಿರಿ; ಆದರೆ ಹಿಂದುಸ್ತಾ
ನದ ಆಡಳಿತೆಯ ಮೇಲೆ ನಿಮ್ಮ ಹಿಡಿತವಿಲ್ಲ; ಹಿಂದುಸ್ತಾನದ ವಿಷಯದಲ್ಲಿ
ಯಾವುದೆ ನಿಶ್ಚಿತ ಧೋರಣವಿಲ್ಲ; ನಿಮ್ಮ ಕೋರ್ಟುಗಳಲ್ಲಿ ನ್ಯಾಯವು
ದೊರೆಯಬೇಕಾದರೆ ವಿನಾಕಾರಣ ದುಡ್ಡು ಹಾಳು ವೇಳೆ ಹಾಳು, ಪೋಲೀಸ
ರಲ್ಲಿ ನೀತಿನಡತೆಯಿಲ್ಲ, ರಸ್ತೆ ಕಾಲುವೆಗಳನ್ನು ನೋಡುವವರಿಲ್ಲ, ಎಂದು
ಮುಂತಾಗಿ ಹಿಂದೀ ಜನರು ದೂರು ಹೇಳುತ್ತಾರೆ; ಇವೆಲ್ಲ ಕಾರಣಗಳಿಂದ
ರಾಜ್ಯಪದ್ಧತಿಯಲ್ಲಿ ಬದಲಾವಣೆಯಾಗಬೇಕೆಂದು ಅವರ ಅಭಿಪ್ರಾಯವಿದೆ.
ಜನರಲ್ಲಿ ಬಡತನವು ಮಿತಿಮೀರಿ ಬೆಳೆದಿದೆ, ಇದೂ ರಾಜ್ಯಪದ್ಧತಿಯ ದೋಷವೆ
ನ್ನೈ. ಹಿಂದೀ ಜನರನ್ನು ನೌಕರಿಯಲ್ಲಿ ಸೇರಿಸಿಕೊಳ್ಳಬೇಕೆಂಬ ಮಾತಂತೂ
ಕಾಯದೆಯಲ್ಲಿಯೆ ಉಳಿದು ಹೋಯಿತು. ಮೊದಲೆ ದಾರಿದ್ರ್ಯಕ್ಕೀಡಾದ
ಪ್ರಜೆಗಳ ಮೇಲೆ ಕರಭಾರವು ಬಹಳವಾಗಿದೆ. ಜಿಲ್ಲೆಯಲ್ಲಿ ಬೇಕಾದ್ದನ್ನು
ಮಾಡುವೆನೆಂಬ ಅಧಿಕಾರವುಳ್ಳ ಕಲೆಕ್ಟರನಿಗೆ ಯಾವ ತರದ ಆತಂಕವೂ
ಇಲ್ಲ. ಹಿಂದುಸ್ತಾನದ ಆಡಳಿತೆಯನ್ನು ಅಂಕೆಯಲ್ಲಿರಿಸುವದು ಪಾರ್ಲ
ಮೆಂಟಿಗೆ ಸಾಧ್ಯವಾಗಿಲ್ಲ; ಹಿಂದುಸ್ತಾನ ಸರಕಾರವೆಂದರೆ ತನ್ನ ಕಾರ್ಯ
ವನ್ನು ಅತ್ಯಂತ ಗುಪ್ತರೀತಿಯಿಂದ ಸಾಗಿಸುವ ಹೊಣೆಗೇಡಿಯಾದ ಸಂಸ್ಥೆ
ಯಾಗಿದೆ.'' ಇವೆಲ್ಲ ಮಾತುಗಳನ್ನು ವಿಶದಪಡಿಸಿ, ಬ್ರಾಯಿಟರು ಕೊನೆಗೆ
ಹೀಗೆ ಹೇಳಿದರು: ''ಹಿಂದುಸ್ತಾನದಷ್ಟು ಮೆತ್ತನ್ನ ಜನಾಂಗವು ಇನ್ನೊಂದಿಲ್ಲ.
ನಾವು ರಾಜ್ಯವನ್ನು ಹೆಚ್ಚಿಗೆ ಬೆಳಿಸುವ ಗೋಜಿಗೆ ಇನ್ನೂ ಹೋಗುವದು
ಬೇಡ... ಹಿಂದುಸ್ತಾನದಲ್ಲಿಯ ಜನರಿಗೆ ಶಿಕ್ಷಣಕೊಡಿರಿ, ಅವರನ್ನು ಜಾಣ
ತನದಿಂದ ಆಳಿರಿ. ಮೆಲ್ಲಮೆಲ್ಲಗೆ ಜಾತಿಭೇದಗಳು ಅಳಿಯುವವು; ನಮ್ಮನ್ನು
ಅವರು ಉಪಕಾರಕರ್ತರೆಂದೇ ತಿಳಿದುಕೊಳ್ಳುವರು. ಕ್ರಿಶ್ಚನ ಧರ್ಮವು
ಬೆಳೆಯಬೇಕೆಂದು ನಿಮ್ಮ ಇಚ್ಛೆಯಿದ್ದರೂ ಮೊದಲು ಕ್ರಿಶ್ಚನ ನೀತಿಯಂತೆ
ನಡೆದರೆಯೆ ಅದು ಸಾಧ್ಯವಾಗಬಹುದು.'' ಜಾನ ಬ್ರಾಯಿಟರು ಪಾರ್ಲ
ಮೆಂಟಿನಲ್ಲಿರುವವರೆಗೂ ಹಿಂದುಸ್ತಾನದ ಹಿತಸಂಬಂಧಗಳನ್ನು ರಕ್ಷಿಸಲು
ಒಳ್ಳೆ ಬಲದಿಂದ ಹೋರಾಡಿದರು. ಅವರು ಈ ವಿಷಯಕ್ಕೆ ಮಾಡಿದ ಕೊನೆಯ
ಭಾಷಣದಲ್ಲಿ ಬ್ರಿಟಿಶ ಪಾರ್ಲಮೆಂಟನ್ನು ಹೀಗೆ ಬೇಡಿಕೊಂಡರು: ''ಹಿಂದು
ಸ್ತಾನದ ಜನರು ಅಸಹಾಯರಾಗಿರುವರು, ನಿರ್ಗತಿಕರಾಗಿರುವರು; ಅವರ

ಸಾಹಜಿಕ ಮುಖಂಡರೂ ಅರಸರೂ ತಳ್ಳಲ್ಪಟ್ಟಿರುವರು; ತಮ್ಮನ್ನು ಗೆದ್ದ ಹೊಸ ಜನಾಂಗದೆಡೆಗೆ ಆಸೆಯಿಂದ ಆವರು ನೋಡುತ್ತಲಿರುವರು. ನಾನು ಆ ಜನರ ಪರವಾಗಿ ಅನೇಕಸಲ ನಿಮ್ಮಲ್ಲಿ ಬೇಡಿಕೆಯನ್ನು ಮಾಡಿರುವೆನು.... ನಾವು ಕಳಿಸಿವ ಅಧಿಕಾರಿಗಳ ಅಪರಾಧಗಳಿಂದ ಆ ದುರ್ದೈವಿ ಜನಾಂಗಕ್ಕೆ ಉಂಟಾದ ದುಃಖದಿಂದ ನಿಮ್ಮಲ್ಲಿ ಸ್ವಲ್ಪಾದರೂ ಕರುಣೆ ಹುಟ್ಟಬಾರದೆ!''

ಹೆನರಿ ಫಾಸೆಟರು ಹಿಂದುಸ್ಥಾನದ ಹಿತಚಿಂತಕರಲ್ಲಿ ಇನ್ನೊಬ್ಬರು. ರಾಜ್ಯದಾಡಳಿತೆಯಲ್ಲಿ ಹಿಂದೀ ಜನರಿಗೆ ಯೋಗ್ಯವಾದ ಸ್ಥಾನವು ದೊರೆಯ ಬೇಕೆಂದು ಅವರ ದೃಢವಾದ ಅಭಿಪ್ರಾಯವಾಗಿತ್ತು. ಸಿವಿಲ ಸರ್ವಿಸ ಪರೀಕ್ಷೆಯು ಇಂಗ್ಲಂಡ ಮತ್ತು ಹಿಂದುಸ್ಥಾನ ಇವೆರಡೂ ದೇಶಗಳಲ್ಲಿ ಜರುಗ ಬೇಕೆಂದು ೧೮೬೮ ರಲ್ಲಿ ಇವರು ಒಂದು ಠರಾವು ತಂದಿದ್ದರು. ಹಿಂದುಸ್ಥಾನದವಿಷಯದಲ್ಲಿ ಬ್ರಿಟಿಶ ಪಾರ್ಲಮೆಂಟಿನವರು ತೋರಿಸುವ ಅನಾಸ್ಥೆಯನ್ನು ಇವರು ತೀವ್ರವಾಗಿ ಖಂಡಿಸಿದರು. ಇವರ ಪ್ರಯತ್ನದಿಂದಲ ೧೮೭೧ರಲ್ಲಿ ಹಿಂದುಸ್ಥಾನದ ಆಯವ್ಯಯವನ್ನು ಪರೀಕ್ಷಿಸಲು ಕಮಿಟಿಯು ನೇಮಿಸಲ್ಪಟ್ಟಿತು. ಫಾಸೆಟರು ಹಿಂದುಸ್ಥಾನದ ಹಿತಕ್ಕಾಗಿ ಹೋರಾಡುತ್ತಿರುವದನ್ನು ಅಭಿನಂದಿಸಲು ೧೮೭೨ರಲ್ಲಿ ಕಲ್ಕತ್ತೆಯಲ್ಲಿ ಜಾಹೀರ ಸಭೆ ಸೇರಿತ್ತು. ಹಿಂದುಸ್ಥಾನದ ದುಡ್ಡಿನ ಆಪವ್ಯಯವನ್ನು ಇವರು ಅನೇಕಸಲ ಖಂಡಿಸಿದರು. ೧೮೭೫ರಲ್ಲಿ ಹಿಂದುಸ್ಥಾನದ ಖರ್ಚಿನಿಂದ ಭಾರತಮಂತ್ರಿಗಳಾದ ಸ್ಯಾಲಿಸಬರಿಯವರು ತುರ್ಕಸ್ಥಾನದ ಸುಲ್ತಾನನಿಗಾಗಿ ನಾಚಿಸ ಏರ್ಪಾಡು ಮಾಡಿದ್ದನ್ನು ಫಾಸೆಟರು ತೀವ್ರವಾಗಿ ಖಂಡಿಸಿದರು. ಅಬಿಸಿನಿಯಾದೊಡನೆ ಆದ ಯುದ್ಧದ ವೆಚ್ಚವನ್ನು ಹಿಂದುಸ್ಥಾನದ ತಲೆಯ ಮೇಲೆ ಹೇರಲಾರದೆಂದು ಪ್ರತಿಪಾದಿಸಿದರು; ಇವರ ಪ್ರಯತ್ನದಿಂದಲೆ ಆ ಯುದ್ಧದ ಅರ್ಧ ವೆಚ್ಚವನ್ನು ಇಂಗ್ಲಿಷ ಸರಕಾರದವರು ಸಹಿಸಬೇಕಾಯಿತು. ೧೮೭೫ರಲ್ಲಿ ಮಹಾರಾಣಿಯ ಜೊಚ್ಚಲ ಮಗನು ಹಿಂದುಸ್ಥಾನಕ್ಕೆ ಬಂದಾಗಿನ ಎಲ್ಲ ವೆಚ್ಚವನ್ನು ಹಿಂದುಸ್ಥಾನದ ಮೇಲೆ ಹೇರಿದ್ದನ್ನು ಫಾಸೆಟರವರು ನಿಷೇಧಿಸಿದರು. ೧೮೭೭ರಲ್ಲಿಯ ದಿಲ್ಲಿ ದರ್ಬಾರದ ದುಂದುಗಾರಿಕೆಯನ್ನು ಕಡುನುಡಿಯಿಂದ ಅಲ್ಲಗಳೆದರು.

ಜಾನ ಬ್ರಾಯಿಟ ಹೆನರಿ ಫಾಸೆಟರಂತೆಯೆ ಚಾರ್ಲ್ಸ ಬ್ರಾಡಲಾ ಅವರೂ ಸರ ಜೇಮ್ಸಕೇರ್ಡ, ವಿಲಿಯಮ ಹಂಟರ, ಡಾಲಹೌಸಿ, ರೀಡ, ಮುಂತಾದವರೂ ಪಾರ್ಲಮೆಂಟಿನಲ್ಲಿ ಹಿಂದುಸ್ತಾನದ ಹಿತಸಂಬಂಧವನ್ನು ರಕ್ಷಿಸಲು ಯತ್ನಿಸಿದರು. ಹಿಂದುಸ್ತಾನದಲ್ಲಿಯೆ ಮೊದಲು ನೌಕರಿ ಮಾಡಿದವರಾದ ಎ. ಓ. ಹ್ಯೂಮ, ಸರ ಹೆನರಿ ಕಾಟನ ಮತ್ತು ಸರ ವಿಲಿಯಮ ವೆಡರ್ಬರ್ನರು ಕಾಂಗ್ರೆಸಿನ ಕಾರ್ಯಕ್ಕೆ ವಿಶೇಷ ಸಹಾಯವನ್ನು ಮಾಡಿದಿರು. ಇಂಗ್ಲಂಡದಲ್ಲಿಯ ಈಸ್ಟ ಇಂಡಿಯಾ ಅಸೋಶಿಯೇಶನ ಸಂಘದವರೂ ಹಿಂದುಸ್ತಾನಕ್ಕೆ ಸಂಬಂಧಿಸಿದ ವಿಷಯಗಳ ಚರ್ಚೆಗೆ ಇಂಬುಗೊಟ್ಟು ಅನೇಕ ವಿಧವಾಗಿ ಸಹಾಯ ಮಾಡಿದರು.

**(೧೩) ಇಂಗ್ಲಂಡಿನಲ್ಲಿ ಮೊದಲನೆಯ ಹಿಂದೀ ಶಿಷ್ಟಮಂಡಲವು (೧೮೮೫):—** ಆಗಿನ ಚಳವಳಿಯ ಮುಖ್ಯ ಸಾಧನಗಳೆಂದರೆ ಮುಖ್ಯವಾಗಿ ಎರಡು, ಸಭೆಯಲ್ಲಿಯ ಭಾಷಣಗಳು ವರ್ತಮಾನಪತ್ರಗಳಲ್ಲಿಯ ಲೇಖಗಳು. ಬರೆ ಹಿಂದುಸ್ತಾನದಲ್ಲಿ ಚಳವಳಿಯನ್ನು ಮಾಡಿದರೆ ಕೆಲಸಗಳು ಕೈಗೂಡುವದಿಲ್ಲವೆನ್ನುವದು ಜನರಿಗೆ ಗೊತ್ತು. ಆದುದರಿಂದ ಆಗಿನ ಮುಖಂಡರೂ ಸಂಸ್ಥೆಗಳೂ ಇಂಗ್ಲಂಡಿಗೆ ಶಿಷ್ಟಮಂಡಳಗಳನ್ನು ಕಳಿಸಿ ಅಲ್ಲಿ ಚಳವಳಿಯನ್ನು ಮಾಡುವ ಪರಿಪಾಠವನ್ನು ಆಗಿನಿಂದಲೆ ಪ್ರಾರಂಭಿಸಿದರು. ಕಂಪನಿಯ ಆಳ್ಕೆಯಲ್ಲಿಯೂ ಕಂಪನಿಯ ನೌಕರರು ಹಿಂದುಸ್ತಾನದಲ್ಲಿ ನಡೆಯಿಸಿದ ಅನ್ಯಾಯಗಳ ಪರಿಮಾರ್ಜನೆಗಾಗಿ ಅನೇಕ ಇಂಗ್ಲಿಷ ರಾಜಕೀಯ ಮುಖಂಡರು ಮೊದಲಿನಿಂದಲೂ ಪ್ರಯತ್ನಿಸುತ್ತಲೆ ಇದ್ದರು. ವಾರನ ಹೆಸ್ಟಿಂಗ್ಸನ ಮೇಲೆ ಬರ್ಕ ಮುಂತಾದವರ ಪ್ರಯತ್ನದಿಂದ ಹಾವುಸ ಆಫ-ಕಾಮನ್ಸರು ದೊಡ್ಡ ಖಟಲೆಯನ್ನೆ ನಡಿಸಿದರು. ಬರ್ಕನ ನಂತರ ವಿಲ್ಬರಫೋರ್ಸ, ಜಾನಬ್ರಾಯಿಟ ಮುಂತಾದ ಉದಾರಮತವಾದಿಗಳು ಸಾಮಾನ್ಯವಾಗಿ ಹಿಂದುಸ್ತಾನದ ಆಕಾಂಕ್ಷೆಗಳಿಗೆ ಅನುಕೂಲರಾಗಿರುತ್ತಿದ್ದರು. ಇಂಗ್ಲಂಡದಲ್ಲಿಯ ಪುರಾಣಮತವಾದಿಗಳು ಸಾಮಾನ್ಯವಾಗಿ ಸಾಮ್ರಾಜ್ಯವಿಸ್ತಾರಕ್ಕೆ ಅನುಕೂಲರಾಗಿದ್ದಂತೆ ಉದಾರಪಕ್ಷದವರು (Liberal) ಅನ್ಯಾಯದ ಪರಿಮಾರ್ಜನೆಗಾಗಿ ಪ್ರಯತ್ನ

ಪಡುತ್ತಿದ್ದರು. ಸಿವಿಲ ಸರ್ವಿಸ ಪ್ರಶ್ನೆಯು ಮುಂದೆ ಬಂದಾಗ ಹಿಂದುಸ್ತಾನದ ಪ್ರತಿನಿಧಿಗಳಾಗಿ ಲಾಲಮೋಹನ ಘೋಸರು ಇಂಗ್ಲಂಡಿಗೆ ಹೋದ ಸಂಗತಿಯನ್ನು ಮೇಲೆ ವಿವರಿಸಿದೆ. ಈ ತರದ ಪ್ರತಿನಿಧಿಗಳಿಗೆ ಇಂಗ್ಲಂಡದಲ್ಲಿಯ ಉದಾರಮತವಾದಿಗಳೂ ಸಭೆ ಮುಂತಾದವುಗಳನ್ನು ಏರ್ಪಡಿಸಿ ಅನುಕೂಲತೆಗಳನ್ನು ಒದಗಿಸಿ ಕೊಡುತ್ತಿದ್ದರು. ಹಿಂದುಸ್ತಾನದ ಪ್ರತಿನಿಧಿಗಳ ಭಾವನೆಯೂ ಇಂಗ್ಲಂಡದ ಜನರ ವಿಷಯದಲ್ಲಿ ಕೃತಜ್ಞತೆಯಿಂದ ತುಂಬಿ ತುಳುಕುತ್ತಿದ್ದುದರಿಂದ ಅಲ್ಲಿಯ ಜನರಾದರೂ ಇವರ ಮಾತುಗಳನ್ನು ಕೇಳಿಕೊಳ್ಳುತ್ತಿದ್ದರು; ಲಾಲಮೋಹನ ಘೋಸರು ಮುಂದೆ ೧೮೮೩ರಲ್ಲಿ ಪಾರ್ಲಿಮೆಂಟಿನ ಚುನಾವಣೆಗೂ ನಿಂತು ಸ್ವಲ್ಪ ಮತಗಳಿಂದಲೆ ಅಪಜಯ ಹೊಂದಿದರು. ೧೮೮೫ರಲ್ಲಿ ಪಾರ್ಲಮೆಂಟಿನ ಚುನಾವಣೆಗಳು ನಡೆದ ಕಾಲಕ್ಕೆ ಮುಂಬಯಿಯಿಂದ ಚಂದಾವರಕರ, ಮದ್ರಾಸದಿಂದ ರಾಮಸ್ವಾಮಿ ಮುದಲಿಯಾರ, ಬಂಗಾಲದ ಪ್ರತಿನಿಧಿಗಳಾಗಿ ಮನಮೋಹನ ಘೋಸ, ಈ ಮೂವರು ಇಂಗ್ಲಂಡದಲ್ಲಿ ಅನೇಕ ಸ್ಥಳಗಳಿಗೆ ಹೋಗಿ ವ್ಯಾಖ್ಯಾನಕೊಟ್ಟು ಹಿಂದುಸ್ತಾನದ ಆಡಳಿತೆಯ ಕುಂದುಕೊರತೆಗಳನ್ನು ಜನರೆದುರಿನಲ್ಲಿಟ್ಟು ಹಿಂದುಸ್ತಾನದ ಆಕಾಂಕ್ಷೆಗಳು ಪೂರೈಸಲ್ಪಡಬೇಕೆಂದು ಒತ್ತಿ ಹೇಳಿದರು. ಅವರು ಹೋದದ್ದು ಸ್ವತಂತ್ರವಾಗಿಯೆ ಇದ್ದರೂ, ಅವರ ಪ್ರಚಾರದಿಂದ ಉದಾರಮತವಾದಿ ಹುರಿಯಾಳುಗಳಿಗೆ ಸಹಾಯವಾಗುವಂತಿತ್ತು; ಉದಾರಮತವಾದಿಗಳ ಬಹುಮತವಾದರೆ ಅದರಿಂದ ಹಿಂದುಸ್ತಾನದ ಕಲ್ಯಾಣವಾಗಬಹುದು ಎಂದು ಹಿಂದಿ ಜನರ ಆಸೆಯಾಗಿತ್ತು. ಹಿಂದಿ ಪ್ರತಿನಿಧಿಗಳು ಹೋದ ಹೋದಲ್ಲೆಲ್ಲ ಉತ್ಸಾಹದಿಂದ ಅವರ ಸ್ವಾಗತವಾಗುತ್ತಿತ್ತು; ಲಂಡನ, ಸ್ವಾನಸಿ, ಲ್ಯಾಂಕಾಶಾಯರ, ಬರ್ಮಿಂಗ್ಹ್ಯಾಮ, ಅಬರ್ಡೀನ ಮುಂತಾದ ಅನೇಕ ಪ್ರಮುಖ ಪಟ್ಟಣಗಳ ಸಭೆಗಳಲ್ಲಿ ಜನರು ಈ ಹಿಂದಿ ಪ್ರತಿನಿಧಿಗಳನ್ನು ಆದರದಿಂದ ಮನ್ನಿಸಿದರು. ಈ ಪ್ರತಿನಿಧಿಗಳು ಮರಳಿ ಬಂದನಂತರ ಮನಮೋಹನ ಘೋಸರು ತಮ್ಮ ಅನುಭವಗಳನ್ನು ಈ ಕೆಳಗಿನಂತೆ ಹೇಳಿದರು:—

'ಮೂರೂ ಪ್ರಾಂತಗಳು ತಮ್ಮ ತಮ್ಮ ಪ್ರತಿನಿಧಿಗಳನ್ನು ಒಂದುಗೂಡಿಸಿ ಇಂಗ್ಲಂಡಿಗೆ ಕಳಿಸಿದ್ದು ಇದು ಮೊದಲನೆಯ ಸಾರೆ; ಈ ಮಾತಿ

ನಿಂದ ಇಂಗ್ಲಂಡದ ಜನರ ಮೇಲೆ ಒಳ್ಳೆಯ ಪರಿಣಾಮವಾಯಿತು. ಸರಕಾರಿ ಅಧಿಕಾರಿಗಳ ಮನಸಿನಲ್ಲಿ ಮಾತ್ರ ಒಂದು ತರದ ಅಸಮಾಧಾನವಾಯಿತು." ಮನಮೋಹನ ಘೋಸರು ಬರ್ಮಿಂಗ ಹ್ಯಾಮದಲ್ಲಿ ಮಾಡಿದ ಭಾಷಣದ ಕಾಲಕ್ಕೆ ಜಾನ ಬ್ರಾಯಿಟ, ಕೆಮ್ರಿಕ, ಪಾವೆಲ ವ್ಹಿಲಿಯಮ್ಸ್ ಕುಕ, ಬ್ಲೇಡ್ಸ್ ಮುಂತಾದ ಪಾರ್ಲಮೆಂಟಿನ ಅನೇಕ ಸಭಾಸದರು ಬಂದಿದ್ದರು. ಆ ಸಭೆಯಲ್ಲಿ ಘೋಸರು ರಾಣಿಯ ಜಾಹೀರನಾಮೆಯಲ್ಲಿಯ ವಚನಗಳಂತೆ ವರ್ತನವು ಆಗಲಿಲ್ಲವೆಂಬುದನ್ನು ಸ್ಪಷ್ಟವಾಗಿ ವಿವರಿಸಿದರು. "ಜಾಹೀರನಾಮೆಯಲ್ಲಿ ಕಾಣಿಸಿದ ಬಹುತರವಾಗಿ ಎಲ್ಲ ವಚನಗಳು ಕಿವಿಗೆ ಬಂದು ಮುಟ್ಟಿದವು, ಆದರೆ ಕೈಗೂಡಲಿಲ್ಲ. ಹಿಂದಿ ಸೈನಿಕನು ಎಷ್ಟೆ ಪರಾಕ್ರಮಿಯಿರಲಿ, ಅವನಿಂದಾದ ಸೇವೆಯು ಎಷ್ಟೆ ದೀರ್ಘಕಾಲದ್ದಿರಲಿ, ಅವನಿಗೆ ಸೈನ್ಯದಲ್ಲಿಯ ದೊಡ್ಡ ಹುದ್ದೆಗಳು ದೊರೆಯುವಂತಿಲ್ಲ (ಧಿಕ್ಕಾರ!). ಸಿವಿಲ ಸರ್ವಿಸಿನಲ್ಲಿ ಸೇರಬೇಕಾದರೆ ಹಿಂದಿ ಯುವಕರು ತೀರ ಎಳೆ ವಯಸ್ಸಿನಲ್ಲಿ ಇಂಗ್ಲಂಡಿಗೆ ಬಂದು ಇಂಗ್ಲಿಷ ಭಾಷೆಯಲ್ಲಿ ಪರೀಕ್ಷೆಯನ್ನು ಕೊಡಬೇಕು (ಧಿಕ್ಕಾರ!). ಸದ್ಯಕ್ಕೆ ಸಿವಿಲ ಸರ್ವಿಸಿಗೆ ಒಳಪಟ್ಟ ೯೦೦ ಜಾಗೆಗಳಲ್ಲಿ ಕೇವಲ ೯ ಜನರು ಮಾತ್ರ ಹಿಂದಿ ಜನರಿರುವರು ! (ಧಿಕ್ಕಾರ!). ಈ ಒಂಬತ್ತು ಜನರಿಗೂ ಉಳಿದ ಇಂಗ್ಲಿಷ ಅಧಿಕಾರಿಗಳಿಗೆ ಸಲ್ಲುವ ಮಾನಮರ್ಯಾದೆಯು ಸಲ್ಲುವದಿಲ್ಲ." ಇಲ್ಬರ್ಟ ಬಿಲ್ಲಿನಿಂದ ಹಿಂದಿ ಜನರಲ್ಲಿ ಉಂಟಾದ ಜಾಗೃತಿಯನ್ನು ಉಲ್ಲೇಖಿಸಿ, "ಹಿಂದುಸ್ತಾನದಲ್ಲಿಯ ಇಂಗ್ಲಿಷರು ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೇಗೆ ಕಾದುವರೆಂಬುದನ್ನು ತೋರಿಸಿಕೊಟ್ಟರು, ಈಗ ಹಿಂದೀ ಜನರೂ ಅವರ ಅನುಕರಣವನ್ನೆ ಮಾಡಿದರೆ ಅವರಿಗೆ ಸೋಜಿಗವಾಗಬಾರದು (ಚಪ್ಪಾಳೆ)." ಅನಂತರ ಅವರು ಲಿಟನರ ಆಳಿಕೆಯನ್ನು ಕೀಳ್ಗಳೆದು ರಿಪನರ ಆಳ್ಕೆಯ ಸ್ತುತಿಯನ್ನು ಮಾಡಿದರು.

**(೧೪) ಮೊದಲಿನ ರಾಜಕೀಯ ಸಮ್ಮೇಲನಗಳು** (೧೮೮೩-೧೮೮೫):— ಹಿಂದುಸ್ತಾನದ ರಾಜಕೀಯ ಉನ್ನತಿಯ ಕಲ್ಪನೆಗಳು ಅನೇಕರ ಮಾತಿನಲ್ಲಿ ಒಡಮೂಡುತ್ತಿದ್ದರೂ ಆ ಕಲ್ಪನೆಯು ಕಲಕತ್ತೆಯಲ್ಲಿ ೧೮೮೩ ಇಸ್ವಿಯ ಜುಲೈ ೧೭ನೆಯ ತಾರೀಖಿನ ದಿನ ಜರುಗಿದ ಸಭೆಯಲ್ಲಿ ಮೊದಲು

ರೂಪುಗೊಂಡಿತು. ಆ ಸಭೆಯಲ್ಲಿ ಹಿಂದುಸ್ಥಾನ ಮತ್ತು ಇಂಗ್ಲಂಡ ದೇಶ
ಗಳಲ್ಲಿ ಚಳವಳಿಯನ್ನು ಮಾಡಿ ಹಿಂದುಸ್ಥಾನಕ್ಕೆ ಸಲ್ಲಬೇಕಾದ ಹಕ್ಕುಗ
ಳನ್ನು ದೊರಕಿಸಲು ರಾಷ್ಟ್ರೀಯ ನಿಧಿಯನ್ನೇರ್ಪಡಿಸಬೇಕೆಂದು ಗೊತ್ತಾ
ಯಿತು. ಪ್ರಾಂತಿಕ ದೃಷ್ಟಿಯು ವಿಕಾಸವಾಗಿ ಬಂಗಾಲೀ ಮುಖಂಡರ
ದೃಷ್ಟಿಯು ಭರತಖಂಡವನ್ನೆ ವ್ಯಾಪಿಸಿಬಿಟ್ಟಿತು. ಕಲಕತ್ತೆಯಲ್ಲಿ ೧೮೮೩
ಇಸ್ವಿಯ ಡಿಸೆಂಬರದ ೨೮,೨೯,೩೦ ತಾರೀಖಿನ ದಿನ ಮೊದಲನೆಯ ಹಿಂದೀ
ರಾಷ್ಟ್ರೀಯ ಪರಿಷತ್ತು ಸೇರಿತು. ಸ್ವರಾಜ್ಯ, ಶಿಕ್ಷಣ, ಅಧಿಕಾರಸ್ಥಾನಗ
ಳಲ್ಲಿ ಹಿಂದೀ ಜನರ ಪ್ರವೇಶ, ಇವೆ ಚರ್ಚೆಯ ಮುಖ್ಯ ಪ್ರಶ್ನೆಗಳಿದ್ದವು.
೧೮೮೮ರಲ್ಲಿ ಸುರೇಂದ್ರನಾಥರು ಲಾಹೋರ, ಅಮೃತಸರ, ಮುಲ್ತಾನ,
ರಾವಳಪಿಂಡಿ, ಅಂಬಾಲಾ, ದಿಲ್ಲಿ, ಆಗ್ರಾ, ಅಲಿಗಡ, ಲಖನೌ, ಕಾನಪುರ,
ಅಲಹಾಬಾದ, ಕಾಶೀ, ಬಾಂಕೀಪುರಗಳಿಗೆ ಹೋಗಿ ಸಿವಿಲ ಸರ್ವಿಸ ಪ್ರಶ್ನೆಯ
ವಿಷಯಕ್ಕೆ ಚಳವಳಿಯನ್ನು ಮಾಡಿ ಬಂದರು. ಇದರ ಜೊತೆಗೆ ರಾಷ್ಟ್ರೀಯ
ನಿಧಿಯ ವಿಷಯಕ್ಕೂ ಅವರು ಜನರಲ್ಲಿ ಜಾಗೃತಿಯನ್ನು ಮಾಡಿದರು. ಈ
ಚಳವಳಿಯ ಪರಿಣಾಮವಾಗಿ ಸಿವಿಲ ಸರ್ವಿಸಿನ ಉಮೇದವಾರರ ವಯೋ
ಮರ್ಯಾದೆಯು ೨೨ ವರುಷಕ್ಕೆ ಬೆಳಿಸಲ್ಪಟ್ಟಿತು.

೧೮೮೮ರಲ್ಲಿ ತಮ್ಮ ಉದಾರ ಧೋರಣದಿಂದ ಜನರಿಗೆ ಪ್ರಿಯರಾದ
ಲಾರ್ಡ ರಿಪನರು ಇಂಗ್ಲಂಡಕ್ಕೆ ಹೊರಟಾಗ ಹಿಂದೀ ಜನರಿಂದ ಅಭೂತ
ಪೂರ್ವವಾದ ಸತ್ಕಾರವು ಆಯಿತು. ಆ ಜಾಗ್ರತಿಯನ್ನು ನೋಡಿ ಆಗಿನ ಅರ್ಥ
ಸಚಿವರಾದ ಆಕಲಂದ ಕಾಲ್ವಿನರು "ಇದು ನಿಜವಿದ್ದರೆ ಇದರ ಅರ್ಥವೇನು"
ಎಂಬ ಚಿಕ್ಕ ಪುಸ್ತಕವನ್ನೆ ಬರೆದರು. "ಕೊಳ್ಳದೊಳಗಿನ ಒಣ ಎಲುಬು
ಗಳು ಜೀವಕಳೆತುಂಬಿ ಎದ್ದು ನಿಂತವು" ಎಂದು ಅವರ ಲೆಕ್ಕಣಿಕೆಯಿಂದ
ಉದ್ಗಾರಗಳು ಹೊರಬಿದ್ದವು. ಕಲ್ಕತ್ತೆಯಲ್ಲಿಯಂತೂ ಲಾರ್ಡ ರಿಪನರಿ
ಗಾಗಿ ದೊಡ್ಡ ಸಂತೋಷಕೂಟವು ಏರ್ಪಡಿಸಲ್ಪಟ್ಟಿತ್ತು; ಅದರಲ್ಲಿ ಸುರೇಂದ್ರ
ನಾಥರೂ ಭಾಗವಹಿಸಿದ್ದರು. ಮರುಭೂಮಿಯಲ್ಲಿ ಹಚ್ಚನ್ನ ಹುಲ್ಲನ್ನು
ಕಂಡರೆ ದಾರಿಕಾರರಿಗೆ ಆಗುವ ಆನಂದವೆ ಹಿಂದೀ ಜನರಿಗೆ ರಿಪನರ ಆಳ್ಗೆಯಲ್ಲಿ
ಆಗಿತ್ತು. ಸುತ್ತಲು ಹೊಣೆಗಾಣಿಕೆಯನ್ನರಿಯದ ಆಳರಸರು ಪ್ರಜೆಗಳ
ಕಲ್ಯಾಣವನ್ನು ಲೆಕ್ಕಿಸದೆ ಮನಬಂದಂತೆ ನಡಕೊಳ್ಳುತ್ತಿರುವಾಗ ಜನರ

ಕಲ್ಯಾಣವನ್ನು ಚಿಂತಿಸುವ ವ್ಹಾಯಿಸರಾಯನು ಹಿಂದುಸ್ಥಾನಕ್ಕೆ ಲಭಿಸಿದ್ದನು !

೧೮೮೬ರ ಡಿಸೆಂಬರ ತಿಂಗಳಲ್ಲಿಯೂ ೧೮೮೫ ರಂತೆಯೆ ಕಲ್ಕತ್ತೆಯಲ್ಲಿ ರಾಷ್ಟ್ರೀಯ ಪರಿಷದಿನ ಎರಡನೆಯ ಅಧಿವೇಶನವಾಯಿತು. ಈಸಲ ಪರಿಷತ್ತು ಇಂಡಿಯನ ಅಸೋಶಿಯೇಶನ, ಬ್ರಿಟಿಶ ಅಸೋಶಿಯೇಶನ ಮತ್ತು ಸೆಂಟ್ರಲ ಮಹಮುಡನ ಅಸೋಶಿಯೇಶನ ಈ ಮೂರು ಸಂಸ್ಥೆಗಳ ಪರವಾಗಿ ಕೂಡಿಸಲ್ಪಟ್ಟಿತ್ತು. ಮೀರತ ಕಾಶಿ ಅಲ್ಲಹಾಬಾದ ಪಟ್ಟಣಗಳಿಂದ ಪ್ರತಿನಿಧಿಗಳು ಬಂದಿದ್ದರು. ಮುಂಬಯಿಯಿಂದ ವಿಶ್ವನಾಥ ನಾರಾಯಣ ಮಂಡಲಿಕರು ಪ್ರತಿನಿಧಿಗಳಾಗಿ ಬಂದಿದ್ದರು.

## ಎರಡನೆಯ ಭಾಗ

### ಕಾಂಗ್ರೆಸಿನ ಉದಯ ಮತ್ತು ವಿಕಾಸವು (೧೮೮೫–೧೯೦೫)

(೧೫) **ಕಾಂಗ್ರೆಸಿನ ಸ್ಥಾಪನೆಯ ವಿಚಾರವು.** ಇತ್ತ ಸುರೇಂದ್ರ ನಾಥ ಬ್ಯಾನರ್ಜಿಯವರು ತಂತಮ್ಮ ಜೊತೆಗಾರರೊಂದಿಗೆ ಕಲ್ಕತ್ತೆಯ ಪರಿಷತ್ತಿನಲ್ಲಿ ತೊಡಗಿದಾಗ ಹ್ಯೂಮರ ಪ್ರೇರಣೆಯಿಂದ ಮುಂಬಯಿ ಇಲಾಖೆಯಲ್ಲಿ ಕಾಂಗ್ರೆಸಿನ ಸ್ಥಾಪನೆಯನ್ನು ಮಾಡುವ ವಿಚಾರವು ನಡೆದಿತ್ತು. ಆದಕ್ಕೂ ಸ್ವಲ್ಪ ಮೊದಲು ಹಿಂದುಸ್ತಾನದಲ್ಲಿ ರಾಜ್ಯಕ್ರಾಂತಿಯ ಸಂಚು ನಡೆದಿದೆಯೆಂದು ಹ್ಯೂಮುಸಾಹೇಬರಿಗೆ ಕಂಡು ಬಂದಿತ್ತಂತೆ. ಬಚ್ಚಿಟ್ಟ ಭಾವನೆಗಳಿಗೆ ವ್ಯಕ್ತಸ್ವರೂಪವು ದೊರೆತು ಜನರ ಆಕಾಂಕ್ಷೆಗಳು ಸರಕಾರಕ್ಕೆ ತಿಳಿದರೆ ಅದರಿಂದ ಸರಕಾರಕ್ಕೂ ಹಿತವಾಗುವದೆಂದು ನಂಬಿ ಹ್ಯೂಮರು ವ್ಹಾಯಿಸರಾಯರಾದ ಲಾರ್ಡ ಡಫರಿನರ ಸಲಹೆಯನ್ನು ತೆಗೆದುಕೊಂಡು ಕಾಂಗ್ರೆಸ್ಸಿನ ಘಟನೆಗೆ ಕೈಹಾಕಿದರು. ಹ್ಯೂಮರ ಮೊದಲಿನ ಸೂಚನೆಯಂತೆ ಅವರು ಸ್ಥಾಪಿಸಬೇಕೆಂದಿದ್ದ ಅಖಿಲ ಭಾರತ ಸಭೆಯಲ್ಲಿ ಕೇವಲ ಸಾಮಾಜಿಕ ವಿಷಯಗಳನ್ನಷ್ಟೆ ಚರ್ಚಿಸತಕ್ಕದ್ದು, ಅದರ ಅಧಿವೇಶನಕ್ಕೆ ಆಯಾ ಪ್ರಾಂತದ ಗವರ್ನರರೆ ಅಧ್ಯಕ್ಷರಿರತಕ್ಕದ್ದು. ಈ ಸೂಚನೆಗಳನ್ನು ಅವರು ಲಾರ್ಡ ಡಫರಿನರೆದುರಿಗೆ ಮಂಡಿಸಿದಾಗ ಲಾರ್ಡ ಡಫರಿನರು ಹ್ಯೂಮರ ಸೂಚನೆಗಳಿಗೆ ಬೆಂಬಲವನ್ನು ಕೊಡಲಿಲ್ಲ; ಹೊಸದಾಗಿ ಸ್ಥಾಪಿಸಲ್ಪಡಬೇಕಾಗಿದ್ದ ಸಂಘದಲ್ಲಿ ರಾಜ್ಯಪದ್ಧತಿಗೆ ಸಂಬಂಧಿಸಿದ ವಿಷಯಗಳ ಚರ್ಚೆಯಾಗಬೇಕೆಂದೂ, ಇಂತಹ ಸಭೆಗೆ ಪ್ರಾಂತಿಕ ಗವರ್ನರರು ಅಧ್ಯಕ್ಷರಾದರೆ ಜನರಿಗೆ ಮನಸ್ಸು ಬಿಚ್ಚಿ ಮಾತನಾಡಲು ಆಸ್ಪದವು ದೊರೆಯಲಾರದೆಂದೂ, ರಾಜ್ಯದ ಆಡಳಿತೆಯ ವಿಷಯಕ್ಕೆ ಜನರ ಅಭಿಪ್ರಾಯವೇನಿದೆಯೆಂಬುದು ಸದ್ಯಕ್ಕೆ ಸರಕಾರಿ ಅಧಿಕಾರಿಗಳಿಗೆ ತಿಳಿಯಲು ದುಸ್ತರವಾಗಿದೆಯೆಂದೂ ಇಂತಹ ಸಭೆಗಳ ಮುಖಾಂತರವಾಗಿ ಸರಕಾರೀ ಕೃತಿಗಳ

ವಿಷಯಕ್ಕೆ ಜನತೆಯ ಅಭಿಪ್ರಾಯವನ್ನು ತಿಳಿದುಕೊಳ್ಳಲು ಅನುಕೂಲವಾಗು ವದೆಂದೂ, ಅಭಿಪ್ರಾಯಪಟ್ಟರು. ಹ್ಯೂಮರು ಇವೆಲ್ಲ ವಿಚಾರಗಳನ್ನು ಕಲಕತ್ತಾ ಮುಂಬಯಿ ಮುಂತಾದ ಪ್ರಮುಖ ಪಟ್ಟಣಗಳಲ್ಲಿಯ ಮುಖಂಡ ರೆದುರಿಗಿಟ್ಟು ಅವರ ಸಮ್ಮತಿಯನ್ನು ಪಡೆದು ಕಾಂಗ್ರೆಸಿನ ಸ್ಥಾಪನೆಯ ಕಾರ್ಯವನ್ನು ಕೈಕೊಂಡರು. ಇದರ ವಿಷಯಕ್ಕೆ ೧೮೮೫ ರ ಮಾರ್ಚದಲ್ಲಿ ಹೊರಟ ಮೊದಲನೆಯ ಸರಕ್ಯುಲರದ ಮೇಲಿಂದ ಕಾಂಗ್ರೆಸಿನ ಮೂಲ ಉದ್ದೇಶಗಳು ಸ್ಪಷ್ಟವಾಗುತ್ತವೆ. ಆ ಸರಕ್ಯುಲರದೊಳಗಿನ ಅವಶ್ಯವಾದ ಸ್ವಲ್ಪ ಭಾಗವನ್ನು ಇದರಡಿಯಲ್ಲಿ ಕೊಟ್ಟಿದ್ದೇವೆ:-

" ಇಂಡಿಯನ ನ್ಯಾಶನಲ ಯುನಿಯನದ ( ಹಿಂದಿ ರಾಷ್ಟ್ರೀಯ ಐಕ್ಯ ಸಂಘದ ) ಪರಿಷತ್ತು ಪುಣೆಯಲ್ಲಿ ೧೮೮೫ರ ಡಿಸೆಂಬರ ತಿಂಗಳ ೨೫ರಿಂದ ೩೧ರ ವರೆಗೆ ಜರಗುವದು. ಕಾನಫರನ್ಸಿನಲ್ಲಿ ಇಂಗ್ಲಿಷ ಭಾಷೆಯನ್ನು ಬಲ್ಲ ಬಂಗಾಲ ಮುಂಬಯಿ ಮತ್ತು ಮದ್ರಾಸ ಇಲಾಖೆಗಳ ಪ್ರಮುಖ ರಾಜ ಕಾರಣ ಪಂಡಿತರು ಸೇರುವರು. ಪರಿಷತ್ತಿನ ಮುಖ್ಯ ಉದ್ದೇಶಗಳೆಂದರೆ: (೧) ರಾಷ್ಟ್ರೀಯ ಏಳ್ಗೆಗಾಗಿ ದುಡಿಯುತ್ತಲಿರುವ ಎಲ್ಲ ಕಾರ್ಯಕರ್ತರಲ್ಲಿ ಪರಸ್ಪರರ ಪರಿಚಯವನ್ನು ಬೆಳೆಯಿಸುವದು. (೨) ಮರುವರ್ಷದಲ್ಲಿ ಕೈಕೊಳ್ಳ ಬೇಕಾದ ರಾಜಕೀಯ ಚಟುವಟಿಕೆಗಳನ್ನು ಕುರಿತು ವಿಚಾರ ಮಾಡು ವದು. ( ಈ ಪ್ರಮುಖ ಉದ್ದೇಶಗಳನ್ನು ಸಾಧಿಸುವದಲ್ಲದೆ ) ಈ ಪರಿಷತ್ತು ದೇಶಿ ಪಾರ್ಲಮೆಂಟಿನ ಬೀಜರೂಪದಂತಾಗಿ ಸ್ವಲ್ಪೇ ವರ್ಷಗಳಲ್ಲಿ ಹಿಂದು ಸ್ಥಾನವು ಪ್ರಾತಿನಿಧಿಕ ಸಂಸ್ಥೆಗಳನ್ನು ನಡಿಸಲಿಕ್ಕೆ ಪೂರ್ಣ ಅಪಾತ್ರವಾದು ದೆಂಬ ಸುಳ್ಳು ಮಾತಿಗೆ ಪರಸ್ಪರ ಉತ್ತರವು ದೊರೆತಂತಾಗುವದು........ ಪುಣೆಯ ಮಿತ್ರರಲ್ಲದೆ, ಮುಂಬಯಿ ಸಿಂಧ ಮತ್ತು ವರ್‍ಹಾಡ ಈ ಭಾಗ ಗಳಿಂದ ೨೦, ಮದ್ರಾಸ ಮತ್ತು ಬಂಗಾಲ ಪ್ರಾಂತಗಳಿಂದ ಪ್ರತ್ಯೇಕವಾಗಿ ೨೦, ಸಯುಂಕ್ತಪ್ರಾಂತ, ಅಯೋಧ್ಯೆ, ಮತ್ತು ಪಂಜಾಬ ಇವೆಲ್ಲ ಪ್ರಾಂತ ಗಳಿಂದ ೧೦, ಹೀಗೆ ಪ್ರತಿನಿಧಿಗಳು ಬರುವರೆಂದು ನಂಬಿರುವೆವು."

(೧೬) **ಕಾಂಗ್ರೆಸಿನ ಮೊದಲನೆಯ ಕೂಟವು** (೧೮೮೫) ಕಾಂಗ್ರೆಸಿನ ಮೊದಲನೆಯ ಅಧಿವೇಶನವನ್ನು ಪುಣೆಯಲ್ಲಿ ಜರುಗಿಸಬೇಕೆಂದು ಮಾಡಿದ್ದರು;

ಆದರೆ ಪುಣೆಯಲ್ಲಿ ಪ್ಲೇಗಿನ ಪ್ರಾದುರ್ಭಾವವಾದುದರಿಂದ ಮುಂಬಯಿಯಲ್ಲಿಯೆ ಕಾಂಗ್ರೆಸಿನ ಮೊದಲನೆಯ ಅಧಿವೇಶನವು ಜರುಗಿತು. ಕಾಂಗ್ರೆಸಿಗೆ ೭೨ ಪ್ರತಿನಿಧಿಗಳು ಹಿಂದುಸ್ತಾನದ ಬೇರೆ ಬೇರೆ ಬಾಗಗಳಿಂದ ಬಂದಿದ್ದರು. ಅವರಲ್ಲಿ ಸಿಮ್ಲೆಯಿಂದ ಎ. ಓ. ಹ್ಯೂಮರೂ, ಕಲಕತ್ತೆಯಿಂದ ಉಮೇಶಚಂದ್ರ ಬ್ಯಾನರ್ಜಿ ಮತ್ತು ನರೇಂದ್ರನಾಥ ಸೇನರೂ, ಪುಣೆಯಲ್ಲಿ ವಾಮನ ಶಿವರಾಮ ಆಪಟೆ ಮತ್ತು ಆಗರಕರರೂ, ಲಖನೌದಿಂದ ಗಂಗಾಪ್ರಸಾದರೂ ಮುಂಬಯಿಯಿಂದ ದಾದಾಭಾಯಿ ನೌರೋಜಿ ಕಾಶಿನಾಥ ತಿಂಬಕ ತೆಲಂಗ ಫಿರೋಝಶಾಹಾ ಮೆಥಾ ದಿನಶಾ ಎದಲಜಿ ವಾಚ್ಛಾ, ಮಲಬಾರಿ, ನಾರಾಯಣ ಗಣೇಶ ಚಂದಾವರಕರ, ಮದ್ರಾಸಿನಿಂದ ರಂಗೈನಾಯಡು, ಎಸ. ಸುಬ್ರಮಣಿಯ ಅಯ್ಯರ, ಪಿ ಆನಂದಚಾರ್ಲು, ಜಿ ಸುಬ್ರಮಣಿಯ ಅಯ್ಯರ, ಎಮ. ವೀರರಾಘವಾಚಾರಿಯರೂ, ಅನಂತಪುರದಿಂದ ಪಿ. ಕೇಶವ ಪಿಲ್ಲೆಯವರೂ ಪ್ರತಿನಿಧಿಗಳಾಗಿದ್ದರು. ಸರಕಾರಿ ನೌಕರಿಯಲ್ಲಿದ್ದುದರಿಂದ ಪ್ರತಿನಿಧಿಗಳಾಗದೆ ಅತಿಥಿಗಳಾಗಿದ್ದವರಲ್ಲಿ ಮದ್ರಾಸಿನ ಡೆಪ್ಯುಟಿ ಕಲೆಕ್ಟರರಾದ ದಿವಾಣ ಬಹಾದ್ದೂರ ಆರ್. ರಘುನಾಥರಾವ, ಲೆಜಿಸ್ಲೇಟಿವ್ಹ ಕೌನ್ಸಿಲ್ಲಿನ ಸಭಾಸದರೂ ಸ್ಮಾಲಕಾಜ ಕೋರ್ಟಿನ ಸಬಜಜ್ಜರೂ ಇದ್ದ ಮಹಾದೇವ ಗೋವಿಂದ ರಾನಡೆ, ಆಗ್ರಾದ ಲಾಲಾ ವೈಜನಾಥರೂ, ಪ್ರೊಫೆಸರರಿದ್ದ ಕೆ. ಸುಂದರರಾಮನ ಮತ್ತು ಆರ್. ಜಿ. ಭಾಂಡಾರಕರರೂ ಇದ್ದರು. ಜ್ಞಾನಪ್ರಕಾಶ, ಸಾರ್ವಜನಿಕ ಸಭೆಯ ತ್ರೈಮಾಸಿಕ, ಮರಾಠಾ, ಕೇಸರಿ, ನವವಿಭಾಕರ, ಇಂಡಿಯನ ಮಿರರ, ನಸ್ಸಿನ, ಹಿಂದುಸ್ತಾನಿ, ಟ್ರಿಬ್ಯೂನ, ಇಂಡಿಯನ ಯುನಿಯನ, ಇಂಡಿಯನ ಸ್ಪೆಕ್ಟೆಟರ, ಇಂದುಪ್ರಕಾಶ, ಹಿಂದೂ, ಕ್ರೆಸೆಂಟ ಮುಂತಾದ ಪ್ರಮುಖ ಪತ್ರಿಕೆಗಳ ಪ್ರತಿನಿಧಿಗಳೂ ಬಂದರು.

ಅಧಿವೇಶನದ ಕಾರ್ಯವು ೧೮೮೫ ಇಸವಿಯ ಡಿಸೆಂಬರ ತಿಂಗಳ ೨೮ ನೆಯ ತಾರೀಖಿನ ಮಧ್ಯಾಹ್ನ ೧೨ ಗಂಟೆಗೆ ಪ್ರಾರಂಭವಾಯಿತು. ಕಲ್ಕತ್ತೆಯ ನಾಮಾಂಕಿತ ಬ್ಯಾರಿಸ್ಟರರಾದ ಉಮೇಶಚಂದ್ರ ಬ್ಯಾನರ್ಜಿಯವರು ಸಭಾಧ್ಯಕ್ಷರಾಗಿ ಆರಿಸಲ್ಪಟ್ಟರು. ಅವರು ತಮ್ಮ ಭಾಷಣದಲ್ಲಿ ಕಾಂಗ್ರೆಸಿನ ಉದ್ದೇಶವನ್ನು ಈ ರೀತಿ ವರ್ಣಿಸಿದರು: “(ಅ)ಸಾಮ್ರಾಜ್ಯದ ಬೇರೆ ಬೇರೆ ಭಾಗಗಲ್ಲಿ

ನಮ್ಮ ನಾಡಿಗಾಗಿ ದುಡಿಯುವವರಲ್ಲಿ ಪರಿಚಯವನ್ನೂ ಗೆಳೆತನವನ್ನೂ ಬೆಳೆಯಿ ಸುವದು, (ಆ) ರಾಷ್ಟ್ರಭಕ್ತರಲ್ಲಿಯ ಪ್ರಾಂತಿಕ ಧಾರ್ಮಿಕ ವಾಂಶಿಕ ವೈಷಮ್ಯಗಳನ್ನು ಪರಸ್ಪರ ಸಂಘಟನೆಯಿಂದ ಅಳಿಸಿ, ಲಾರ್ಡ ರಿಪನರ ಆಳಿಕೆಯಲ್ಲಿ ಹುಟ್ಟಿದ ರಾಷ್ಟ್ರೀಯ ಐಕ್ಯದ ಭಾವನೆಯನ್ನು ದೃಢಪಡಿಸುವದು. (ಇ) ರಾಷ್ಟ್ರದಲ್ಲಿ ಉದ್ಭವಿಸುವ ಪ್ರಮುಖ ಸಾಮಾಜಿಕ ಪ್ರಶ್ನೆಗಳನ್ನು ಕುರಿತು ಹಿಂದೀ ಸುಶಿಕ್ಷಿತರು ಚರ್ಚೆಮಾಡಿ ನಿಷ್ಕರ್ಷ ಮಾಡಿದ ಅಭಿಪ್ರಾಯಗಳನ್ನು ಸಂಗ್ರಹಿಸುವದು, (ಈ) ಮುಂದಿನ ೧೨ ತಿಂಗಳಲ್ಲಿ ಸಾರ್ವಜನಿಕ ಕಾರ್ಯವನ್ನು ಹೇಗೆ ಮುಂದುವರಿಸಬೇಕೆಂಬುದನ್ನು ನಿರ್ಧರಿಸುವದು.

ಕಾಂಗ್ರೆಸಿನ ಮೊದಲಿನ ಅಧಿವೇಶನದಲ್ಲಿ ಈ ಕೆಳಗಿನ ಠರಾವುಗಳು ಪಾಸಾದವು. (೧) ಹಿಂದುಸ್ಥಾನದ ಆಡಳಿತೆಯನ್ನು ಪರೀಕ್ಷಿಸುವ ಕಾರ್ಯವನ್ನು ಬಾದಶಹನಿಂದ ನೇಮಿಸಲ್ಪಟ್ಟ ಕಮೀಶನ್ನಿಗೆ ಒಪ್ಪಿಸಬೇಕು, ಆ ಕಮೀಶನದಲ್ಲಿ ಹಿಂದಿ ಪ್ರತಿನಿಧಿಗಳಿರಬೇಕು. ಕಮಿಶನ್ನದವರು ಹಿಂದುಸ್ಥಾನ ಮತ್ತು ಇಂಗ್ಲಂಡ ಇವೆರಡೂ ದೇಶಗಳಲ್ಲಿ ತಮ್ಮ ವಿಚಾರಣೆಯನ್ನು ನಡಿಸಬೇಕು. (೨) ಉಳಿದ ಯಾವ ಸುಧಾರಣೆಗಳನ್ನು ಮಾಡುವದಕ್ಕಿಂತ ಮೊದಲು ಸ್ಟೇಟ ಸೆಕ್ರೆಟರಿಯ ಕೌನ್ಸಿಲ್ಲನ್ನು ರದ್ದು ಪಡಿಸಬೇಕೆಂಬು ಕಾಂಗ್ರೆಸ್ಸಿನ ಅಭಿಪ್ರಾಯವಿದೆ. (೩) ಹಿಂದುಸ್ಥಾನ ಸರಕಾರದ ಕಾಯದೆ ಕೌನ್ಸಿಲ್ಲು ಮತ್ತು ಪ್ರಾಂತಿಕ ಕೌನ್ಸಿಲ್ಲು ಇವುಗಳಲ್ಲಿ ಹಿಂದಿ ಜನರಿಂದ ಆರಿಸಲ್ಪಟ್ಟ ಸಭಾಸದರನ್ನು ಸೇರಿಸಿ ಆ ಕೌನ್ಸಿಲ್ಲುಗಳ ಸುಧಾರಣೆಯನ್ನು ಮಾಡಬೇಕು. ಆಯವ್ಯಯ ಪತ್ರಿಕೆಗಳನ್ನು ಕೌನ್ಸಿಲ್ಲದೆದುರಿಗೆ ಚರ್ಚೆಗಾಗಿಡಬೇಕು. ಆಡಳಿತೆಯ ವಿಷಯದಲ್ಲಿ ಅಧಿಕಾರಿಗಳಿಗೆ ಪ್ರಶ್ನೆಗಳನ್ನು ಕೇಳುವ ಅಧಿಕಾರವು ಕೌನ್ಸಿಲ್ಲಿನ ಸಭಾಸದರಿಗಿರಬೇಕು. ಕೌನ್ಸಿಲ್ಲಿನವರು ಪಾಸು ಮಾಡಿದ ಠರಾವುಗಳನ್ನು ರದ್ದು ಪಡಿಸುವ ಅಧಿಕಾರವು ಗವ್ಹರ್ನರ ಮತ್ತು ಗವ್ಹರ್ನರಜನರಲ್ ಇವರಿಗಿದ್ದರೂ, ಅವರ ನಿರ್ಣಯದ ವಿರುದ್ಧ ಬಂದ ಅರ್ಜಿಗಳನ್ನು ವಿಚಾರ ಮಾಡಲು ಹೌಸ್ ಆಫ್ ಕಾಮನ್ಸಿನ ಕಮೀಟಿಯು ಏರ್ಪಡಿಸಲ್ಪಡಬೇಕು. (೪) ದೊಡ್ಡ ಹುದ್ದೆಗಳಿಗಾಗಿ ಸಧ್ಯಕ್ಕೆ ಇಂಗ್ಲಂಡದಲ್ಲಿ ಏರ್ಪಡಿಸಲ್ಪಡುವ ಪರೀಕ್ಷೆಗಳು ಇಂಗ್ಲಂಡದಲ್ಲಿಯೂ, ಹಿಂದುಸ್ಥಾನದಲ್ಲಿಯೂ ಕೂಡಿಯೆ ಜರುಗಬೇಕು. ಸಿವ್ಹಿಲ್ ಸರ್ವ್ಹಿಸ

ಪರೀಕ್ಷೆಗೆ ಕೂಡಲು ೨೩ ವರ್ಷದೊಳಗಿನ ಉಮೇದವಾರರಿಗೆ ಆಸ್ಪದವಿರಬೇಕು. (೫) ಹಿಂದುಸ್ತಾನ ಸಾಮ್ರಾಜ್ಯದ ಆದಾಯವನ್ನು ವಿಚಾರಿಸಲಾಗಿ ಹಿಂದೀ ಸೈನ್ಯದ ಖರ್ಚಿನಲ್ಲಿ ಮಾಡಬೇಕೆಂದಿದ್ದ ಹೆಚ್ಚಳವು ಅತ್ಯಂತ ಅನವಶ್ಯವಿದೆ. ಹಿಂದೀ ಸೈನ್ಯದ ಖರ್ಚನ್ನು ಕಡಿತಗಳಿಂದ ಕಡಿಮೆ ಮಾಡುವದು ಸಾಧ್ಯವಿರದಿದ್ದರೆ ಆ ಖರ್ಚನ್ನು ಕಸ್ಟಮ್ಸ್ ಡ್ಯೂಟಿಯಿಂದಲೂ, ಇನ್‌ಕಮ್ ಟ್ಯಾಕ್ಸದಿಂದಲೂ, ತುಂಬಿಕೊಳ್ಳಬೇಕು. ಹಿಂದುಸ್ತಾನದ ಸಾಲಕ್ಕೆ ಗ್ರೇಟ ಬ್ರಿಟನ್ನವು ಜಾಮೀನಾಗಬೇಕು. (೭) ಉತ್ತರ ಬ್ರಹ್ಮದೇಶವನ್ನು ಖಾಲಸಾ ಮಾಡಬಾರದೆಂದು ಈ ಕಾಂಗ್ರೆಸ್ಸಿನ ಅಭಿಪ್ರಾಯವದೆ. ಖಾಲಸಾ ಮಾಡುವದೆ ಆದರೆ ಬ್ರಹ್ಮದೇಶವು ಸಿಂಹಲದ್ವೀಪದಂತೆಯೆ ಹಿಂದುಸ್ತಾನ ಸರಕಾರದಿಂದ ಬೇರೆ ಇರಬೇಕು. (೮) ಕಾಂಗ್ರೆಸ್ಸಿನ ಠರಾವುಗಳು ಪ್ರತಿಯೊಂದು ಪ್ರಾಂತದೊಳಗಿನ ರಾಜಕೀಯ ಸಂಘಗಳಿಗೆ ತಿಳಿಸಲ್ಪಡಬೇಕು.. ಹಾಗೂ ಮೇಲಿನ ಠರಾವುಗಳಲ್ಲಿ ಅಡಕವಾದ ಮಾತುಗಳನ್ನು ಸಾಧಿಸಲಿಕ್ಕೆ ಅವಶ್ಯವಾದ ಉಪಾಯಗಳನ್ನು ಉಳಿದ ಸಂಘಗಳ ಸಹಾಯದಿಂದ ಕೈಕೊಳ್ಳಲು ಆ ಸಂಸ್ಥೆಗಳಿಗೆ ಬಿನ್ನಹವನ್ನು ಮಾಡಬೇಕು.(೯) ಕಾಂಗ್ರೆಸ್ಸಿನ ಮರುವರ್ಷದ ಅಧಿವೇಶನವು ಕಲಕತ್ತೆಯಲ್ಲಿ ೧೮೮೬ರ ಡಿಸೆಂಬರ ೨೮ನೆಯ ತಾರೀಖಿನ ದಿವಸ ಪ್ರಾರಂಭಿಸಲ್ಪಡಬೇಕು.

(೧೭) **ಕಲಕತ್ತೆಯಲ್ಲಿ ಎರಡನೆಯ ಕೂಟವು:**– (೧೮೮೬) ರ ಕಾಂಗ್ರೆಸಿನ ಎರಡನೆಯ ಅಧಿವೇಶನವು ೧೮೮೬ ರ ತಾ॥ ೨೮ ಡಿಸೆಂಬರಿನ ದಿನ ಕಲಕತ್ತೆಯಲ್ಲಿ ಪ್ರಾರಂಭವಾಯಿತು. ೪೩೪ ಪ್ರತಿನಿಧಿಗಳು ಅಧಿವೇಶನಕ್ಕೆ ಬಂದಿದ್ದರು. ಅಧಿವೇಶನವು ಟೌನಹಾಲಿನಲ್ಲಿ ಕೂಡಿತ್ತು; ಸ್ವಾಗತಾಧ್ಯಕ್ಷರಾದ ಡಾ. ರಾಜೇಂದ್ರಲಾಲ ಮಿತ್ರರು ತಮ್ಮ ಭಾಷಣದಲ್ಲಿ ಹಿಂದುಸ್ತಾನದ ಕಾಯದೆ ಕೌನ್ಸಿಲ್ಲುಗಳಲ್ಲಿ ಜನರಿಂದ ಆರಿಸಲ್ಪಟ್ಟ ಪ್ರತಿನಿಧಿಗಳಿರಬೇಕೆಂದು ಸಾರಿದರು: " ನಾವಿರುವದು ದೇಶೀ ಸರಕಾರದ ಅಧೀನದಲ್ಲಿ ಅಲ್ಲ, ಪರದೇಶಿ ಆಳರಸರ ಆಡಳಿತೆಯಲ್ಲಿ; ನಮ್ಮನ್ನಾಳುವವರು ಧರ್ಮ, ಭಾಷೆ, ನೀತಿನಡಾವಳಿ ಇವೆಲ್ಲ ದೃಷ್ಟಿಯಿಂದಲೂ ಪರಕೀಯರು. ಅವರಿಗೆ ನಮ್ಮ ಅಂತಃಕರಣವನ್ನು ಪ್ರವೇಶಿಸುವದು ಸಾಧ್ಯವಿಲ್ಲ; ನಮ್ಮ ಕೊರತೆ, ನಮ್ಮ ಭಾವನೆ, ನಮ್ಮ ಆಕಾಂಕ್ಷೆಗಳು ಅವರಿಗೆ ತಿಳಿಯಲಸಾಧ್ಯವು.

ಅವರು ಬೇಕಾದಷ್ಟು ಯತ್ನಿಸಬಹುದು. ಎಷ್ಟೋ ಅಧಿಕಾರಿಗಳು ನಮ್ಮ ಕೊರತೆಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಿರುವರೆಂಬುದರಲ್ಲಿ ಸಂದೇಹ ವಿಲ್ಲ; ಆದರೆ ಅವರ ಪ್ರಯತ್ನಗಳು ನಿಷ್ಫಲವಾಗಿವೆ." ಆದುದರಿಂದ ಕೌನ್ಸಿಲ್ಲುಗಳಲ್ಲಿ ದೇಶದ ಪ್ರತಿನಿಧಿಗಳು ಇದ್ದೆ ತೀರಬೇಕೆಂದು ರಾಜೇಂದ್ರ ಲಾಲರು ಪ್ರತಿಪಾದಿಸಿದರು.

ಅಧಿವೇಶನದ ಅಧ್ಯಕ್ಷಸ್ಥಾನಕ್ಕೆ ದಾದಾಭಾಯಿ ನೌರೋಜಿಯವರು ಆರಿಸಲ್ಪಟ್ಟರು. ಅವರು ತಮ್ಮ ಭಾಷಣದಲ್ಲಿ ಬ್ರಿಟಿಶ ಆಡಳಿತೆಯ ಗುಣಗಾನವನ್ನು ಮೊದಲು ಮಾಡಿದರು. "ನಾವು ಈ ರೀತಿ ಕೂಡಲು ಅನುಕೂಲವನ್ನೊದಗಿಸಿದ ಆಡಳಿತೆಯಲ್ಲಿರುವೆವೆನ್ನುವದೊಂದು ದೊಡ್ಡ ಭಾಗ್ಯವು (ಚಪ್ಪಾಳೆ). ಮಹಾರಾಣಿ ಮತ್ತು ಇಂಗ್ಲಂಡದ ನಾಗರಿಕರ ಆಳ್ಗಿಯ ಛತ್ರದ ಕೆಳಗೆ ನಾವು ಕೂಡಿರುವೆವು. ನಮಗೆ ಇಲ್ಲಿ ತೊಂದರೆ ಯನ್ನುಂಟುಮಾಡುವವರು ಯಾರೂ ಇಲ್ಲ, ನಮ್ಮ ಮನಸ್ಸಿನೊಳಗಿನ ಮಾತುಗಳನ್ನು ಯಾರ ಪರಿವೆಯಿಲ್ಲದೆ ನಾವು ಇಲ್ಲಿ ತೋಡಿಕೊಳ್ಳ ಬಹುದು. ಈ ಮಾತು ಕೇವಲ ಬ್ರಿಟಿಶರ ಆಳ್ಗಿಯಲ್ಲಿಯೆ ಸಾಧ್ಯವಿದೆ (ಪ್ರಚಂಡ ಚಪ್ಪಾಳೆ). ನಾನು ಈ ಪ್ರಶ್ನೆಯನ್ನು ಕೇಳುವೆ: ಈ ಕಾಂಗ್ರೆಸು ಬ್ರಿಟಿಶ ಸರಕಾರದ ವಿರುದ್ಧ ರಾಜದ್ರೋಹವನ್ನೂ ಬಂಡಾಯವನ್ನೂ ಹೂಡುವ ಸಂಸ್ಥೆಯೆ? (ಇಲ್ಲ! ಇಲ್ಲ! ಎಂದು ಕೂಗು); ಇಲ್ಲವೆ ಆ ಸರಕಾರವನ್ನು ಇನ್ನೂ ಹೆಚ್ಚು ಗಟ್ಟಿಯಾಗುವಂತೆ ಮಾಡುವ ತಳಗಲ್ಲೊ? (ಹೌದು! ಹೌದು! ಎಂದು ಕೂಗು)......ಬ್ರಿಟಿಶರ ರಾಜ್ಯದಿಂದಲೆ ನಮಗೆ ಶಿಕ್ಷಣ ದೊರೆಯಿತು. ಹಿಂದುಸ್ತಾನವೆಂದರೆ ಪರಮೇಶ್ವರನು ಇಂಗ್ಲಿಷ ಜನರಿಗೆ ಒಪ್ಪಿಸಿದ ವಿಶ್ವಾಸದ ಗಂಟು, ಇಂಗ್ಲಿಷರು ಹಿಂದುಸ್ತಾನವನ್ನು ಹಿಂದುಸ್ತಾ ನದ ಕಲ್ಯಾಣಕ್ಕಾಗಿಯೆ ಆಳಬೇಕೆಂಬ ಮಾತನ್ನು ಈಗ ೫೦ ವರುಷಗಳಾಚೆ ಇಂಗ್ಲಿಷರೆ ಅಂತಃಕರಣಪೂರ್ವಕವಾಗಿ ಹೇಳಿರುವರು (ಬಹಳ ವೇಳೆಯ ವರೆಗೆ ಚಪ್ಪಾಳೆ)." ಬ್ರಿಟಿಶ ಸಾಮ್ರಾಜ್ಯದಲ್ಲಿಯ ತಮ್ಮ ವಿಶ್ವಾಸವನ್ನು ಈ ರೀತಿ ಹೇಳಿ, ಕಾಂಗ್ರೆಸು ಬೇರೆ ಬೇರೆ ಸಮಾಜಗಳಿಗೆ ಸಂಬಂಧಿಸಿದ ಸಾಮಾಜಿಕ ಪ್ರಶ್ನೆಗಳಲ್ಲಿ ಲಕ್ಷ್ಯ ಹಾಕದೆ ಎಲ್ಲರಿಗೂ ಸಂಬಂಧಿಸಿದ ರಾಜಕೀಯ

ಪ್ರಶ್ನೆಗಳ ವಿಚಾರವನ್ನು ಮಾಡಬೇಕೆಂದು ದಾದಾಭಾಯಿಯವರು ಪ್ರತಿ ಪಾದಿಸಿದರು.

ಈ ಅಧಿವೇಶನದ ಗೊತ್ತುವಳಿಗಳಲ್ಲಿ ಮತ್ತೆ ಹಿಂದುಸ್ಥಾನದ ರಾಜಕೀಯ ಆಕಾಂಕ್ಷೆಗಳು ವ್ಯಕ್ತವಾದವು. ಹಿಂದುಸ್ಥಾನದ ಜನತೆಯು ಬಡತನವು ಬೆಳೆಯುತ್ತಲಿದೆ; ಜನರ ಸ್ಥಿತಿಯನ್ನು ಸುಧಾರಿಸಬೇಕಾದರೆ ಪ್ರಾತಿನಿಧಿಕ ಪದ್ಧತಿಯ ರಾಜ್ಯಪದ್ಧತಿಯು ಅಮಲಿನಲ್ಲಿ ಬರಬೇಕು; ಗವರ್ನರಜನರಲನ ಕೌನ್ಸಿಲ್ಲಿನಲ್ಲಿಯೂ ಪ್ರಾಂತಿಕ ಕೌನ್ಸಿಲ್ಲುಗಳಲ್ಲಿಯೂ ಸುಧಾರಣೆಯಾಗಲೆಬೇಕು; ಎಲ್ಲ ಕಾಯದೆ ಕೌನ್ಸಿಲ್ಲುಗಳಲ್ಲಿ ಅರ್ಧದಷ್ಟಾದರೂ ಲೋಕನಿಯುಕ್ತ ಸಭಾಸದರಿರಬೇಕು; ಪ್ರಾಂತಿಕ ಕಾಯದೆಮಂಡಲದ ಲೋಕನಿಯುಕ್ತ ಸಭಾಸದರನ್ನು ಮುನಸಿಪಾಲಿಟಿ ಲೋಕಲಬೋರ್ಡಿನವರು ಆರಿಸಬೇಕು; ಪ್ರಾಂತಿಕ ಕೌನ್ಸಿಲ್ಲುಗಳ ಸಭಾಸದರೆ ಹಿಂದುಸ್ಥಾನದ ಕೌನ್ಸಿಲ್ಲಿನ ಲೋಕನಿಯುಕ್ತ ಸಭಾಸದರನ್ನು ಆರಿಸಬೇಕು; ಕಾಯದೆಗಳೂ ಅಂದಾಜು ಪತ್ರಿಕೆಗಳೂ ಕಾಯದೆಮಂಡಲಗಳಲ್ಲಿ ಚರ್ಚಿಸಲ್ಪಡಬೇಕು; ಕಾಯದೆ ಮಂಡಲದ ಯಾವದೆ ನಿರ್ಣಯವನ್ನು ಅವಶ್ಯವಿದ್ದಾಗ ಗವರ್ನರಜನರಲನು ಬದಿಗಿರಿಸಬಹುದು, ಆದರೆ ಈ ತರದ ಪ್ರಸಂಗಗಳಲ್ಲಿ ಹಾವುಸ ಆಫ್ ಕಾಮನ್ಸಿನ ಕಮೀಟಿಯವರು ಗವರ್ನರಜನರಲನ ನಿರ್ಣಯವನ್ನು ಮತ್ತೆ ವಿಚಾರಿಸಬಹುದು; ಇವೆಲ್ಲ ಸುಧಾರಣೆಗಳನ್ನು ಅಮಲಿನಲ್ಲಿ ಹೇಗೆ ತರಬೇಕೆಂಬುದನ್ನು ವಿಚಾರಿಸಲು ಒಂದು ಕಮೀಶನ್ನು ನೇಮಿಸಬೇಕೆಂದು ದೇಶದೊಳಗಿನ ಎಲ್ಲ ಸಾರ್ವಜನಿಕ ಸಂಸ್ಥೆಗಳೂ ಸರಕಾರವನ್ನು ಪ್ರಾರ್ಥಿಸಬೇಕು; ಅವಶ್ಯವಾದಾಗ ಉಪಯೋಗವಾಗುವಂತೆ ಹಿಂದುಸ್ಥಾನದ ಜನರಿಗೆ ಸೈನಿಕ ಶಿಕ್ಷಣವು ದೊರೆಯುವ ಏರ್ಪಾಡಾಗಬೇಕು; ಇವೆಲ್ಲ ನಿರ್ಣಯಗಳ ಪ್ರತಿಗಳನ್ನು ವ್ಹಾಯಿಸರಾಯರಿಗೆ ಕಳಿಸಬೇಕು; ಇವೆ ಈ ಅಧಿವೇಶನದ ಮುಖ್ಯ ನಿರ್ಣಯಗಳಾಗಿದ್ದವು.

ಕಲಕತ್ತೆಯ ಅಧಿವೇಶನದಲ್ಲಿ ಪಂಡಿತ ಮದನಮೋಹನ ಮಾಲವಿಯರು ಕಾಂಗ್ರೆಸಿನಲ್ಲಿಯ ತಮ್ಮ ಮೊದಲನೆಯ ಭಾಷಣವನ್ನು ಮಾಡಿದರು. ಹಿಂದುಸ್ಥಾನದಲ್ಲಿ ಪ್ರಾತಿನಿಧಿಕ ರಾಜ್ಯಪದ್ಧತಿಯನ್ನು ಅಮಲಿನಲ್ಲಿ ತರಬೇಕೆಂಬ ನಿರ್ಣಯಕ್ಕೆ ಬೆಂಬಲವನ್ನು ಕೊಡುವಾಗ ಅವರು ಹೀಗೆ ಮಾತನಾಡಿ

ದರು: “ಬ್ರಿಟಿಶ ನಾಗರಿಕನಿಗೆ ಹೇಗೆ ಅವನ ಭಾಷೆ ಮತ್ತು ವಾಙ್ಮಯವೊ ಹಾಗೆಯೆ ಪ್ರಾತಿನಿಧಿಕ ಸಂಸ್ಥೆಗಳೂ ಅವನ ಜೀವನದ ಅಚ್ಛೇದ್ಯ ಭಾಗಗಳಾಗಿವೆ. ನಮಗೆ ತನ್ನ ಭಾಷೆಯನ್ನೂ ವಾಙ್ಮಯವನ್ನೂ ದಯಪಾಲಿಸಿ ಈಗ ನಮಗೆ ಪ್ರಾತಿನಿಧಿಕ ಸಂಸ್ಥೆಗಳನ್ನು ಬ್ರಿಟಿಶರು ಅಲ್ಲಗಳೆಯುವರೆ? ಪ್ರಜೆಗಳಿಂದ ತೆರಿಗೆಯನ್ನು ವಸೂಲು ಮಾಡಿಕೊಳ್ಳುವುದಾದರೆ ಪ್ರಜೆಗಳಿಗೆ ಆಡಳಿತೆಯ ಅಧಿಕಾರವನ್ನು ಕೊಡಬೇಕು. ಇದು ಬ್ರಿಟಿಶ ರಾಜನೀತಿಯ ಆದ್ಯ ತತ್ವವು. ತನ್ನ ಸದಸದ್ವಿವೇಕಬುದ್ಧಿಯನ್ನು ಬದಿಗೊತ್ತಿ ನಮ್ಮನ್ನು ಮೂಕ ಪ್ರಾಣಿಗಳೆಂದು ತಿಳಿದು ನಮ್ಮಿಂದ ತೆರಿಗೆಯನ್ನು ಬ್ರಿಟಿಶರು ಹೇಗೆ ವಸೂಲು ಮಾಡಿಕೊಳ್ಳಬಲ್ಲರು? ಆದರೆ ನಾವೇನು ಮೂಕರಲ್ಲ. ಈ ಕಾಂಗ್ರೆಸಿನಲ್ಲಿ ಹಿಂದಿ ಜನರಿಗೆ ಮುಖವು ದೊರೆತಂತಾಗಿದೆ; ಈ ಕಾಂಗ್ರೆಸಿನ ಮುಖಾಂತರವಾಗಿಯೆ ತನ್ನ ಪರಂಪರೆಗೂ ಅಂತಪ್ರೇರಣೆಗೂ ತಕ್ಕಂತೆ ಬ್ರಿಟಿಶ ಸಾಮ್ರಾಜ್ಯದ ಸ್ವತಂತ್ರನಾಗರಿಕರಾದ ನಮಗೆ ಸಲ್ಲುವ ಅಧಿಕಾರಗಳನ್ನು ನಮಗೆ ದಯಪಾಲಿಸಲೆಂದು ನಾವು ಇಂಗ್ಲಂಡನ್ನು ಕೇಳಿಕೊಳ್ಳುತ್ತೇವೆ.”

ಈ ಕಾಂಗ್ರೆಸನ್ನುಲ್ಲೇಖಿಸಿ ಕಲ್ಕತ್ತೆಯ ಸ್ಟೇಟ್ಸ್ಮನ ಪತ್ರಿಕೆಯು “ಕಾಂಗ್ರೆಸಿನಲ್ಲಿ ಬ್ರಿಟಿಶರ ಶತಮಾನದ ಆಳಿಕೆಯಿಂದ ಮುಂದೆ ಬಂದ ಜನರು ಇರುವರು; ಅವರೆಡೆಗೆ ನಾವು ಹೆಮ್ಮೆಯಿಂದ ಬೊಟ್ಟಿಟ್ಟು ತೋರಿಸಬಹುದು” ಎಂದು ಪ್ರಶಂಸೆಯನ್ನು ಮಾಡಿತು; ಲಂಡನ ಟಾಯಿಮ್ಸ ಪತ್ರಿಕೆಯು “ಇದೇನು, ದೊಡ್ಡ ನೋಕರಿಗಳಾಸೆಗಾಗಿ ಹಂಬಲಿಸುವ ಸ್ವಾರ್ಥಿಗಳ ಕೂಟವಿದು; ಇವರದೇನು ಹುಲ್ಲುಕಡ್ಡಿಯ ಯೋಗ್ಯತೆ, ಇವರನ್ನು ದೇಶದಲ್ಲಿ ಲೆಕ್ಕಿಸುವವರಾರು? ಎರಡನೆಯವರ ಅನುಕರಣ ಮಾಡುವ ಶಕ್ತಿ ಇವರಲ್ಲಿದೆ; ಆದರೆ ರಾಜ್ಯವನ್ನು ಹೇಗೆ ಸಾಗಿಸಬೇಕೆಂಬುದರ ಹುರುಳು ಇವರಿಗೆ ಗೊತ್ತಿಲ್ಲ..ಮಾತಿನ ಮಲ್ಲರಿವರು, ದೇಶದ ಶಾಂತತೆಗೆ ಧಕ್ಕೆಯನ್ನುಂಟು ಮಾಡಬಹುದು” ಎಂದು ವಿಷಯವನ್ನು ಕುರಿತು ವ್ಯಾಖ್ಯಾಯಿಸರಾಯ ಲಾರ್ಡ ಡಫರಿನರು ಕಾಂಗ್ರೆಸದ ಪ್ರತಿನಿಧಿಗಳನ್ನೆಲ್ಲ ಸಂತೋಷ ಕೂಟಕ್ಕೆ ಕರೆದಿದ್ದರು; ಆದರೆ “ನಿಮ್ಮನ್ನೇನು ದೇಶದ ಪ್ರತಿನಿಧಿಗಳೆಂದು ಕರೆದಿಲ್ಲ, ಕೇವಲ ಸನ್ಮಾನ್ಯ ಅತಿಥಿಗಳೆಂದು ಕರೆದಿರುವೆನು” ಎಂದು ಹೇಳಿದರು!

(೧೭) **ಮದ್ರಾಸಿನ ಮೂರನೆಯ ಕೂಟವು (೧೮೮೭)**:- ಕಾಂಗ್ರೆಸಿನ ಮೂರನೆಯ ಅಧಿವೇಶನವು ಮದ್ರಾಸಿನಲ್ಲಿ ಕೂಡಿತು. ೬೦೭ ಪ್ರತಿನಿಧಿಗಳು ಬಂದಿದ್ದರು. ೪೫ ರೈತರೂ ೧೯ ಕೂಲಿಕಾರರೂ ಬಂದಿದ್ದರು. ಕಾಂಗ್ರೆಸಿನ ಪೂರ್ವಸಿದ್ಧತೆಯನ್ನು ಮದರಾಸಿನ ಸ್ವಾಗತಸಭೆಯವರು ಒಳ್ಳೆ ಶಿಸ್ತಿನಿಂದ ಮಾಡಿದ್ದರು. ೧೮೮೭ ರ ಮೇ ತಿಂಗಳಿನಲ್ಲಿಯೆ ೧೨೦ ಜನರ ಸ್ವಾಗತಸಭೆಯನ್ನು ಏರ್ಪಡಿಸಿ, ತಮಿಳ ಭಾಷೆಯಲ್ಲಿ ಕಾಂಗ್ರೆಸ ಸಂಸ್ಥೆಯ ಮೂಲತತ್ವಗಳನ್ನೊಳಗೊಂಡ ಪತ್ರಿಕೆಯ ೩೦೦೦೦ ಪ್ರತಿಗಳನ್ನು ಹಂಚಿ, ೫೫೦೦ ರೂಪಾಯಿಗಳನ್ನು ಕೂಡಿಸಿದ್ದರು. ಮೈಸೂರ ತಿರುವಾಂಕೂರ ಕೋಚೀನ ಸಂಸ್ಥಾನಗಳ ಮಹಾರಾಜರೂ ವೆಂಕಟಗಿರಿಯ ರಾಜರೂ ವರ್ಗಣಿಯನ್ನು ಸಲ್ಲಿಸಿದರು. ಪಚ್ಚೆಯಪ್ಪ ಕಾಲೇಜಿನ ಪ್ರಿನ್ಸಿಪಾಲರಾದ ಆಡಾಮ್ಸರು ಪ್ರತಿನಿಧಿಗಳಾಗಿ ಬಂದಿದ್ದರು; ಮಹಾದೇವ ಗೋವಿಂದ ರಾನಡೆಯವರು ಅತಿಥಿಗಳಾಗಿದ್ದರು; ತಿರುಪತಿಯ ಮಹಂತರು ದರಬಂಗೆಯ ಮಹಾರಾಜರು ಕಾಶಿನಾಥ ತ್ರಿಂಬಕ ತೆಲಂಗ ಮುಂತಾದ ಮಹನೀಯರಿಂದ ಸಹಾನುಭೂತಿಪರ ಸಂದೇಶಗಳು ಬಂದಿದ್ದವು.

ಮ್ಯಾಕೇತೋಟದಲ್ಲಿ ಕಾಂಗ್ರೆಸಿಗಾಗಿಯೆ ಸಿದ್ಧಪಡಿಸಿದ ಮಂಟಪದಲ್ಲಿ ಡಿಸೆಂಬರ ತಾ॥ ೨೭ ದಿನ ಅಧಿವೇಶನಕ್ಕೆ ಪ್ರಾರಂಭವಾಯಿತು; ಒಟ್ಟಿನಲ್ಲಿ ೩೦೦೦ ಪ್ರೇಕ್ಷಕರಿದ್ದರು; ಅಧಿವೇಶನದ ಕಾರ್ಯವು ನಾಲ್ಕು ದಿನ ನಡೆಯಿತು. ಬುದ್ರುದ್ದಿನ ತಯ್ಯಬಜಿಯವರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಕಾಂಗ್ರೆಸಿನ ಮೊದಲನೆಯ ಅಧಿವೇಶನದ ಅಧ್ಯಕ್ಷರು ಹಿಂದೂ ಧರ್ಮಕ್ಕೆ ಸೇರಿದವರು; ಎರಡನೆಯ ಅಧಿವೇಶನದ ಅಧ್ಯಕ್ಷರು ಪಾರ್ಸಿಮತದವರು, ಮೂರನೆಯ ಅಧಿವೇಶನದ ಅಧ್ಯಕ್ಷರು ಮಹಮ್ಮದೀಯರು. ಬುದ್ರುದ್ದಿನ ತಯ್ಯಬಜಿಯವರು ತಮ್ಮ ಭಾಷಣದಲ್ಲಿ ಕಾಂಗ್ರೆಸ ಸಂಸ್ಥೆಯು ಹಿಂದುಸ್ತಾನದ ಪ್ರಾತಿನಿಧಿಕ ಸಂಸ್ಥೆಯಾಗಿದೆಯೆಂದು ಮೊದಲು ಹೇಳಿದರು; ಮುಸಲ್ಮಾನ ಸಮಾಜದವರೂ ಕಾಂಗ್ರೆಸಿನಲ್ಲಿ ಉಳಿದ ಸಮಾಜದವರೊಂದಿಗೆ ಸಹಕಾರದಿಂದ ಕಾರ್ಯಮಾಡಬೇಕೆಂದು ಆಗ್ರಹದಿಂದ ಬಿನ್ನವಿಸಿದರು; ಕಾಂಗ್ರೆಸೆಂದರೆ ಕೇವಲ ಶಿಕ್ಷಿತರ ಸಂಸ್ಥೆಯೆಂಬ ಆಕ್ಷೇಪಣೆಗೆ ಶಿಕ್ಷಿತರಿಗೆಯೆ ದೇಶದ ಹಿತಾಹಿತವು ಒಳ್ಳೆ ರೀತಿಯಿಂದ ತಿಳಿಯುವದೆಂದು ಉತ್ತರವನ್ನು ಕೊಟ್ಟರು;

ದೇಶದಲ್ಲಿಯ ಶಿಕ್ಷಿತರು ರಾಜದ್ರೋಹಿಗಳೆಂಬ ಮಾತನ್ನು ಖಂಡಿಸಿದರು; ಕಾಂಗ್ರೆಸ್ಸಿನಲ್ಲಿ ಆಯಾ ಸಮಾಜಕ್ಕೆ ಸಂಬಂಧಿಸಿದ ಸಾಮಾಜಿಕ ಪ್ರಶ್ನೆಗಳಿಗೆ ಆಸ್ಪದ ಕೊಡದೆ ಎಲ್ಲ ಸಮಾಜಗಳಿಗೂ ಸಂಬಂಧಿಸಿದ ರಾಷ್ಟ್ರೀಯ ಪ್ರಶ್ನೆ ಗಳನ್ನು ವಿಚಾರಿಸಬೇಕೆಂದು ಪ್ರತಿಪಾದಿಸಿದರು.

ಕಾಯದೆ ಕೌನ್ಸಿಲ್ಲುಗಳ ಸುಧಾರಣೆ, ಕಲೆಕ್ಟರನಂತಹ ಒಬ್ಬ ಅಧಿ ಕಾರಿಯ ಕೈಯಲ್ಲಿಯೆ ದಿವಾಣಿ ಮತ್ತು ಫೌಜದಾರಿ ಅಧಿಕಾರಗಳು ಇರ ಬಾರದೆಂಬ ಸೂಚನೆ, ಸೈನ್ಯದಲ್ಲಿ ಅಧಿಕಾರಸ್ಥಾನಗಳನ್ನು ಹಿಂದೀ ಜನರಿಗೂ ಕೊಡುವ ಅವಶ್ಯಕತೆ ಮತ್ತು ಸೈನ್ಯಶಿಕ್ಷಣದ ಕಾಲೇಜುಗಳನ್ನು ಸ್ಥಾಪಿ ಸುವ ಅವಶ್ಯಕತೆ, ಆಯುಧಗಳನ್ನು ಇಡಲು ಸ್ವಾತಂತ್ರ್ಯವಿರಬೇಕೆಂದು ಸೂಚನೆ, ಇನಕಮಟ್ಯಾಕ್ಸು ಕಡಿಮೆ ಮಾಡಬೇಕೆಂಬ ಸೂಚನೆ ಈ ವಿಷಯ ಗಳೆಲ್ಲ ಮದ್ರಾಸಿನ ಅಧಿವೇಶನದಲ್ಲಿ ಚರ್ಚಿಸಲ್ಪಟ್ಟವು. ಕಾಯದೆ ಕೌನ್ಸಿಲ್ಲು ಗಳ ಸುಧಾರಣೆಯ ವಿಷಯಕ್ಕೆ ಮಾತನಾಡುವಾಗ ಪಂಡಿತ ಮದನಮೋಹನ ಮಾಲವೀಯರು ಕಾಂಗ್ರೆಸಿನ ಕಾರ್ಯಕಲಾಪಗಳನ್ನು ಉಲ್ಲೇಖಿಸಿದರು: "ವರುಷವರುಷಕ್ಕೂ ನಾವು ನೋಡುತ್ತಲಿರುವ ನೋಟವೇನಿದು? ಪಂಜಾಬ, ಸಿಂಧ, ಆಸಾಮು, ಮದ್ರಾಸು, ಬಂಗಾಲ, ಮುಂಬಯಿ, ವಾಯು ವ್ಯಪ್ರಾಂತ, ಅಯೋಧ್ಯಾ, ಮಧ್ಯಪ್ರಾಂತ ಹೀಗೆ ಪ್ರತಿಯೊಂದು ಪ್ರಾಂತ ದಿಂದಲೂ ಪ್ರತಿನಿಧಿಗಳು ಬಂದು ಸರಕಾರಕ್ಕೆ ಈ ಮಹತ್ವದ ಸುಧಾರಣೆ ಯನ್ನು ದಯಪಾಲಿಸಿರೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತಲಿರುವರು.... ಇದ ರಲ್ಲಿ ಈ ಪ್ರತಿನಿಧಿಗಳ ಸ್ವಾರ್ಥವೇನೂ ಇಲ್ಲ. ತಮ್ಮ ಮಾತೃಭೂಮಿಯಾದ ಹಿಂದುಸ್ಥಾನಕ್ಕೆ ಈ ಸುಧಾರಣೆಯಿಂದ ಕಲ್ಯಾಣವಾಗುವದೆಂದು ಅವರ ಮನವರಿಕೆಯಾಗಿದೆ."

(೧೮) **ಅಲಹಾಬಾದಿನಲ್ಲಿ ನಾಲ್ಕನೆಯ ಕೂಟವು** (೧೮೮೮)
ಕಾಂಗ್ರೆಸಿನ ನಾಲ್ಕನೆಯ ಅಧಿವೇಶನವು ೧೮೮೮ ಇಸವಿಯ ಡಿಸೆಂಬರ ತಿಂಗಳ ೨೬ ತಾರೀಖಿನ ದಿನ ಪ್ರಾರಂಭವಾಯಿತು; ಸರಕಾರೀ ಅಧಿಕಾರಿಗಳು ಈ ಸಲ ಕಾಂಗ್ರೆಸಿನ ಕಾರ್ಯದಲ್ಲಿ ತೊಂದರೆಯನ್ನುಂಟು ಮಾಡಿದರು; ಮೊದ ಲಿಗೆ ಕಾಂಗ್ರೆಸಿನ ಅಧಿವೇಶನಕ್ಕಾಗಿ ಖುಸ್ರೊ ಬಾಗವನ್ನು ಕೊಡುತ್ತೇವೆಂದು ಹೇಳಿ ಹಿಂದುಗಡೆ ಮಾತು ಮುರಿದುಬಿಟ್ಟರು; ಕಾಂಗ್ರೆಸ ಅಧಿಕಾರಿಗಳು

ಗವರ್ನಮೆಂಟ್‌ಹಾವುಸಿನೆದುರಿಗಿನ ದೊಡ್ಡ ಬಂಗ್ಲೆಯನ್ನೆ ಬಾಡಿಗೆಯಿಂದ ಹಿಡಿದು ಅಧಿವೇಶನದ ಕಾರ್ಯವನ್ನು ಆ ವಿಸ್ತೃತ ಸ್ಥಳದಲ್ಲಿ ನೆರವೇರಿಸಿದರು. ಅಲ್ಲಲ್ಲಿಯ ಸರಕಾರೀ ಅಧಿಕಾರಿಗಳು ಕಾಂಗ್ರೆಸಿಗೆ ವಿರೋಧಕ ವೃತ್ತಿಯನ್ನು ತೋರಿದರು. ಮದ್ರಾಸ ಇಲಾಖೆಯಲ್ಲಿಯ ಒಬ್ಬ ಕಾಂಗ್ರೆಸದ್ವೇಷಿ ಕಲೆಕ್ಟರನು ಒಬ್ಬ ನಾಗರಿಕನು ಅವನ ಇಚ್ಛೆಯನ್ನು ಲೆಕ್ಕಿಸದೆ ಕಾಂಗ್ರೆಸಿಗೆ ಹೊರಟಾಗ ಅವನಿಂದ ಕಲೆಕ್ಟರನು ೨೦೦೦೦ ರೂಪಾಯಿಯ ಜಾವಿಾನು ತೆಗೆದುಕೊಂಡನು; ಪಂಜಾಬದ ಒಂದು ಜಿಲ್ಹೆಯಲ್ಲಿ ಕಲೆಕ್ಟರನು ೫-೬ ಸಾವಿರ ಜನರಿಂದ ಈ ತರದ ಜಾವಿಾನು ತೆಗೆದುಕೊಂಡನು. ಇನೂ ಅಲ್ಲದೆ ಅನೇಕ ಕಡೆಗೆ ಕಾಂಗ್ರೆಸ ವಿರೋಧಿ ಮಂಡಲ''ಗಳು ಸ್ಥಾಪಿಸಲ್ಪಟ್ಟು ಅವುಗಳಲ್ಲಿ ಸರಕಾರೀ ಅಧಿಕಾರಿಗಳೂ ಕೂಡಿದ್ದರು. ಅಲಹಾಬಾದಿನ ಅಧಿವೇಶನದಿಂದಲೆ ಸರಕಾರದವರು ವಿರೋಧವನ್ನು ಪ್ರಾರಂಭಿಸಿದರು.

ಅಲಹಾಬಾದಿನ ಅಧಿವೇಶನಕ್ಕೆ ಕಲಕತ್ತೆಯ ದೊಡ್ಡ ವ್ಯಾಪಾರಸ್ಥರಾದ ಜಾರ್ಜ ಯೂಲರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಜಾರ್ಜ ಯೂಲರು ಯುರೋಪಿಯನರು; ಕಾಂಗ್ರೆಸಿಗೆ ಯುರೋಪಿಯನರ ಬೆಂಬಲವಿದೆಯೆನ್ನುವದನ್ನು ಜಾಹೀರ ಪಡಿಸುವದಕ್ಕಾಗಿಯೆ ಯೂಲರ ಯೋಜನೆಯಾಗಿತ್ತೆಂದು ತೋರುತ್ತದೆ; ಅಧ್ಯಕ್ಷಪದವನ್ನು ಸ್ವೀಕರಿಸಲು ಉಮೇಶಚಂದ್ರ ಬಾನರ್ಜಿಯವರೆ ಪ್ರಯತ್ನಪಟ್ಟರು. ಯೂಲರು ತಮ್ಮ ಭಾಷಣದಲ್ಲಿ ಹಿಂದುಸ್ತಾನಕ್ಕೆ ಬೇಕಾದದ್ದು ತನ್ನ ಆಡಳಿತೆಯಲ್ಲಿ ತಾನು ಭಾಗ ವಹಿಸಬೇಕೆಂಬುದೆಂದು ಒಳ್ಳೆ ವಿಚಾರಪೂರ್ವಕವಾಗಿ ಪ್ರತಿಪಾದಿಸಿದರು. ಹಿಂದುಸ್ತಾನದ ಆಗಿನ ಆಡಳಿತೆಯನ್ನು ಕುರಿತು ಅವರು ಆಡಿದ ಮಾತುಗಳು ಮನನೀಯವಾಗಿವೆ:- '' ಹಿಂದುಸ್ತಾನದ ಪರದೇಶಿ ವ್ಯಾಪಾರವು ೧೫ ಕೋಟಿ ಪೌಂಡಿನಷ್ಟಿದೆ. ಆದರೂ ಇಲ್ಲಿಯ ವ್ಯಾಪಾರಸ್ಥರಿಗೆ ರಾಜ್ಯದಾಡಳಿತೆಯ ವಿಷಯದಲ್ಲಿ ಒಂದು ಮಾತನ್ನು ಆಡಲು ಬರುವಂತಿಲ್ಲ. ಹಿಂದುಸ್ತಾನದ ಕಳೆದ ವರ್ಷದ ಆದಾಯವು ೭ ಕೋಟಿ ೭೦ ಲಕ್ಷ ಪೌಂಡಿನಷ್ಟಿದೆ; ಆದರೆ ಸುಪ್ರೀಮು ಕೌನ್ಸಿಲಿನ ಹೊರಗಿನ ಒಬ್ಬ ಹಿಂದೀ ಮನುಷ್ಯನಿಗೂ ಆ ವಿಷಯವನ್ನು ವಿಚಾರಿಸುವ ಅಧಿಕಾರವಿಲ್ಲ (ದೊಡ್ಡ ಚಪ್ಪಾಳೆ)'' ಹಿಂದುಸ್ತಾನದ ಯುರೋಪಿಯನ ಸಮಾಜದ ವಿಷಯಕ್ಕೂ ಅವರು ಬೋಧಪ್ರದವಾದ ಮಾತುಗಳನ್ನು ಹೇಳಿ

ದರು: "ನಮ್ಮ ಸರಕಾರದವರು ಇಂಗ್ಲಿಷರು: ನಾವೂ ಇಂಗ್ಲಿಷರು. ಆದುದರಿಂದ ನಮಗೆ ಆಡಳಿತೆಯು ಅಧಿಕಾರಗಳು ದೊರೆತಂತೆಯೆ ಹೀಗೆನ್ನುವದು ಅವಿವೇಕತನದ ಮಾತು. ರಾಜ್ಯದಾಡಳಿತೆಯಲ್ಲಿ ಹಿಂದೀ ಜನರಿಗಿಂತಲೂ ನನಗೆ ಯಾವ ಹೆಚ್ಚಿನ ಅಧಿಕಾರಗಳಿಲ್ಲ.... ಇಂಗ್ಲಂಡಿಗೆ ನಾವು ಹೋದರೆ ನಮಗೆ ಮತದಾನದ ಅಧಿಕಾರವು ದೊರೆಯುವದು; ಹಿಂದುಸ್ತಾನದಲ್ಲಿ ಮಾತ್ರ ನಮಗೆ ಯಾವ ಮತದಾನದ ಅಧಿಕಾರವೂ ಇಲ್ಲ. ಇಂಗ್ಲಂಡದಲ್ಲಿ ಯಾಗಿದ್ದರೆ ನಾವು ಸನ್ಮಾನ್ಯ ನಾಗರಿಕರಾಗುತ್ತಿದ್ದೆವು; ಇಲ್ಲಿ ಮಾತ್ರ ನಾವು ಗುಪ್ತ ರಾಜದ್ರೋಹಿಗಳೆಂದು ನಮ್ಮ ಪ್ರತಿಪಕ್ಷಿಗಳು ಅನ್ನುತ್ತಾರೆ (ಚಪ್ಪಾಳೆ ಹಾಗೂ ನಗೆ)."

ಅಹಮದಾಬಾದಿನ ಕಾಂಗ್ರೆಸಿನಲ್ಲಿ ಆ ಮೊದಲಿನ ಕಾಂಗ್ರೆಸಗಳ ಕೆಲವು ನಿರ್ಣಯಗಳು ಮತ್ತೆ ಪಾಸು ಮಾಡಲ್ಪಟ್ಟವು. ಆಯ. ಸಿ. ಎಸ. ಪರೀಕ್ಷೆಯು ಹಿಂದುಸ್ತಾನ ಮತ್ತು ಇಂಗ್ಲಂಡದಲ್ಲಿ ಹೀಗೆ ಎರಡೂ ದೇಶಗಳಲ್ಲಿ ಒಂದೇ ಕಾಲಕ್ಕೆ ಜರುಗಬೇಕು, ಕಾಯದೆ ಕೌನ್ಸಿಲ್ಲುಗಳಲ್ಲಿ ಜನರ ಪ್ರತಿನಿಧಿಗಳ ಸೇರ್ಪಡೆಯಾಗಬೇಕು, ಪೋಲೀಸ ಆಳ್ವಿಯು ಬಲು ತಾಪದಾಯಕವಾದುದರಿಂದ ಚೌಕಶಿ ಮಾಡಲು ಒಂದು ಕಮೀಶನ್ನು ನೇಮಿಸಬೇಕು, ಮದ್ಯಪಾನ ಪ್ರತಿಬಂಧವನ್ನು ಮಾಡಲು ಸರಕಾರದವರು ಹವಣಿಸಬೇಕು, ರಾಜ್ಯದಾಡಳಿತೆಯಲ್ಲಿ ಯಾವ ಸುಧಾರಣೆಗಳನ್ನು ಮಾಡಬೇಕೆಂಬುದನ್ನು ವಿಚಾರಿಸಲು ಒಂದು ಕಮೀಶನ್ನು ನೇಮಿಸಬೇಕು, ಉಪ್ಪಿನ ಕರವನ್ನು ಹೆಚ್ಚಿಸಿದ್ದು ಅನ್ಯಾಯದ ಮಾತಾಯಿತು, ಬೌದ್ಧಿಕ ಹಾಗೂ ಔದ್ಯೋಗಿಕ ಶಿಕ್ಷಣದ ತನ್ನ ಏರ್ಪಾಡು ಮಾಡಬೇಕು ಇವೆ. ಮುಂತಾದ ಮಾತುಗಳ ನ್ನೊಳಗೊಂಡ ನಿರ್ಣಯಗಳು ಪಾಸಾದವು.

**(೧೯) ಮುಂಬಯಿಯಲ್ಲಿಯ ಐದನೆಯ ಅಧಿವೇಶನವು** (೧೮೮೯):- ೧೮೮೯ರ ಡಿಶೆಂಬರದ ೨೬ ತಾರೀಖಿನ ದಿನ ಜರುಗಿದ ಕಾಂಗ್ರೆಸಿನ ಐದನೆಯ ಅಧಿವೇಶನವು ಅನೇಕ ದೃಷ್ಟಿಯಿಂದ ಅಪೂರ್ವವಾಯಿತು. ೧೮೮೯ ಪ್ರತಿನಿಧಿಗಳು ಅಧಿವೇಶನಕ್ಕೆ ಬಂದಿದ್ದರು. ಪ್ರತಿನಿಧಿಗಳಲ್ಲಿ ರಾಜಮನೆತನದವರು, ಸರದಾರರು ರೈತರು, ವ್ಯಾಪಾರಸ್ಥರು, ಬ್ಯಾರಿಸ್ಟರರು, ವಕೀಲರು ಹೆಡಮಾಸ್ತರರು, ಸಂಪಾದಕರು ಸಾವಕಾರರು ಮುಂತಾದ ಎಲ್ಲ ಜಾತಿಯ

ಎಲ್ಲ ಉದ್ಯೋಗಗಳ ಜನರು ಬಂದಿದ್ದರು; ೧೦ ಸ್ತ್ರೀಯರೂ ಬಂದಿದ್ದರು. ಮೆಹತಾರು ಸ್ವಾಗತಸಮಿತಿಯ ಅಧ್ಯಕ್ಷರಾಗಿದ್ದರು. ಕಾಂಗ್ರೆಸಿನ ಅಧ್ಯಕ್ಷಸ್ಥಾನವನ್ನು ಬ್ರಿಟಿಶ ಪಾರ್ಲಮೆಂಟಿನ ಸಭಾಸದರಾದ ಸರ ಉಯಿಲಿಯಮ ವೆಡರಬರ್ನರು ಅಲಂಕರಿಸಿದ್ದರು. ಈ ಅಧಿವೇಶನದಲ್ಲಿಯೂ ಮೊದಲಿನಂತೆಯೆ ನಿರ್ಣಯಗಳಾದವು; ವಿಶೇಷವಾದ ಮಾತೆಂದರೆ ಈ ಅಧಿವೇಶನಕ್ಕೆ ಇಂಗ್ಲಂಡದಲ್ಲಿಯ ನಾಮಾಂಕಿತ ಪುರುಷರಾದ ಸರ ಚಾರ್ಲ್ಸ ಬ್ರಾಡಲಾ ಇವರು ಬಂದಿದ್ದರು. ಕಾಂಗ್ರೆಸಿನ ಕೊನೆಯದಿನ (೨೮ ಡಿಸೆಂಬರ) ಸಾಯಂಕಾಲ ಹಿಂದುಸ್ಥಾನದ ಪರವಾಗಿ ಚಾರ್ಲ್ಸಬ್ರಾಡಲಾ ಅವರಿಗೆ ಮಾನಪತ್ರವು ಸಮರ್ಪಿಸಲ್ಪಟ್ಟಿತು. ಹಿಂದುಸ್ಥಾನದ ಪ್ರತಿಯೊಂದು ಭಾಗದಿಂದಲೂ ಒಂದ ಕಾಣಿಕೆಗಳು ಸಮರ್ಪಿಸಲ್ಪಟ್ಟವು. ಬ್ರಾಡಲಾರು ತಮ್ಮ ಭಾಷಣದಲ್ಲಿ ನಾಲ್ಕು ಬುದ್ಧಿಯ ಮಾತುಗಳನ್ನು ಹೇಳಿದರು. ತಾನು ಹಿಂದೀ ಜನರು ತನ್ನ ವಿಷದಲ್ಲಿ ತೋರಿಸಿದ ಮಾನಮರ್ಯಾದೆಗಳಿಗೆ ಅಷ್ಟು ಪಾತ್ರನಲ್ಲ. ಜನರಲ್ಲಿಯೆ ಬೆಳೆದವನಾದ ತಾನು ಜನರಿಗಾಗಿಯೆ ದುಡಿಯುವವನು. ಹಿಂದೀ ಜನರು ಅತಿ ಅಪೇಕ್ಷೆಯನ್ನು ಮಾಡಬಾರದು; ಬೇಡಿದ್ದೆಲ್ಲ ಕೂಡಲೆ ಸಿಕ್ಕಲಿಲ್ಲವೆಂದು ನಿರಾಶರಾಗಬಾರದು. ಇಂಗ್ಲಂಡದಲ್ಲಿ ಕೂಡ ಸುಧಾರಣೆಯಾದದ್ದು ಮೆಲ್ಲ ಮೆಲ್ಲಗೆ, ಮೊದಲು ಕಾರ್ಯಕ್ಕೆ ಕೈ ಹಾಕಿದವರು ಅಪರಾಧಿಗಳೆಂದು ಸೆರೆಮನೆಯನ್ನು ಸೇರಬೇಕಾಯಿತು. ಆದರೆ ಸೆರೆಮನೆಯು ಸತ್ಯವನ್ನು ದಬ್ಬಲು ಸಮರ್ಥವಾಗಲಾರದು. “ನೀವೆಲ್ಲರು ಇಲ್ಲಿ ಕೂಡಿದ್ದನ್ನು ನೋಡಿದರೆ ಪಾರ್ಲಮೆಂಟಿನಲ್ಲಿ ನಿಮ್ಮ ಚಳವಳಿಯ ವಿಷಯಕ್ಕೆ ಆಡಿದ ಕೀಳು ಮಾತುಗಳು ಸುಳ್ಳಿವೆಯೆಂಬುದು ತಾನೆ ಕಂಡು ಬರುವದು. ಕೆಲವರು ಹೇಳುತ್ತಾರೆ: ‘ಹಿಂದುಸ್ಥಾನ-ರಾಷ್ಟ್ರವೆಂಬುದು ಇಲ್ಲವೆ ಇಲ್ಲ; ಹಿಂದೀ ರಾಷ್ಟ್ರೀಯ ಸಭೆಯೆಂಬ ವಸ್ತುವು ಇರಲು ಸಾಧ್ಯವಿಲ್ಲ; ಹಿಂದೀ ಜನಾಂಗವೆಂಬುದು ಇಲ್ಲವೆ ಇಲ್ಲ; ಬೇರೆ ಬೇರೆ ವಂಶಗಳಿಗೆ ಧರ್ಮಗಳಿಗೆ ಸೇರಿದ ೨೦ ಕೋಟಿ ಮನುಷ್ಯರಿರುವರು’ ಎಂದು. ನಾನು ಇಲ್ಲಿ ನೋಡುತ್ತಿರುವದು ಕಾಂಗ್ರೆಸೆಂದರೆ ಒಂದು ದೊಡ್ಡ ಶಿಕ್ಷಣವು; ಜನರೆಲ್ಲರೂ ಒಕ್ಕಟ್ಟಾಗುವಂತೆ ಮತ್ತೆ ಮತ್ತೆ ಒಕ್ಕಟ್ಟಿನ ಪಾಠವನ್ನು ತೀಡಿಸುವದು ಕಾಂಗ್ರೆಸಿನ ಕಾರ್ಯವು.... ನಾನು ಮರಳಿ ಹೋದ ಕೂಡಲೆ

ಇಂಡಿಯಾ ಬಿಲ್ಲನ್ನು ಪಾರ್ಲಮೆಂಟಿನೆದುರಿಗೆ ಮಂಡಿಸುವೆನು.... ನಾವೇನು ರಾಜದ್ರೋಹಿ ಚಳವಳಿಯಲ್ಲಿ ತೊಡಗಿಲ್ಲ; ಇಂಗ್ಲಂಡದಲ್ಲಿರುವ ಎಲ್ಲ ಪ್ರತಿನಿಧಿಕ ಸಂಸ್ಥೆಗಳೂ ಇಲ್ಲಿ ಸ್ಥಾಪಿಸಲ್ಪಡಬೇಕೆಂಬ ನಾವು ಹವಣಿಸುವದಿಲ್ಲ; ನಾವು ಒಂದು ದೊಡ್ಡ ಗುಡ್ಡವನ್ನು ಏರುತ್ತಲಿರುವೆವು; ಒಂದೊಂದೆ ಪಾವಟಿಗೆಯನ್ನು ಕೊರೆಯುತ್ತಲಿರುವೆವು.... ಇನ್ನೂ ಸೂರ್ಯೋದಯವಾಗಿಲ್ಲ; ಆದರೆ ಸೂರ್ಯನ ಕಿರಣಗಳು ಅಕೊ ಆ ಮೋಡಗಳನ್ನು ಕೆಂಪು ಕೆಂಪಾಗುವಂತೆ ಮಾಡಿವೆ !.... ನಾನೊಬ್ಬನು ದೊಡ್ಡ ಸಮುದ್ರದಲ್ಲಿಯ ಒಂದು ಹನಿಯಂತೆ, ಆದರೆ ಒಬ್ಬನಿಂದಾದರೂ ಕಾರ್ಯವಾಗಲಾರದೆ?.... ನೀವೆಲ್ಲರೂ ಕಾಯದೆಯ ಎಲ್ಲೆಯನ್ನು ಮೀರದೆ ಕಾರ್ಯಮಾಡುವವರೆಂದೆ ನಾನು ಇಲ್ಲಿಗೆ ಬಂದಿರುವೆನು; ನಾವು ಇಂಗ್ಲಂಡದಲ್ಲಿ ಕಾಯದೆಯ ಗಡಿಗಳನ್ನು ದಾಟದೆ ಹಕ್ಕುಗಳಿಗಾಗಿ ಹೋರಾಡಿದಂತೆಯೆ ನೀವಾದರೂ ಹೋರಾಡುವಿರೆಂದು ನಾನು ನಂಬಿರುವೆನು........''.ಚಾರ್ಲ್ಸ್ ಬ್ರಾಡಲಾ ಅವರು ಆಡಿದ ಮಾತುಮಾತಿಗೂ ಶ್ರೋತೃವರ್ಗವು ಚಪ್ಪಾಳೆ ಬಾರಿಸಿ ತನ್ನ ಸಮಾಧಾನವನ್ನು ವ್ಯಕ್ತಪಡಿಸುತ್ತಲಿತ್ತು. ಒಬ್ಬ ಪ್ರಮುಖ ಇಂಗ್ಲಿಷ ಮುಖಂಡನು ಹಿಂದುಸ್ಥಾನದ ವರೆಗೆ ಬಂದು ಹಿಂದೀ ಜನರ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡುವೆನೆಂದು ಮಾತು ಕೊಡುವದೆಂದರೆ ಅದೆಂತಹ ಅಪೂರ್ವ ಮಾತಾಗಿತ್ತು.

ಕಾಂಗ್ರೆಸಿನ ಬೇಡಿಕೆಯನ್ನು ಇಂಗ್ಲಂಡದ ಜನರೆದುರಿಗೆ ಇಡಲು ಒಂದು ಶಿಷ್ಟಮಂಡಲವು ಇಂಗ್ಲಂಡಿಗೆ ಹೋಗಬೇಕೆಂದು ಗೊತ್ತಾಗಿದ್ದಿತು. ಹ್ಯೂಮ, ಫಿರೋಜಶಹಾ ಮೇಥಾ, ಮನಮೋಹನ ಘೋಸ ಉಮೇಶಚಂದ್ರ ಬಾನರ್ಜಿ, ಶರೀಫುದ್ದೀನ, ಆರ್ಡ್ಲೆ ನಾರ್ಟನ್, ಆರ್. ಎನ್. ಮುಧೋಳಕರ ಮತ್ತು ಸುರೆಂದ್ರನಾಥ ಬಾನರ್ಜಿ ಇಷ್ಟು ಜನರು ಶಿಷ್ಟಮಂಡಲದಲ್ಲಿರಬೇಕೆಂದು ಗೊತ್ತಾಯಿತು. ಶಿಷ್ಟಮಂಡಲವು ಇಂಗ್ಲಂಡಿಗೆ ಹೋಗುವದೆಂಬ ಕಲ್ಪನೆಯಿಂದ ಜನರಲ್ಲಿ ಹೊಸ ಉತ್ಸಾಹವು ಉಂಟಾಗಿತ್ತು. ೧೮೯೦ ರ ಮಾರ್ಚ ತಿಂಗಳಲ್ಲಿ ಶಿಷ್ಟಮಂಡಲವು ಹಿಂದುಸ್ಥಾನದಿಂದ ಹೊರಟು ಎಪ್ರಿಲ ತಿಂಗಳಲ್ಲಿ ಇಂಗ್ಲಂಡಿಗೆ ಮುಟ್ಟಿತು. ಇಂಗ್ಲಂಡ, ಸ್ಕಾಟಲಂಡ ಮತ್ತು ವೇಲ್ಸದಲ್ಲಿ ಏರ್ಪಡಿಸಲ್ಪಟ್ಟ ಅನೇಕ ಸಭೆಗಳಲ್ಲಿ ಮಾತನಾಡಿ ಕೊನೆಗೆ

ಶಿಷ್ಟಮಂಡಲದವರು ಗ್ಲ್ಯಾಡಸ್ಟನರನ್ನು ಕಂಡು ಅವರೊಡನೆ ಮಾತುಕತೆಗಳನ್ನಾಡಿದರು. ಆಕ್ಸಫರ್ಡ ಯುನಿಯನದಲ್ಲಿ ಶಿಷ್ಟಮಂಡಲದವರ ಮಾತುಗಳಾಗಿ, ಹಿಂದುಸ್ತಾನದ ಸುಧಾರಣೆಗೆ ಅನುಕೂಲವಾದ ನಿರ್ಣಯವೂ ಆಯಿತು. ೧೮೯೦ರ ಜುಲೈ ತಿಂಗಳಲ್ಲಿ ಶಿಷ್ಟ ಮಂಡಲದ ಪ್ರಮುಖ ಸಭಾಸದರಾದ ಸುರೇಂದ್ರನಾಥ ಬಾನರ್ಜಿಯವರು ಹಿಂದುಸ್ತಾನಕ್ಕೆ ಮರಳಿ ಬಂದರು. ಮತ್ತೆ ಈ ತರದ ಶಿಷ್ಟ ಮಂಡಲಗಳು ಹೋದರೆ ಹಿಂದುಸ್ತಾನದ ಕಾರ್ಯಕ್ಕೆ ಅನುಕೂಲವಾಗುವದೆಂದು ಅವರು ಪ್ರತಿಪಾದಿಸಿದರು.

(೬೦) **ಕಲಕತ್ತೆಯಲ್ಲಿ ಆರನೆಯ ಕೂಟವು** (೧೮೯೦):— ಕಲಕತ್ತೆಯ ಅಧಿವೇಶನಕ್ಕೆ ೬೦೨ ಪ್ರತಿನಿಧಿಗಳೂ ೬೦೦೦ ಪ್ರೇಕ್ಷಕರೂ ಬಂದಿದ್ದರು. ಈ ಅಧಿವೇಶನಕ್ಕೆ ಸಾದರ ಪಡಿಸಿದ ರಿಪೋರ್ಟಿನಲ್ಲಿ ಪ್ರಚಲಿತ ರಾಜ್ಯಪದ್ಧತಿಯ ವಿಷಯಕ್ಕೆ ಬರೆದ ಮಾತುಗಳಿಂದ ಆಗಿನ ಸುಶಿಕ್ಷಿತರ ಮನಸ್ಸಿನಲ್ಲಿ ಎಷ್ಟು ತೀವ್ರ ತಳಮಳವಾಗುತ್ತಿತ್ತೆಂಬುದು ವ್ಯಕ್ತವಾಗುವದು: " ಹಿಂದುಸ್ತಾನದ ಪ್ರಜೆಗಳೆಂದರೆ ಸ್ವತಂತ್ರರಾದ ಬ್ರಿಟಿಶ ಸಾಮ್ರಾಜ್ಯದ ನಾಗರಿಕರು; ಅವರಿಗೆ ಜನ್ಮಸಿದ್ಧ ರಾಜಕೀಯ ಹಕ್ಕುಗಳಲ್ಲಿ ಸ್ವಲ್ಪಾದರೂ ಹಕ್ಕುಗಳು ಕೊಡಲ್ಪಟ್ಟಿಲ್ಲ; ದೇಶದೊಳಗಿನ ದೊಡ್ಡ ಅಧಿಕಾರ ಸ್ಥಳಗಳಲ್ಲಿ ನೂರಕ್ಕೆ ೯೫ ರಷ್ಟು ಯುರೋಪಿಯನರೆ ಇರುವರು. ರಾಷ್ಟ್ರದ ೧/೫ ರಷ್ಟು ಪ್ರಜೆಗಳು ಉಪವಾಸ ಸಾಯುತ್ತಲಿರುವರು; ಸರಕಾರದವರು ಜನರಿಂದ ವಸೂಲು ಮಾಡುತ್ತಲಿರುವ ತೆರಿಗೆಯನ್ನು ಮೂರ್ಖತನದ ಪಾಳಿಗಳಲ್ಲಿ ವ್ಯರ್ಥವಾಗಿ ಹಾಳು ಮಾಡುತ್ತಲಿರುವರು; ಕೇವಲ ಅವಶ್ಯವಾದ ಪದಾರ್ಥಗಳ ಮೇಲೆ ಸುಂಕವನ್ನು ಹೇರಿ ಸರಕಾರವು ತನ್ನ ಉತ್ಪನ್ನವನ್ನು ಬೆಳಿಸಿಕೊಳ್ಳುತ್ತಲಿದೆ. .ದೇಶದಲ್ಲಿಯ ಎಲ್ಲ ಕೈಗಾರಿಕೆಯು ನಾಶ ಮಾಡಲ್ಪಟ್ಟಿದೆ; ಉಳಿದ ಒಂದೇ ಒಂದಾದ ಒಕ್ಕಲತನವೂ ಅಳಿಯತೊಡಗಿದೆ. . .ಸರಕಾರದ ಅಬಕಾರೀ ಖಾತೆಯ ಧೋರಣದಿಂದ ಅಜ್ಞ ಜನರಲ್ಲಿ ಕುಡುಕತನವು ಬೆಳೆಯುತ್ತಲಿದೆ. .ದಿವಾಣಿ ಮತ್ತು ಫೌಜದಾರಿ ಅಧಿಕಾರಗಳು ಒಂದೇ ಅಧಿಕಾರಿಯಲ್ಲಿದ್ದುದರಿಂದ ಪ್ರಜೆಗಳಿಗೆ ಬಹಳ ಅನ್ಯಾಯವಾಗಹತ್ತಿದೆ. . ಹಿಂದುಸ್ತಾನದಲ್ಲಿ ಬಡವರಿಗೆ ನ್ಯಾಯವಿಲ್ಲ; ಅಧಿಕಾರಿಗಳ ವಿರುದ್ಧ ಪ್ರಜೆಗಳಿಗೆ ನ್ಯಾಯವು ದೊರೆಯುವದಿಲ್ಲ; ಬಡವರ ಪ್ರಾಮಾಣಿಕರ ರಕ್ಷಕರಾಗ

ಬೇಕಿದ್ದ ಪೋಲೀಸರು ಪ್ರಜೆಗಳನ್ನು ಪೀಡಿಸುತ್ತಲಿರುವರು....ನಮ್ಮಲ್ಲಿ ಕೆಲವರು ಇವೆಲ್ಲ ಅನ್ಯಾಯಗಳಿಂದ ಬೇಸತ್ತು, 'ಅಯ್ಯೋ! ಮಹಾದೇವಾ! ಎಂದಿಗೆ ನಮ್ಮ ನಾಡಿಗೆ ನ್ಯಾಯವು ದೊರೆಯುವದು? ' ಎಂದು ನಿರಾಶೆಯ ಕೂಗಿಟ್ಟರೆ ಅದರಲ್ಲಿ ಆಶ್ಚರ್ಯವೇನಿದೆ? . . ನಮ್ಮ ಬ್ರಿಟಿಶ ಬಂಧುಗಳು ಎಚ್ಚರಾಗುವದೆಂದು?''

ಕಲಕತ್ತೆಯ ಅಧಿವೇಶನಕ್ಕೆ ಮುಂಬಯಿಯ ನಾಮಾಂಕಿತ ಮುಖಂಡರಾದ ಫೆರೋಜಶಾಹಾ ಮೇಥಾರವರು ಅಧ್ಯಕ್ಷರು. ಚಾರ್ಲ್ಸ್ ಬ್ರಾಡಲಾರು ತಾವು ಕಾಂಗ್ರೆಸ್ಸಿಗೆ ಕೊಟ್ಟ ವಚನದಂತೆ ಪಾರ್ಲಿಮೆಂಟಿನಲ್ಲಿ ಒಂದು ಸೂಚನೆಯನ್ನು ಮಂಡಿಸಿದರು; ಹಿಂದಿ ಕಾಯದೆ ಕೌನ್ಸಿಲ್ಲುಗಳಲ್ಲಿ ಸುಧಾರಣೆಯನ್ನುಂಟುಮಾಡುವದೆ ಆ ಸೂಚನೆಯ ಉದ್ದೇಶವಿತ್ತು. ಲಾರ್ಡ ಕ್ರಾಸರೆಂಬವರೂ ಇದೇ ವಿಷಯವನ್ನು ಕುರಿತು ಒಂದು ಸೂಚನೆಯನ್ನು ಹಾವುಸ ಆಫ ಲಾರ್ಡ್ಸ್‌ದೆದುರಿಗೆ ಮಂಡಿಸಿದ್ದರು; ಆದರೆ ವೇಳೆಯ ಅಭಾವದಿಂದ ಆ ಸೂಚನೆಯ ಪೂರ್ಣ ವಿಚಾರವಾಗದೆ ಉಳಿಯಿತು. ಫೆರೋಜಶಾಹಾರು ತಮ್ಮ ಭಾಷಣದಲ್ಲಿ ಇವೆರಡೂ ಸೂಚನೆಗಳನ್ನುಲ್ಲೇಖಿಸಿ ಬ್ರಾಡಲಾರ ಸೇವೆಯನ್ನು ಅಭಿನಂದಿಸಿ, ಲಾರ್ಡ ಸಾಲಿಸಬರಿಯವರು "ಪೌರ್ವಾತ್ಯರಿಗೆ ಪ್ರಾತಿನಿಧಿಕ ರಾಜ್ಯಪದ್ಧತಿಯು ಸರಿಬೀಳುವದಿಲ್ಲ"ವೆಂದು ಆಡಿದ ಮಾತುಗಳನ್ನು ತೀಕ್ಷ್ಣವಾಗಿ ಖಂಡಿಸಿದರು.

ಕಾಂಗ್ರೆಸದ ಈ ವರ್ಷದ ನಿರ್ಣಯಗಳೂ ಮೊದಲಿನಂತೆಯೆ ಇದ್ದವು. ೧೮೯೨ರ ಕಾಂಗ್ರೆಸ್ಸನ್ನು ಸಾಧ್ಯವಾದರೆ ಇಂಗ್ಲಂಡದಲ್ಲಿ ಜರುಗಿಸಬೇಕೆಂದೂ ಕನಿಷ್ಠ ನೂರು ಪ್ರತಿನಿಧಿಗಳಾದರೂ ಅಲ್ಲಿಗೆ ಹೋಗುವ ವ್ಯವಸ್ಥೆಯಾಗಬೇಕೆಂದೂ ಒಂದು ಗೊತ್ತುವಳಿಯು ಪಾಸಾಯಿತು. ಇಂಗ್ಲಂಡದಲ್ಲಿಯ ಬ್ರಿಟಿಶ ಕಾಂಗ್ರೆಸ ಕಮೀಟಿಯ ವೆಚ್ಚಕ್ಕಾಗಿ ೪೦೦೦೦ ರೂಪಾಯಿ ಮಂಜೂರು ಮಾಡುವ ನಿರ್ಣಯವೂ ಆಯಿತು.

**(೨೧) ನಾಗಪುರದಲ್ಲಿ ಏಳನೆಯ ಕೂಟವು** (೧೮೯೧):–ಕಾಂಗ್ರೆಸಿನ ಏಳನೆಯ ಅಧಿವೇಶನವು ನಾಗಪುರದಲ್ಲಿ ೧೮೯೧ ಇಸವಿಯ ಡಿಸೆಂಬರ ತಿಂಗಳ ೨೮,೨೯, ೩೦ ತಾರೀಕುಗಳಲ್ಲಿ ಜರುಗಿತು. ಅಧಿವೇಶನಕ್ಕೆ ೮೧೨ ಪ್ರತಿನಿಧಿಗಳು ಬಂದಿದ್ದರು. ಕಳೆದ ವರುಷ ಕಲಕತ್ತೆಯಲ್ಲಿ ಕೂಡಿದ ಕಾಂಗ್ರೆಸಿಗೆ

ಯಾವ ಸರಕಾರೀ ನೌಕರರೂ ಹೋಗಬಾರದೆಂದು ಬಂಗಾಲ ಸರಕಾರದವರು ಅಪ್ಪಣೆಯನ್ನು ಹೊರಡಿಸಿದ್ದರು; ಆದರೆ ಈ ಸಲ ಮಧ್ಯಪ್ರಾಂತದ ಚೀಫ ಕಮಿಶನರನು ಮಾತ್ರ ಸರಕಾರೀ ನೌಕರರು ಇಷ್ಟವಿದ್ದವರು ಕಾಂಗ್ರೆಸಿಗೆ ಹೋಗಬಹುದೆಂದು ಹೇಳಿದರು. ಅಧ್ಯಕ್ಷಸ್ಥಾನಕ್ಕೆ ಮದ್ರಾಸಿನ ಪಿ. ಆನಂದ ಚಾರ್ಲುರವರು ಆರಿಸಲ್ಪಟ್ಟರು. ಆನಂದ ಚಾರ್ಲುರವರು ತಮ್ಮ ಭಾಷಣದಲ್ಲಿ ಅನೇಕ ಮಹತ್ವದ ಮಾತುಗಳನ್ನು ಹೇಳಿದರು; ಹಿಂದುಸ್ಥಾನಕ್ಕೆ ರಾಷ್ಟ್ರವೆಂಬ ಅಭಿಧಾನವು ಸಮರ್ಪಕವಾಗಿ ಸಲ್ಲುತ್ತದೆ; ವ್ಹಾಯಿಸರಾಯರಾದ ಲ್ಯಾನ್ಸಡೌನರು ಕೂಡ ಕಾಂಗ್ರೆಸ ಸಂಸ್ಥೆಯಿಂದ ಯೋಗ್ಯವಾದ ಉಪಾಯಗಳಿಂದ ನ್ಯಾಯ್ಯವಾದ ಗುರಿಯೆಡೆಗೆ ಹೊರಟಿರುವ ಸುಸಂಘಟಿತ ರಾಜಕೀಯ ಸಂಘವೆಂದು ಒಪ್ಪಿಕೊಂಡರು; ಬ್ರಿಟಿಶ ಜನತೆಯಲ್ಲಿ ಜಾಗೃತಿಯನ್ನು ಮಾಡುವದು ಅತ್ಯವಶ್ಯವಿದೆ; ಜಾತಿಯ ಮುಖಂಡರು ಬಹಿಷ್ಕಾರ ಹಾಕಿದರೂ ಅದನ್ನು ಲೆಕ್ಕಿಸದೆ ಸಮುದ್ರವನ್ನು ದಾಟಿ ಲಂಡನದಲ್ಲಿ ನಾವು ಕಾಂಗ್ರೆಸು ಕೂಡಿಸಬೇಕು; ಹಿಂದುಸ್ಥಾನದ ಸಾಮಾನ್ಯ ಜನತೆಯಲ್ಲಿ ಜಾಗೃತಿಯನ್ನು ಹುಟ್ಟಿಸಬೇಕು; ಇವೆ ಮುಂತಾದ ಮಾತುಗಳನ್ನು ಹೇಳಿ "ಸ್ವಾತಂತ್ರ್ಯ ಸಂಗರವು ಒಮ್ಮೆ ಪ್ರಾರಂಭವಾಯಿತೆಂದರೆ ಎಷ್ಟೆ ವಿಘ್ನಗಳು ಬಂದರೂ ಅದು ಯಶಸ್ವಿಯಾಗಿಯೆ ತೀರುವದು" ಎಂಬ ಬಾಯರನ ಕವಿಯ ಸೂಕ್ತಿಯ ನೆನಪು ಮಾಡಿಕೊಟ್ಟರು.

ಈ ಅಧಿವೇಶನದಲ್ಲಿ ವಾಡಿಕೆಯ ನಿರ್ಣಯಗಳಲ್ಲದೆ ಜಂಗಲದ ಕಾಯದೆಯನ್ನು ನಿಷೇಧಿಸುವ ನಿರ್ಣಯವೂ ಪಾಸಾಯಿತು. ಹಿಂದಿ ಜನತೆಗೆ ಹೆಚ್ಚಿನ ಅಧಿಕಾರಗಳನ್ನು ಕೊಡಬೇಕೆಂದು ಬೇಡಿಕೊಳ್ಳುವ ನಿರ್ಣಯವೂ ಪಾಸಾಯಿತು; ೫ ಕೋಟಿ ಹಿಂದಿ ಜನರು ಅರಹೊಟ್ಟೆ ಉಪವಾಸದಿಂದ ಕಾಲಕಳೆಯುತ್ತಾರೆ; ಇದಕ್ಕೆ ಕಾರಣಗಳೆಂದರೆ ಹಿಂದುಸ್ಥಾನದ ಆಡಳಿತೆಯಲ್ಲಿ ಇಲ್ಲಿಯ ಜನತೆಗೆ ಏನೂ ಅಧಿಕಾರಗಳಿಲ್ಲ, ಆಡಳಿತೆಯ ಖರ್ಚು ಮಿತಿಮೀರಿ ಬೆಳೆದಿದೆ, ಸರಕಾರದ ಭೂಮಿಕಂದಾಯದ ಧೋರಣವು ಅವಿವೇಕತನದ್ದಿದೆ; ಆದುದರಿಂದ ಆಡಳಿತೆಯ ಖರ್ಚನ್ನು ಕಡಿಮೆಮಾಡಬೇಕು, ಹಿಂದೀ ಜನರನ್ನು ನೌಕರಿಯಲ್ಲಿ ಹೆಚ್ಚು ಪ್ರಮಾಣದಿಂದ ಸೇರಿಸಿಕೊಳ್ಳಬೇಕು; ಶೇತಕಿ ಬ್ಯಾಂಕುಗಳನ್ನು ಸ್ಥಾಪಿಸಬೇಕು; ಈಗಿದ್ದ ಆಡಳಿತೆಯನ್ನು

ಈಗಿನಂತೆಯೆ ಮುಂದೆಯೂ ನಡೆಯಗೊಟ್ಟು ವಿನಾಕಾರಣ ಈಗ ನಡೆದಿರುವ ಜೀವಿತನಾಶವನ್ನು ಮುಂದೆ ಆಗಗೊಡಬಾರದೆಂದು ಈ ಕಾಂಗ್ರೆಸು ಗ್ರೇಟ ಬ್ರಿಟನ ಮತ್ತು ಆಯರ್ಲಂಡದಲ್ಲಿಯ ಜನತೆಯನ್ನು ಅಂಗಲಾಚಿ ಬೇಡಿಕೊಳ್ಳುತ್ತದೆ.'' ಹೀಗೆ ಭಿಕ್ಷೆ ಬೇಡಿ ಹಕ್ಕುಗಳನ್ನು ದೊರಕಿಸಿದ ಉದಾಹರಣೆಯು ಜಗತ್ತಿನ ಇತಿಹಾಸದಲ್ಲಿ ದೊರೆಯುವದೆ?

(೨೨) **೧೮೯೨ರಲ್ಲಿಯ ಇಂಡಿಯಾ ಕೌನ್ಸಿಲ್ಲ ಆಕ್ಟ್:**—ಕಾಂಗ್ರೆಸ್ಸಿನ ಸ್ಥಾಪನೆಯಿಂದ ಪ್ರಾತಿನಿಧಿಕ ಸಂಸ್ಥೆಗಳಿಗಾಗಿ ಪ್ರತಿಯೊಂದು ಅಧಿವೇಶನದಲ್ಲಿಯೂ ಠರಾವುಗಳು ಪಾಸಾಗುತ್ತಿದ್ದವು. ಏಳು ವರ್ಷಗಳ ಚಳವಳಿಯ ನಂತರ ಪಾರ್ಲಮೆಂಟಿನಲ್ಲಿ ಇಂಡಿಯಾ ಕೌನ್ಸಿಲ ಆಕ್ಟ ಎಂಬ ಕಾಯದೆಯು ಪಾಸಾಯಿತು. ಈ ಕಟ್ಟಳೆಯಂತೆ ಮೊದಲಿನ ಕಾಯದೆ ಮಂಡಳಗಳು ದೊಡ್ಡವಾದವು. ಮುನ್ಸಿಪಾಲ್ಟಿ ಲೋಕಲಬೋರ್ಡಿನವರು ಸಿಫಾರಸು ಮಾಡಿದ ಮೆಂಬರರನ್ನು ಕೌನ್ಸಿಲ್ಲುಗಳಲ್ಲಿ ಸೇರಿಸಬೇಕೆಂದು ವಿಧಿಸಲ್ಪಟ್ಟಿತು. ಗವ್ಹರ್ನರ ಜನರಲನ ಕಾಯದೆಮಂಡಳದ ಹೆಚ್ಚಿನ ಸಭಾಸದರ ಸಂಖ್ಯೆ ೧೦ರಿಂದ ೧೬, ಮುಂಬೈ ಮತ್ತು ಮದ್ರಾಸ ಪ್ರಾಂತದ ಕಾಯದೆ ಮಂಡಲಗಳಲ್ಲಿ ಹೆಚ್ಚಿನ ಸಭಾಸದರ ಸಂಖ್ಯೆ ೨೦ಕ್ಕೆ ಏರದಂತೆ, ಬಂಗಾಲ ಪ್ರಾಂತದ ಹೆಚ್ಚಿನ ಸಭಾಸದರ ಸಂಖ್ಯೆ ೨೦ಕ್ಕೆ ಏರದಂತೆ, ಮತ್ತು ಸಂಯುಕ್ತ ಪ್ರಾಂತದ ಹೆಚ್ಚಿನ ಸಭಾಸದರ ಸಂಖ್ಯೆ ೧೫ರ ವರೆಗೆ, ಹೀಗೆ ಎಲ್ಲ ಪ್ರಾಂತಗಳಲ್ಲಿಯೂ ಕಾಯದೆಮಂಡಳಗಳ ಸಭಾಸದರ ಸಂಖ್ಯೆಯು ಬೆಳಿಸಲ್ಪಟ್ಟಿತು. ಅಪ್ರತ್ಯಕ್ಷ ಚುನಾವಣೆಯ ತತ್ವವು ಅಂಗೀಕರಿಸಲ್ಪಟ್ಟಿತು. ಅಂದರೆ ಕೆಲವು ಸಭಾಸದರನ್ನು ಮುನಿಸಿಪಾಲಿಟಿ ಲೋಕಲಬೋರ್ಡಿನವರು ಮೊದಲು ಆರಿಸಿ ಅನಂತರ ಆ ಆರಿಸಿ ಬಂದವರನ್ನು ಆಯಾ ಪ್ರಾಂತದ ಗವ್ಹರ್ನರನು ಸಭಾಸದರೆಂದು ನೇಮಿಸುತ್ತಿದ್ದನು. ಕಾಯದೆ ಮಂಡಲದೆದುರಿಗೆ ಆಯಾ ವರ್ಷದ ಅಂದಾಜು ಪತ್ರಿಕೆಯು ಚರ್ಚೆಗಾಗಿ ಇಡಲ್ಪಡತಕ್ಕದೆಂದೂ ಆಡಳಿತೆಗೆ ಸಂಬಂಧಿಸಿದ ಯಾವದೇ ಮಹತ್ವದ ವಿಷಯವನ್ನು ಕುರಿತು ಸಭಾಸದರು ಪ್ರಶ್ನೆಗಳನ್ನು ಕೇಳಿ ಉತ್ತರಗಳನ್ನು ಪಡೆಯಬಹುದೆಂದೂ ಗೊತ್ತಾಯಿತು. ಆದರೆ ಕಾಯದೆ ಕೌನ್ಸಿಲಿನ ಸಭಾಸದರಿಗೆ ಉಪಸೂಚನೆಗಳನ್ನಾಗಲೀ, ಸ್ವತಂತ್ರ ಠರಾವುಗಳನ್ನಾಗಲೀ,

ಕೌನ್ಸಿಲಿನವರಿಗೆ ಮಂಡಿಸುವ ಅಧಿಕಾರವು ಇರಲಿಲ್ಲ. ಗವರ್ನರ ಜನರಲರ ಸಮ್ಮತಿಯಿಂದ ಪ್ರಾಂತಿಕ ಕಾಯದೆಮಂಡಲಗಳು ವರಿಷ್ಟ ಕಾಯದೆಮಂಡಲದಿಂದ ಮಂಜೂರಾದ ಯಾವದೇ ಕಟ್ಟಳೆಯನ್ನು ತಮ್ಮ ಪ್ರಾಂತದ ಮಟ್ಟಿಗೆ ರದ್ದು ಮಾಡಬಹುದೆಂದೂ ವಿಧಿಸಲ್ಪಟ್ಟಿತು.

(೨೩) **ಅಲಹಾಬಾದಿನಲ್ಲಿ ಎಂಟನೆಯ ಕೂಟವು** (೧೮೯೨):—ಕಾಂಗ್ರೆಸಿನ ಎಂಟನೆಯ ಅಧಿವೇಶನಕ್ಕೆ ೬೨೫ ಪ್ರತಿನಿಧಿಗಳು. ಉಮೇಶಚಂದ್ರ ಬಾನರ್ಜಿಯವರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ದರಭಂಗೆಯ ಮಹಾರಾಜರು ತಮ್ಮ ಸ್ವಂತದ ಜಾಗೆಯನ್ನು ಕಾಂಗ್ರೆಸಿನ ಅಧಿವೇಶನಕ್ಕಾಗಿ ಕೊಟ್ಟಿದ್ದರು. ಉಮೇಶಚಂದ್ರರು ತಮ್ಮ ಭಾಷಣದಲ್ಲಿ ಪಾರ್ಲಮೆಂಟಿನಲ್ಲಿ ಅದೇ ಪಾಸಾದ ಇಂಡಿಯಾ ಕೌನ್ಸಿಲು ಆಕ್ಟನ್ನೂ ದಾದಾಭಾಯಿ ನೌರೋಜಿಯವರು ಪಾರ್ಲಮೆಂಟಿಗೆ ಆರಿಸಿ ಬಂದ ಸಂಗತಿಯನ್ನೂ ಬಲು ಸಂತೋಷದಿಂದ ಉಲ್ಲೇಖಿಸಿದರು. ತಮ್ಮ ಭಾಷಣದ ಕೊನೆಯಲ್ಲಿ ಕಾಂಗ್ರೆಸಿನ ಪ್ರತಿನಿಧಿಗಳು ಮಾಡತಕ್ಕ ಕರ್ತವ್ಯವನ್ನು ಕುರಿತು ಕೆಲವು ಉದ್ಬೋಧಕವಾದ ಮಾತುಗಳನ್ನು ಹೇಳಿದರು; "ನೀವು ದೂರಿದೂರಿನಿಂದ ಕಾಂಗ್ರೆಸಿನ ವಾರ್ಷಿಕ ಅಧಿವೇಶನಗಳಿಗೆ ಬಂದು ಹೋದರೆಂದರೆ ನಿಮ್ಮ ಕೆಲಸವು ಮುಗಿಯಿತೆಂದು ನೀವು ತಿಳಿಯಕೂಡದು. ನೀವು ಮರಳಿ ನಿಮ್ಮ ನಿಮ್ಮ ಪ್ರಾಂತಗಳಿಗೂ ಹೋದಮೇಲೂ ಇದೇ ಉತ್ಸಾಹದಿಂದ ಕಾರ್ಯವನ್ನು ಸಾಗಿಸಲಿಕ್ಕೆ ಬೇಕು. ಕಾಂಗ್ರೆಸಿನ ಕಾರ್ಯದ ಎಲ್ಲ ಭಾರವನ್ನು ಕೇವಲ ಕಾಂಗ್ರೆಸಿನ ಸೆಕ್ರೆಟರಿಯ ಮೇಲೆ ಹಾಕುವದೆ ನಮ್ಮ ಪರಿಪಾಠವಾಗಿದೆ. ನಾವು ನಮ್ಮ ನಮ್ಮ ಜಿಲ್ಲೆಗಳಿಗೆ ಹೋಗಿ ಸ್ವಚ್ಛಂದವಾಗಿ ಮಲಗಿಬಿಡುತ್ತೇವೆ; ಸೆಕ್ರೆಟರಿಯೆ ದುಡ್ಡು ಕೂಡಿಸಬೇಕು, ಎಲ್ಲ ಕೆಲಸವನ್ನು ಮಾಡಬೇಕು; ವಾರ್ಷಿಕ ಅಧಿವೇಶನವು ಬಂದ ಕೂಡಲೆ ನಾವು ಒಳ್ಳೆ ಬಟ್ಟೆಗಳನ್ನು ತೊಟ್ಟುಕೊಂಡು ಸಾಮಾನು ಕಟ್ಟಿ ಕಾಂಗ್ರೆಸಿಗೆ ಬಂದು ಬಿಡುತ್ತೇವೆ. ಆದರೆ ಇದೇನು ಕೆಲಸ ಮಾಡಿದಂತಾಗಲಿಲ್ಲ: ದುಡ್ಡಿಲ್ಲದೆ ಯಾವ ಕಾರ್ಯದಲ್ಲಿಯೂ ಯಶಸ್ಸು ಬರುವದು ಸಾಧ್ಯವಿಲ್ಲ. ನಾವು ಪ್ರತಿಯೊಬ್ಬರೂ ಮರಳಿ ಹೋದ ಮೇಲೆ ನಮ್ಮ ಸ್ಥಾನಿಕ ಕಾರ್ಯದರ್ಶಿಗೆ ಸಹಾಯವನ್ನೊದಗಿಸಿ ಕೊಡಬೇಕು; ನಾವು ನಮ್ಮಿಂದಾದಷ್ಟು ಯತ್ನಮಾಡಿ ನಮ್ಮ ಕಾರ್ಯವು ಕೈಗೂಡಲು ಅವಶ್ಯ

ವಿರುವ ದ್ರವ್ಯಸಹಾಯವನ್ನು ಮಾಡಿ ಕೊಡಬೇಕು. (ಕೇಳಿರಿ!) ". ಇಲ್ಲಿಯು ಕಾರ್ಯದಂತೆಯೆ ಇಂಗ್ಲಂಡದಲ್ಲಿಯು ಕಾರ್ಯವು ಸುಸೂತ್ರವಾಗಿ ಸಾಗುವಂತೆ ವ್ಯವಸ್ಥೆ ಮಾಡಬೇಕೆಂದು ಉಮೇಶಚಂದ್ರರು ತಮ್ಮ ಭಾಷಣದ ಕೊನೆಯಲ್ಲಿ ಬಿನ್ನವಿಸಿಕೊಂಡರು. ಈ ಅಧಿವೇಶನದಲ್ಲಿಯೂ ವಾಡಿಕೆಯಂತೆಯೆ ನಿರ್ಣಯಗಳಾದವು.

(೨೪) **ಲಾಹೋರಿನಲ್ಲಿ ೯ನೆಯ ಕೂಟವು** (೧೮೯೩):– ಕಾಂಗ್ರೆಸಿನ ಒಂಬತ್ತನೆಯ ಅಧಿವೇಶನವು ೧೮೯೩ರ ಡಿಸೆಂಬರ ತಿಂಗಳ ೨೭, ೨೮, ೨೯, ೩೦ ತಾರೀಕುಗಳಲ್ಲಿ ಕೂಡಿತು. ಅಧಿವೇಶನಕ್ಕೆ ೮೬೭ ಪ್ರತಿನಿಧಿಗಳು ಕೂಡಿದ್ದರು. ಅಧ್ಯಕ್ಷಸ್ಥಾನಕ್ಕೆ ದಾದಾಭಾಯಿ ನೌರೋಜಿಯವರು ಆರಿಸಲ್ಪಟ್ಟರು. ಅವರನ್ನು ಪಾರ್ಲಮೆಂಟಿಗೆ ಆರಿಸಿಕೊಟ್ಟ ಫಿನ್ಸಬರಿಯ ಉದಾರಮತವಾದಿ ಸಂಘದವರು ಕಾಂಗ್ರೆಸಿಗೆ ಕಳಿಸಿದ ಸಹಾನುಭೂತಿಪರ ಸಂದೇಶವನ್ನು ಅವರು ಓದಿ ತೋರಿಸಿದರು. ಆಯ. ಸಿ. ಎಸ. ಪರೀಕ್ಷೆಯು ಹಿಂದುಸ್ಥಾನದಲ್ಲಿಯೂ ಇಂಗ್ಲಂಡದಲ್ಲಿಯೂ ಕೂಡಿಯೆ ಆಗಬೇಕೆಂದು ಅದೇ ವರ್ಷ ಪಾರ್ಲಮೆಂಟಿನಲ್ಲಿ ಪಾಸಾದ ಠರಾವನ್ನು ಉಲ್ಲೇಖಿಸಿದರು. ಪಾರ್ಲಮೆಂಟಿನಲ್ಲಿ ತಮಗೆ ಒಳ್ಳೆಯ ತರದ ಸ್ವಾಗತವಾಯಿತೆಂಬುದನ್ನು ಹೇಳಿದರು. ಹಿಂದುಸ್ಥಾನದ ಪ್ರಶ್ನೆಗಳನ್ನು ಆಸ್ಥೆಯಿಂದ ವಿಚಾರಿಸುವದಕ್ಕಾಗಿ ಪಾರ್ಲಮೆಂಟಿನ ಸಭಾಸದರ ಕಮಿಟಿಯೊಂದು ಏರ್ಪಡಿಸಲ್ಪಟ್ಟ ಸಂಗತಿಯನ್ನೂ ತಿಳಿಸಿ ಹೇಳಿದರು. ಹಳೆಯ ಸಂಗತಿಗಳನ್ನು ಇಷ್ಟೊಂದು ಸವಿಸ್ತಾರವಾಗಿ ಹೇಳುವ ಕಾರಣವನ್ನು ಅವರು ವಿಶದಪಡಿಸಿದರು. " ನಾವು ಹಿಂದಿನ ಮಾತುಗಳನ್ನು ಇಷ್ಟೊಂದು ಬೆಳೆಯಿಸಿ ಹೇಳುವ ಕಾರಣವು ಇಷ್ಟೆ. ಆದರಿಂದ ನಮ್ಮ ಮುಂದಿನ ದಿನಗಳೂ ಸುಖದಾಯಕವಾಗುವವೆಂದೂ, ನಾವು ಬ್ರಿಟಿಶ ಜನಾಂಗದಲ್ಲಿ ಇಟ್ಟಿರುವ ವಿಶ್ವಾಸಪ್ರೀತಿಗಳು ನಿರರ್ಥಕವಾಗಲಾರವೆಂದೂ, ನಾವು ಬ್ರಿಟಿಶರ ಸ್ವಭಾವದಿಂದ ಸ್ವಾರ್ಥತ್ಯಾಗ ಮತ್ತು ಸತತೋದ್ಯೋಗದ ಪಾಠಗಳನ್ನು ಕಲಿತರೆ ನಮಗೆ ನಮ್ಮ ನ್ಯಾಯವಾದ ಹಕ್ಕುಗಳು ದೊರೆತೇ ತೀರುವವೆಂದೂ ಕಂಡುಬರುವದು. (ಚಪ್ಪಾಳೆ) ". ೧೮೯೨ರ ಕಟ್ಟಳೆಯಿಂದ ಕಾಯದೆ ಕೌನ್ಸಿಲ್ಲುಗಳಿಗೆ ಕೊಡಲ್ಪಟ್ಟ ಅಧಿಕಾರಗಳು ಹೇಗೆ ಅಸಮಾಧಾನಕಾರಕವೆಂಬುದನ್ನು ವಿಶದವಾಗಿ ಹೇಳಿದರು.

ಹಿಂದುಸ್ಥಾನದ ದಾರಿದ್ರ್ಯವನ್ನು ತಿಳಿಸುಡಿಯಲ್ಲಿ ತಿಳಿಸಿಹೇಳಿದರು. "ನನ್ನ ಕೊನೆಯ ಪ್ರಾರ್ಥನೆಯಿಷ್ಟೇ: ಒಕ್ಕಟ್ಟಿನಿಂದಲೂ ದೃಢನಿಶ್ಚಯದಿಂದಲೂ ಮುಂದೆ ಸಾಗಿರಿ; ಐಕ್ಯದಿಂದಲೂ ಒಮ್ಮನಸಿನಿಂದಲೂ ಕಾರ್ಯಕ್ಕೆ ಪ್ರವೃತ್ತರಾಗಿರಿ; ರಾಜಭಕ್ತಿ ಮತ್ತು ದೇಶಪ್ರೇಮ ಇವೆರಡೂ ನಿಮ್ಮಲ್ಲಿ ಜಾಗೃತವಾಗಿರಲಿ; ಜಗತ್ತಿನಲ್ಲಿ ದೊಡ್ಡ ರಾಷ್ಟ್ರವಾದ ಬ್ರಿಟಿಶ ಜನಾಂಗವು ಹಿಂದುಸ್ಥಾನದಂತಹ ಪ್ರಾಚೀನ ಜನಾಂಗವನ್ನು ಬಂಧುಪ್ರೇಮದಿಂದ ಬರಮಾಡಿಕೊಳ್ಳುವ ಅದ್ಭುತದೃಶ್ಯವು ಸ್ವಲ್ಪ ಕಾಲದಲ್ಲಿಯೆ ಜಗತ್ತಿನ ಕಣ್ಣಿಗೆ ಬೀಳುವದು!"

ವಾಡಿಕೆಯಂತೆ ಹಿಂದುಸ್ಥಾನದ ಹಿತಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಕುರಿತು ನಿರ್ಣಯಗಳೂ ಭಾಷಣಗಳೂ ಆದವು. ಹಿಂದುಸ್ಥಾನದ ದಾರಿದ್ರ್ಯದ ವಿಷಯಕ್ಕೆ ಮಾತನಾಡುತ್ತ ಪಂಡಿತ ಮದನಮೋಹನ ಮಾಲವೀಯರು ಈ ಉದ್ಗಾರಗಳನ್ನು ಹೊರಗೆಡವಿದರು:– "ಹಿಂದುಸ್ಥಾನದ ನೇಕಾರರು ಈಗ ಎಲ್ಲಿರುವರು? ವಿವಿಧ ಉದ್ಯೋಗಗಳಿಂದ ಉಪಜೀವಿಸುತ್ತಲಿದ್ದ ಜನರೆಲ್ಲಿ? ಹಿಂದುಸ್ಥಾನದಿಂದ ಇಂಗ್ಲಂಡಿಗೆ ಕಳಿಸಲ್ಪಡುತ್ತಲಿದ್ದ ಸರಕುಗಳೆಲ್ಲಿ? ಅದೆಲ್ಲ ಹಳೆಯ ಮಾತಾಗಿ ಹೋಯಿತು. ಇಲ್ಲಿ ಕೂತ ಪ್ರತಿಯೊಬ್ಬರು ಬ್ರಿಟಿಶ ಬಟ್ಟೆಗಳನ್ನು ತೊಟ್ಟಿರುವಿರಿ; ನೀವೆಲ್ಲಿ ಹೋದರೂ ಬ್ರಿಟಿಶ ವಸ್ತುಗಳೆ ಕಣ್ಣಿಗೆ ಬೀಳುವವು. ಒಕ್ಕಲತನ ಅಲ್ಪಸ್ವಲ್ಪ ವ್ಯಾಪಾರ ಇವೆರಡರಿಂದಲೆ ಜನರು ತಮ್ಮ ಚರಿತಾರ್ಥವನ್ನು ಸಾಗಿಸಬೇಕು. ನೌಕರಿಯ ವಿಷಯದಲ್ಲಾಗಲಿ ವ್ಯಾಪಾರದ ವಿಷಯದಲ್ಲಾಗಲಿ ೫೦ ವರುಷಗಳ ಹಿಂದೆ ಪಡೆಯುತ್ತಿದ್ದ ಲಾಭಗಳು ಹಿಂದೀಯರ ಪಾಲಿಗೆ ಇವೊತ್ತಿಗಿಲ್ಲ! ವಸ್ತುಸ್ಥಿತಿಯು ಹೀಗಿರುವಾಗ ದೇಶವು ಸುಖದಲ್ಲಿ ಹೇಗಿರಬೇಕು?" ಶಿಕ್ಷಣದ ವಿಷಯಕ್ಕೆ ಮಾತನಾಡುವಾಗ ಲಾಲಾ ಲಜಪತರಾಯರು ನಿರಾಶೆಯ ಮಾತುಗಳನ್ನಾಡಿದರು: "ಶಿಕ್ಷಣಖಾತೆಯು ಸ್ಥಾಪಿಸಲ್ಪಟ್ಟು ಈಗ ೩೦–೩೫ ವರುಷಗಳಾಗಿ ಹೋದವು; ಆಗಿನಿಂದ ಆದ ಪ್ರಗತಿಯೇನು? ಪಂಜಾಬದಲ್ಲಿ ಮೊದಲು ಎರಡೆ ಸರಕಾರೀ ಕಾಲೇಜಗಳಿದ್ದವು; ಈಗ ಅವುಗಳಲ್ಲಿ ದಿಲ್ಲಿಯ ಸರಕಾರೀ ಕಾಲೇಜು ನಿಲ್ಲಿಸಲ್ಪಟ್ಟಿದೆ. ಸರಕಾರೀ ಕಾಲೇಜುಗಳಲ್ಲಿಯ ಫೀ ಮೊದಲು ತಿಂಗಳಿಗೆ ೨ ರೂಪಾಯಿಯಿತ್ತು, ಅದೀಗ ೧೨ ರೂಪಾಯಿಯಾಗಿದೆ; ಶಾಲೆ

ಗಳಲ್ಲಿಯು ಫೀ ರಕಮೂ ಏರಿಸಲ್ಪಟ್ಟಿದೆ. 'ಇಜಿಪ್ತ, ಅಬಿಸಿನಿಯಾ, ಆಫಗಾನಿ ಸ್ಥಾನಗಳಲ್ಲಿ ಪಂಜಾಬಿಗಳೂ ಶೀಖರೂ ರಜಪೂತರೂ ಶೌರ್ಯವನ್ನು ತೋರಿ ಸಿದರು; ಅದಕ್ಕೆ ಪ್ರತಿಯಾಗಿ ಅವರ ಮಕ್ಕಳ ಶಿಕ್ಷಣಕ್ಕೆ ದೊಡ್ಡ ಕುತ್ತು ಬಂದಂತಾಗಿದೆ. ''

(೨೫) **ಮದ್ರಾಸಿನಲ್ಲಿ ಹತ್ತನೆಯ ಕೂಟವು** (೧೮೯೪):–ಮದ್ರಾಸಿನಲ್ಲಿ ಜರುಗಿದ ಹತ್ತನೆಯ ಅಧಿವೇಶನಕ್ಕೆ ಬ್ರಿಟಿಶ ಪಾರ್ಲಮೆಂಟಿನ ಐಯರಿಶ ಸಭಾಸದರಾದ ಆಲಫ್ರೆಡ ವೆಬ್ಬರು ಅಧ್ಯಕ್ಷರಾಗಿದ್ದರು. ೧೧೬೩ ಪ್ರತಿನಿಧಿಗಳು ಬಂದಿದ್ದರು. ''ಎಲ್ಲಿಯಾದರೂ ಅನ್ಯಾಯದ ಪೂರ್ಣ ತಿರಸ್ಕಾರವು ನನಗಿದೆ; ನನ್ನ ಮಾತೃಭೂಮಿಯಲ್ಲಿಯೂ ನನಗೆ ಪಾರತಂತ್ರ್ಯದ ಕಟು ಅನುಭವವು ಬಂದಿದೆ'' ಎಂದು ಹೇಳಿ, ಸಾಮ್ರಾಜ್ಯದಿಂದಾಗುವ ಲಾಭಗಳನ್ನು ವಿವರಿಸಿ, ರಾಜಕಾರಣವೆಂದರೆ ಅತ್ಯಂತ ಉದಾತ್ತವಾದ ಕಾರ್ಯಕ್ಷೇತ್ರವೆಂದು ಪ್ರತಿಪಾದಿಸಿದರು. ''ನಾವು ಎಲ್ಲರ ಹಿತವನ್ನು ಚಿಂತಿಸುತ್ತೇವೆ. ಎಷ್ಟೆ ಕೀಳು ವರ್ಗವಾದರೂ ನಮ್ಮ ಸಹಾಯ ಸಹಾನುಭೂತಿಗಳಿಗೆ ಎರವಾಗಲಾರದು.'' ಆಯುಧನಿರ್ಬಂಧನೆಯ ಅನ್ಯಾಯವು ದೂರಾಗಬೇಕೆಂದು ಒತ್ತಿ ಹೇಳಿ, ಹಿಂದುಸ್ಥಾನದ ಬಡತನವನ್ನು ಬಣ್ಣಿಸಿದರು. ''ನಿಮ್ಮಿಂದ ಕೂಡಿಸಲ್ಪಡುತ್ತಲಿರುವ ತೆರಿಗೆಯೊಳಗಿಂದ ಪರದೇಶಗಳಲ್ಲಿ ವೆಚ್ಚವಾಗುವ ಹಣವು ೧೮೮೩ರಲ್ಲಿ ೧,೭೩,೬೯೦೦೦ ರೂಪಾಯಿಯಷ್ಟಿತ್ತು; ಅದೀಗ ೧೮೯೩ರಲ್ಲಿ ೩,೫೯,೧೧,೦೦೦ ರೂಪಾಯಿಯಾಗಿದೆ, ಸದ್ಯಕ್ಕೆ ಆಡಳಿತೆಯ ಎಲ್ಲ ವೆಚ್ಚದ ೧/೪ ರಷ್ಟು ಹಣವು ಪರದೇಶದಲ್ಲಿಯೆ ವೆಚ್ಚಮಾಡಲ್ಪಡುತ್ತದೆ. ಇಂತಹ ವಿಪರೀತ ದ್ರವ್ಯಶೋಷವನ್ನು ಕೊನೆಯವರೆಗೂ ಯಾವ ದೇಶವೂ ಸಹಿಸಲಾರದು.'' ಕಾಯದೆಕೌನ್ಸಿಲ್ಲುಗಳಲ್ಲಿಯೂ ಉಳಿದ ವಿಷಯದಲ್ಲಿಯೂ ಆಗಬೇಕಿದ್ದ ಸುಧಾರಣೆಗಳನ್ನು ಉಲ್ಲೇಖಿಸಿ, ''ಈಗಿನ ಪರಿಸ್ಥಿತಿಯಲ್ಲಿ ನಾವು ನಮ್ಮ ಜೀವನದಲ್ಲಿ ನಿರಾಶರಾಗುವದು ಬೇಡ, ನಮ್ಮ ಕಾರ್ಯಶಕ್ತಿಗೆ ಕುಂದು ತಂದುಕೊಳ್ಳುವದು ಬೇಡವೆ''ಂದು ಹೇಳಿದರು. ಆಯ. ಸಿ. ಎಸ. ಪರೀಕ್ಷೆ, ಜನತೆಯ ಶಿಕ್ಷಣ, ಮದ್ಯಪಾನ ಪ್ರತಿಬಂಧ, ಅಫೂವ್ಯಸನ ಪ್ರತಿಬಂಧ, ಮುಂತಾದ ವಿಷಯಗಳನ್ನೂ ಕಾಂಗ್ರೆಸಿನ ಇದುವರೆಗಿನ ಕಾರ್ಯವನ್ನೂ ವಿವೇಚಿಸಿದರು. ''ಕಾಂಗ್ರೆಸಿನ ಈ ಅಧಿವೇಶನಗಳಿಂದ

ನೀವು ನಿಜವಾದ ಉದಾತ್ತತೆಯನ್ನೂ, ಉಜ್ವಲವಾದ ಭವಿಷ್ಯತ್ತಿನಲ್ಲಿ ವಿಶ್ವಾಸವನ್ನೂ ತೆಗೆದುಕೊಂಡು ಹೋಗಬೇಕು. ''

ಈ ಅಧಿವೇಶನದಲ್ಲಿಯೂ ಹಿಂದುಸ್ತಾನದ ಬಡತನ, ಇಂಡಿಯಾ ಕೌನ್ಸಿಲ್ಲ, ಸರಕಾರೀ ನೌಕರಿಗಳು, ಲೆಜಿಸ್ಲೇಟಿವ್ಹ ಕೌನ್ಸಿಲುಗಳು, ಶಿಕ್ಷಣ, ಜಂಗಲ ಕಾಯಿದೆಯ ಅಮಲ ಬಜಾವಣಿ ಮುಂತಾದ ವಿಷಯಗಳನ್ನು ಕುರಿತು ನಿರ್ಣಯಗಳಾದವು; ದೇಶೀ ಗಿರಣಿಗಳಲ್ಲಿ ತಯಾರಾದ ಮಾಲಿನ ಮೇಲೆ ಹೇರಿದ ಜಕಾತಿಯೂ ನಿಷೇಧಿಸಲಾಯಿತು. ಹಿಂದುಸ್ತಾನದ ಬಡತನದ ನಿರ್ಣಯವನ್ನು ಕುರಿತು ಮಾತನಾಡುವಾಗ ನೇಮೂರ ಕೆ. (M. P.) ಇವರು ಪರಕೀಯ ಸರಕಾರಕ್ಕಾಗಿ ತಗಲುವ ವೆಚ್ಚವೆ ಹಿಂದುಸ್ತಾನದ ಬಡತನದ ಕಾರಣವೆಂದು ಹೇಳಿದರು. " ಇವೆಲ್ಲ ಸಂಗತಿಗಳನ್ನು ಇಂಗ್ಲಿಷ ಜನರ ಚಿತ್ತಕ್ಕೆ ತರುವದೇ ನಿಮ್ಮ ಮಾರ್ಗ! ಒಮ್ಮೆ ಅವರಿಗೆ ನಿಜವಾದ ಸಂಗತಿಗಳು ತಿಳಿಯಲಿ; ಅಂದರೆ ಇಂಗ್ಲಿಷ ರಾಷ್ಟ್ರವು ನಿಮ್ಮ ಕಷ್ಟಗಳಿಗೆ ತಕ್ಕ ಉಪಾಯ ಯೋಜನೆಯನ್ನು ಕೂಡಲೆ ಕೈಕೊಳ್ಳುವದು ! '' ಎಂದೂ ಹೇಳಿದರು. ಲಾಲಾ ಮುರಲೀಧರರು ಜನರ ಬಡತನವನ್ನು ಕಠೋರ ಭಾಷೆಯಲ್ಲಿ ವರ್ಣಿಸಿದರು: " ಅಕೋ ! ಬಡವರ ಮನೆಗಳಿಗೆ ಹೋಗಿ ಆ ಅವರ ದುಸ್ಥಿತಿಯನ್ನು ನೋಡಿರಿ; ಉಪ್ಪಿಲ್ಲ, ಊಟವಿಲ್ಲ, ಹೊಟ್ಟೆಗಿಲ್ಲದೆ ಬಳಲುವರು. ಹೌದು, ಸಾಧು ಸಜ್ಜನರಿಗೆ ಸರಿಯಾದ ಜೀವನವು ಇದಲ್ಲವೆ? ನಿಮಗೆ ಇನ್ನೇನುಬೇಕು ? ಇದನ್ನು ಕೊಡಿರಿ, ಅದನ್ನು ದಯಪಾಲಿಸಿರಿ, ಎಂದು ಸರಕಾರವನ್ನೇಕೆ ಕಾಡುವಿರಿ? ''....ನೀವು ನಿಜವಾಗಿಯೆ ಕೃತಘ್ನರು. ನಿಮ್ಮ ಆಡಳಿತೆಯಲ್ಲಿ ಭಾಗವಹಿಸುವ ಅಧಿಕಾರವು ನಿಮಗಿರಬೇಕೆಂದು ಕೇಳಿಕೊಳ್ಳುವಿರಿ. ಇಷ್ಟೇಕೆ ನಿಮಗೆ ಹವ್ಯಾಸ? ನಿಮ್ಮ ಸಂರಕ್ಷಣೆಗಾಗಿ ಸಾಕಷ್ಟು ಸೈನ್ಯವು ಕೊಡಲ್ಪಟ್ಟಿದೆ. ನಿಮ್ಮ ಚಿಂತೆಯನ್ನು ತಪ್ಪಿಸುವದಕ್ಕಾಗಿ ಸಾಕಷ್ಟು ನೋಕರರು ಇರುವರು. ಇದಕ್ಕೂ ಹೆಚ್ಚಿಗೆ ನಿಮಗಿನ್ನೇನು ಬೇಕು ? ''

**(೨೭) ಪುಣೆಯಲ್ಲಿಯ ಹನ್ನೊಂದನೆಯ ಕೂಟವು** (೧೮೯೫):- ಪುಣೆಯಲ್ಲಿ ೧೮೯೫ರಲ್ಲಿ ಜರುಗಿದ ಹನ್ನೊಂದನೆಯ ಅಧಿವೇಶನಕ್ಕೆ ೧೫೮೪ ಪ್ರತಿನಿಧಿಗಳು ಬಂದಿದ್ದರು. ಸುರೇಂದ್ರನಾಥ ಬಾನರ್ಜಿಯವರು ಅಧ್ಯಕ್ಷರಿದ್ದರು.

ಅವರು ತಮ್ಮ ಭಾಷಣದಲ್ಲಿ ಕಾಂಗ್ರೆಸಿನ ಅದುವರೆಗಿನ ಯಶಾಪ ಯಶಗಳನ್ನು ವಿಶದವಾಗಿ ವರ್ಣಿಸಿದರು: "ಕಾಂಗ್ರೆಸಿನ ಇತಿಹಾಸವು ಉಜ್ವಲವಾಗಿದೆ. ರೆವಿನ್ಯು ಅಧಿಕಾರಿಗಳಿರುವ ದಿವಾಣಿ ಹಾಗೂ ಫೌಜದಾರಿ ಅಧಿಕಾರಗಳು ವಿಂಗಡಿಸಲ್ಪಡಬೇಕೆಂದು ನೀವು ಕೇಳಿಕೊಂಡಿರಿ. ಅದು ಒಳ್ಳೆಯ ಮಾತಾದರೂ ಸಾಧ್ಯವಲ್ಲವೆಂದು ಲಾರ್ಡ ಡಫರಿನರು ಹೇಳಿದರು.. ಪೋಲೀಸ ಖಾತೆಯಲ್ಲಿ ಸುಧಾರಣೆಯಾಗಬೇಕೆಂದು ನೀವು ಕೇಳಿಕೊಂಡಿರಿ; ನನ್ನ ಪ್ರಾಂತದಲ್ಲಿ ಪೋಲೀಸ ಕಮೀಶನ್ನು ನೇಮಿಸಲ್ಪಟ್ಟು ಅದರ ಶಿಫಾರಸುಗಳನ್ನು ಅಮಲಿನಲ್ಲಿ ತರಲು ನಮ್ಮ ಪ್ರಾಂತದ ಸರಕಾರವು ಹವಣಿಸುತ್ತಲಿದೆ. ದೊಡ್ಡ ದೊಡ್ಡ ಹುದ್ದೆಗಳಿಗೆ ನಮ್ಮ ಜನರನ್ನು ನೇಮಿಸಿಕೊಳ್ಳಬೇಕೆಂದು ನೀವು ಚಳವಳಿ ಮಾಡಿರಿ; ಅದರ ಫಲವಾಗಿ ಪಬ್ಲಿಕ ಸರ್ವಿಸ ಕಮೀಶನ ನೇಮಿಸಲ್ಪಟ್ಟು ಸಿವಿಲ ಸರ್ವಿಸ ಪರೀಕ್ಷೆಯ ವಯೋಮರ್ಯಾದೆಯು ಬೆಳೆಯಿಸಲ್ಪಟ್ಟಿತು. ಕಾಂಗ್ರೆಸಿನ ಚಳವಳಿಯ ಒಳ್ಳೆ ಮಹತ್ವದ ಲಾಭವೆಂದರೆ, ಕೊನೆಗೆ ಸರಕಾರದವರು ಕಾಯದೆ ಕೌನ್ಸಿಲ್ಲಿನಲ್ಲಿ ಜನರ ಪ್ರತಿನಿಧಿಗಳು ಇರಬೇಕೆಂಬ ತತ್ವವನ್ನು ಒಪ್ಪಿಕೊಂಡರು... ಇವೆಲ್ಲಕ್ಕಿಂತ ಕಾಂಗ್ರೆಸಿನಿಂದ ಆದ ಹೆಚ್ಚಿನ ಲಾಭವೆಂದರೆ, ನೀವು ದೇಶದಲ್ಲಿ ಹೊಸ ಚೈತನ್ಯವನ್ನುಂಟು ಮಾಡಿದಿರಿ. ನಿಮ್ಮ ದೇಶದ ನಾಗರಿಕರಲ್ಲಿ ಹೊಸ ಹುರುಪನ್ನು ಹುಟ್ಟಿಸಿರುವಿರಿ. ಅಸ್ತಾವ್ಯಸ್ತವಾಗಿ ಹರಿದು ಹಂಚಿಹೋಗಿದ್ದ ಜನಾಂಗವನ್ನು ನೀವು ಒತ್ತಟ್ಟಿಗೆ ತಂದು ಐಕ್ಯವನ್ನುಂಟುಮಾಡಿದಿರಿ–ರಾಜಕೀಯ ಮತದಾನದ ಹಕ್ಕುಗಳನ್ನು ಸ್ವೀಕರಿಸುವ ಪಾತ್ರತೆಯನ್ನು ತಂದುಕೊಟ್ಟಿರಿ....ಸಾರ್ವಜನಿಕ ಜೀವನದ ಉಚ್ಚ ಆದರ್ಶವನ್ನು ಅವರೆದುರಿಗೆ ಇಟ್ಟಿರಿ..ಎಲ್ಲಕ್ಕೂ ಹೆಚ್ಚಿನ ಮಾತೆಂದರೆ ಬ್ರಿಟಿಶ ಸಾಮ್ರಾಜ್ಯದಲ್ಲಿ ವಿಶ್ವಾಸವನ್ನುಂಟುಮಾಡಿ ಆ ಸಾಮ್ರಾಜ್ಯದಲ್ಲಿಯೆ ಸಮಾನತೆಯ ಹಕ್ಕುಗಳನ್ನು ಪಡೆದು ಆ ಸಾಮ್ರಾಜ್ಯ ಬಂಧನವು ಚಿರವಾಗಿ ಬಾಳಲೆಂಬ ಭಾವನೆಯನ್ನು ನೀವು ಹುಟ್ಟಿಸಿದಿರಿ." ಹೊಸ ಕೌನ್ಸಿಲ್ಲುಗಳಿಂದ ಜನರಿಗೆ ನಿಜವಾದ ಹಕ್ಕುಗಳು ದೊರೆಯಲಿಲ್ಲವೆನ್ನುವದನ್ನು ವಿವರಿಸಿ ಹಿಂದುಸ್ತಾನದ ಸೈನ್ಯದ ಖರ್ಚು ಹೇಗೆ ಏರಿರುವದೆಂಬುದನ್ನು ತೋರಿಸಿದರು. ಇಂಗ್ಲಂಡದಲ್ಲಿ ಹಿಂದುಸ್ತಾನಕ್ಕಾಗಿ ವೆಚ್ಚವಾಗುತ್ತಿರುವ ದುಡ್ಡಿನ ಲೆಕ್ಕವನ್ನು ತಿಳಿಸಿ ಹೇಳಿದರು:

" ಹಿಂದುಸ್ಥಾನಕ್ಕಾಗಿ ಇಂಗ್ಲಂಡದಲ್ಲಿ ವೆಚ್ಚವಾಗುತ್ತಿರುವ ಹಣವು ಏರುತ್ತ ಹೋಗಿದೆ. ೧೮೮೨ರಲ್ಲಿ ಆ ವೆಚ್ಚವು ೧,೭೩,೬೬೦೦೦ ದಷ್ಟು ಇದ್ದಿತು; ೧೮೯೨ರಲ್ಲಿ ಅದು ೨,೫೯,೧೧೦೦೦ ರೂಪಾಯಿಯಷ್ಟಾಗಿದೆ. ಅನೇಕ ಸಲ ಈ ವೆಚ್ಚವನ್ನು ಕುರಿತು ನ್ಯಾಯಿಸರಾಯರು ಕೂಡ ತಮ್ಮ ಪ್ರತಿಕೂಲ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಇಗ್ಲಂಡದ ಸರಕಾರವು ಸಹಿಸ ಬೇಕಾದ ಎಷ್ಟೋ ವೆಚ್ಚದ ಭಾರವು ಹಿಂದುಸ್ಥಾನದ ಮೇಲೆ ಹೇರಲ್ಪಟ್ಟಿದೆ..... ಇಂಡಿಯಾ ಆಫೀಸಿನ ಕಟ್ಟಡವನ್ನು ಕಟ್ಟಲಿಕ್ಕೆಂದು ೫ ಲಕ್ಷ ಪೌಂಡುಗಳನ್ನು ನಾವು ಕೊಟ್ಟೆವು. ವಸಾಹತುಗಳ ಕಚೇರಿಗಳನ್ನು ಕಟ್ಟಲು ಬ್ರಿಟಿಶ ಸರಕಾರದವರು ೧ ಲಕ್ಷ ಪೌಂಡು ಮಾತ್ರ ಕೊಟ್ಟರು. ಇದೇಕೆ ಅಂತರವು ?....ವರ್ಷಕ್ಕೆ ೨,೩೦,೦೦೦ ಪೌಂಡಿನಂತೆ ನಾವು ಇಂಡಿಯಾ ಆಫೀಸಿನ ವೆಚ್ಚವನ್ನು ಕೊಡುತ್ತಲಿರುವೆವು. ವಸಾಹತಿನ ಕಚೇರಿಯ ವೆಚ್ಚಕ್ಕಾಗಿ ಬ್ರಿಟಿಶ ಸರಕಾರದವರು ಕೇವಲ ೪೧,೦೦೦ ಪೌಂಡುಗಳನ್ನು ಕೊಡುತ್ತಲಿರುವರು. ಚೀನದಲ್ಲಿಯ ಸರಕಾರೀ ಪ್ರತಿನಿಧಿಯ ಕಚೇರಿಯ ವೆಚ್ಚಕ್ಕಾಗಿ ೧೨ತ್ತಿ ಸಾವಿರ ಪೌಂಡುಗಳನ್ನು ಪರ್ಶಿಯದ ರಾಯಭಾರಿಯ ವೆಚ್ಚಕ್ಕಾಗಿ ೭೦೦೦ ಪೌಂಡುಗಳನ್ನು ವರುಷವರುಷಕ್ಕೂ ತೆತ್ತುತ್ತಲಿರುವೆವು. ತುರ್ಕೀ ಅರಬಸ್ಥಾನದಲ್ಲಿಯೂ ಬಗದಾದದಲ್ಲಿಯೂ ಇರುವ ರಾಯಭಾರಿಗಳ ವೆಚ್ಚಕ್ಕಾಗಿ ವರುಷವೊಂದಕ್ಕೆ ೧,೭೨,೩೬೦ ರೂಪಾಯಿಗಳನ್ನು ನಾವು ಕೊಡುತ್ತಲಿರುವೆವು. ....ಈ ವೆಚ್ಚವನ್ನು ನಿಜವಾಗಿ ನೋಡಿದರೆ ಇಂಗ್ಲಂಡಿನವರು ಸಹಿಸಬಾರದೆ? " . . ಉಳಿದ ಅನೇಕ ಮಹತ್ವದ ಪ್ರಶ್ನೆಗಳನ್ನು ಚರ್ಚಿಸಿ ಅವರು ಬ್ರಿಟಿಶ ಜನರಲ್ಲಿ ತಮಗಿದ್ದ ವಿಶ್ವಾಸವನ್ನು ಮತ್ತೆ ವ್ಯಕ್ತಪಡಿಸಿದರು: " ನಮ್ಮ ಈ ಹೋರಾಟದಲ್ಲಿ ಸುಧಾರಿಸಿದ ಎಲ್ಲ ಜನಾಂಗಗಳ ಸಹಾನುಭೂತಿಯು ನಮಗಿದೆ. ಜಗತ್ತಿನಲ್ಲಿಯ ಎಲ್ಲ ಸಜ್ಜನರು ನಮ್ಮ ಕಲ್ಯಾಣವನ್ನೆ ಚಿಂತಿಸುವರು. ಗಂಗಾ ನದಿಯ ತೀರದಲ್ಲಿರುವ ಜನರು ಸ್ವತಂತ್ರರಾದರೆಂಬ ಸುದ್ದಿಯನ್ನು ಕೇಳಿ ಅವರಿಗೆ ಆನಂದವಾಗುವದು. ಅವರು ನಮ್ಮ ಹಳೆಯ ಸಂಸ್ಕೃತಿಯ ದೊಡ್ಡಸ್ತನದ ವಿಷಯವನ್ನು ಓದಿಕೊಂಡಿಲ್ಲವೆ ? . . ಎಲ್ಲಕ್ಕೂ ಹೆಚ್ಚಿನ ಮಾತೆಂದರೆ ಬ್ರಿಟಿಶ ಜನತೆ ಹಾಗೂ ಅವರ ಪ್ರತಿನಿಧಿಗಳ ಔದಾರ್ಯದ ಮೇಲೆ ನಮ್ಮ ದೃಢ ವಿಶ್ವಾಸವಿದೆ. "

ಈ ಅಧಿವೇಶನದಲ್ಲಿ ಹಿಂದಿ ಸರಕಾರದ ಆಯುವ್ಯಯುವನ್ನು ಕುರಿತು ಒಳ್ಳೆ ಯೋಗ್ಯ ಚೌಕಶಿಯಾಗಬೇಕೆಂದು ನಿರ್ಣಯುವಾಯಿತು. ಆ ಸೂಚನೆ ಯನ್ನು ಕುರಿತು ಮಾತನಾಡುವಾಗ ಜಂಬುಲಿಂಗ ಮುದ್ಲಿಯಾರರು ಹೀಗೆ ಹೇಳಿದರು:—"ಹಿಂದುಸ್ತಾನದ ಸುಸಂಸ್ಕೃತ ಜನಾಂಗದ ಪ್ರತಿನಿಧಿಗಳಾದ ಸುಶಿಕ್ಷಿತ ಹಿಂದಿ ಜನರು ಕಳೆದ ನಾಲ್ವತ್ತು ವರುಷಗಳಿಂದ ದೇಶದ ಆಡಳಿ ತೆಯು ವೆಚ್ಚವನ್ನು ಪರೀಕ್ಷಿಸಿರಿ ಎಂದು ಕೂಗುತ್ತ ಬಂದಿರುವರು. ಈಗಿನ ಆಡಳಿತೆಯು ಮೇಲೆ ನಾವು ಎಲ್ಲ ತರದ ಅಪರಾಧಗಳನ್ನು ಹೊರಿಸಿರುವೆವು. ಹಿಂದುಸ್ತಾನದ ಮೇಲೆ ಸಿವ್ಹಿಲ ಸರ್ವಿಸ ಹೇರಿ ವಿನಾಕಾರಣ ನಮ್ಮ ಮೇಲೆ ದೊಡ್ಡ ಭಾರವನ್ನು ಇಂಗ್ಲಿಷ ಸರಕಾರದವರು ಹಾಕಿರುವರು; ನಮ್ಮಲ್ಲಿಯು ಸೈನ್ಯದ ವೆಚ್ಚವೂ ಮಿತಿಮೀರಿ ಬೆಳೆದಿದೆ; ಹಿಂದುಸ್ತಾನದ ಮೇರೆಗಳಾಚೆ ದಾಳಿಗಳನ್ನು ಮಾಡಿ ಸರಕಾರದವರು ವ್ಯರ್ಥವಾಗಿ ಹಿಂದುಸ್ತಾನದ ದುಡ್ಡು ಹಾಳು ಮಾಡುತ್ತಲಿರುವರು; ಇಂಗ್ಲಂಡದಲ್ಲಿ ಹಿಂದುಸ್ತಾನದ ಪರವಾಗಿ ವೆಚ್ಚವಾಗುವ ದುಡ್ಡಿನ ವಿಷಯದಲ್ಲಿ ಇಂಗ್ಲಿಷ ಜನರು ಪ್ರಾಮಾಣಿಕತನ ದಿಂದ ನಡಕೊಳ್ಳುವದಿಲ್ಲ; ಇಷ್ಟೆ ಅಲ್ಲ, ಹಿಂದುಸ್ತಾನ ಸರಕಾರದವರೂ, ಇಂಗ್ಲಿಷ ಸರಕಾರದವರೂ, ಇಂಗ್ಲಂಡದ ಜನರೂ,ಹಿಂದುಸ್ತಾನದ ವಿಷಯು ದಲ್ಲಿರುವ ತಮ್ಮ ಕರ್ತವ್ಯವನ್ನು ಯೋಗ್ಯ ರೀತಿಯಿಂದ ಮಾಡದೆ ಹೋದು ದರಿಂದ ಅಸಹ್ಯವಾದ ಕರಭಾರದಿಂದಲೂ ಅವ್ಯವಸ್ಥಿತವಾದ ಆಡಳಿತೆ ಯಿಂದಲೂ ಹೊಟ್ಟೆಗೆ ಕೂಳು ಸಿಕ್ಕದೆ ಲಕ್ಷಾವಧಿ ಜನರ ಸಾವಿನ ಹೊಣೆಯು ಅವರ ಮೇಲೆ ಇದೆಯೆಂದು ನಾವು ಸಾರಿ ಸಾರಿ ಹೇಳುತ್ತೇವೆ. ತಮ್ಮ ಕರ್ತವ್ಯವನ್ನು ಯೋಗ್ಯರೀತಿಯಿಂದ ಮಾಡದೆ ಲಕ್ಷಾವಧಿ ಜನರನ್ನು ಸಾವಿಗೀಡು ಮಾಡಿದ್ದರ ಪಾಪವು ಇಂಗ್ಲಂಡದ ಪಾರ್ಲಮೆಂಟಿನ ಮೇಲೂ ಇಂಗ್ಲಂಡದ ಜನತೆಯು ಮೇಲೂ ಇದೆ. ಈ ತರದ ಘೋರ ಅಪರಾಧಗಳ ಆರೋಪಣೆಗಳಿರುವಾದ ಒಂದು ಕುಂಟ ಚೌಕಶಿಯುನ್ನು ಮಾಡುವದು ಇಂಗ್ಲಂಡಿಗೆ ಉಚಿತವಾದುದೆ?". ಉಪ್ಪಿನ ಕರದ ನಿಷೇಧ ಮಾಡುವ ಗೊತ್ತುವಳಿಯುನ್ನು ಮಂಡಿಸುವಾಗ ಗೋಪಾಲ ಕೃಷ್ಣ ಗೋಖಲೆಯುವರು ಹಿಂದಿ ರೈತರ ಕನಿಕರ ಸ್ಥಿತಿಯುನ್ನು ಎದೆಯೊಡಯುುವಂತೆ ಬಣ್ಣಿಸಿದರು. "ಹಿಂದಿ ರೈತನು ಅರಹೊಟ್ಟೆಯಿಂದಿರುವನು, ಬಾಡಿಹೋಗಿರುವನು,

ಬೆಂದು ಬೆಂಡಾಗಿರುವನು, ಗಂಜಿನೀರನ್ನು ಕಾಣಲು ಮುಂಜಾವಿನಿಂದ ಸಾಯಂಕಾಲದವರೆಗೆ ಬಳಲುವನು; ರಾಜ್ಯದಾಡಳಿತೆಯಲ್ಲಿ ಅವನಿಗೆ ಏನೂ ಅಧಿಕಾರವಿಲ್ಲ; ದೇವರೂ ಮನುಷ್ಯನೂ ತನ್ನ ಬೆನ್ನ ಮೇಲೆ ಹಾಕಿರುವ ಭಾರವನ್ನು ಪಿಟ್ಟೆಂದು ಮಾತನಾಡದೆ ಸಹಿಸುತ್ತಲಿರುವನು.'' ವಾಡಿಕೆಯಂತೆ ಅನೇಕ ಮಹತ್ವದ ವಿಷಯಗಳನ್ನೊಳಗೊಂಡ ನಿರ್ಣಯಗಳು ಗೊತ್ತಾಗಿ ಸಭೆಯ ಕಾರ್ಯವು ಮುಗಿಯಿತು.

**(೨೭) ಕಲಕತ್ತೆಯಲ್ಲಿ ಹನ್ನೆರಡನೆಯ ಕೂಟವು** (೧೮೯೬):—ಕಲಕತ್ತೆಯಲ್ಲಿ ೧೮೯೬ರಲ್ಲಿ ಜರುಗಿದ ಹನ್ನೆರಡನೆಯ ಅಧಿವೇಶನಕ್ಕೆ ಮಹಮದ ರಹೀಮತುಲ್ಲಾ ಸಯಾನಿಯವರು ಅಧ್ಯಕ್ಷರು. ಸಭೆಗೆ ೭೮೪ ಪ್ರತಿನಿಧಿಗಳು ಬಂದಿದ್ದರು. ಉಳಿದ ವಿಷಯಗಳಲ್ಲದೆ ಅಧ್ಯಕ್ಷರು ಹಿಂದುಸ್ತಾನದಲ್ಲಿಯ ಮುಸಲ್ಮಾನ ಬಂಧುಗಳು ಕಾಂಗ್ರೆಸಿನ ಕಾರ್ಯಕ್ಕೆ ಏಕೆ ಬೆಂಬಲವನ್ನು ಕೊಡಬೇಕೆಂಬುದನ್ನು ಸಮಯೋಚಿತವಾಗಿ ವಿವೇಚಿಸಿದರು. ಈ ವಿಷಯವು ಬಳ್ಳೆ ಮಹತ್ವದ್ದಿದ್ದುದರಿಂದ ಅವರು ಹೇಳಿದ ಮಾತುಗಳ ಸಾರಾಂಶವನ್ನು ಇಲ್ಲಿ ಕೊಟ್ಟಿದೆ:– '' (೧) ಕಾಂಗ್ರೆಸಿನಲ್ಲಿ ಹಿಂದೂ ಜನರಿರುವದರಿಂದ ಆ ಸಂಸ್ಥೆಯನ್ನು ಸೇರುವದು ನಮ್ಮ ಧರ್ಮಕ್ಕೆ ವಿರುದ್ಧವಾದ ಮಾತೆಂಬುದು ಸುಳ್ಳುಮಾತು. ಹಿಂದೂ ಮುಸಲ್ಮಾನರು ಒಂದೇ ನಾಡಿನವರು. ಜನತೆಗೆ ರಾಜಕೀಯ ಅಧಿಕಾರಗಳನ್ನು ದೊರಕಿಸಿ ಕೊಟ್ಟು ಜನತೆಯ ಉದ್ಧಾರವನ್ನು ಮಾಡುವದೆ ಕಾಂಗ್ರೆಸಿನ ಗುರಿಯಾಗಿದೆ; ಇದು ಅತ್ಯಂತ ಉದಾತ್ತವಾದ ಧ್ಯೇಯವಾಗಿದೆ. ಹಿಂದೂ ಮತ್ತು ಮುಸಲ್ಮಾನ ಸಮಾಜಗಳಿಗಾಗಿ ಬೇರೆ ಬೇರೆ ಸಂಸ್ಥೆಗಳಿರದೆ ಒಂದೇ ಸಂಸ್ಥೆಯಿರುವದು ಒಳಿತಾದ ಮಾತು. (೨) ಕಾಂಗ್ರೆಸು ಸರಕಾರಕ್ಕೆ ವಿರೋಧಿಯಾದ ಸಂಸ್ಥೆಯೆನ್ನುವದು ತಪ್ಪು; ಕಾಯದೇಶೀರ ಉಪಾಯಗಳಿಂದ ಜನತೆಯ ಕೊರತೆಗಳನ್ನು ಸರಕಾರಕ್ಕೆ ಯೋಗ್ಯಮಾರ್ಗಗಳಿಂದ ತಿಳಿಸುವ ಸಂಸ್ಥೆಯಾಗಿದೆ ಕಾಂಗ್ರೆಸ್ಸು. ಈ ರೀತಿ ನಮಗೆ ಬೇಕಾದ ಮಾತುಗಳನ್ನು ಸರಕಾರಕ್ಕೆ ತಿಳಿಸುವದು ನಮ್ಮ ಕರ್ತವ್ಯವಾಗಿದೆ. (೩) ಇಂಗ್ಲಿಷ ಭಾಷೆಯನ್ನು ಕಲಿಯುವದು ಇಸ್ಲಾಮ ಧರ್ಮಕ್ಕೆ ವಿರುದ್ಧವಾದುದೆಂದೂ ಒಂದು ಆಕ್ಷೇಪಣೆಯಿದೆ, ಆದರಲ್ಲಿಯೂ ಏನೂ ಹುರುಳಿಲ್ಲ. (೪) ಕಾಂಗ್ರೆಸಿನ ಪ್ರಯತ್ನದಿಂದ

ಬ್ರಿಟಿಶ ರಾಜ್ಯವು ಅಳಿದು ಅದರ ಜಾಗೆಯಲ್ಲಿ ಹಿಂದೂ ರಾಜ್ಯವು ಬರಬಹು ದೆಂದು ಕೆಲವರು ಹೇಳುವರು. ಇದು ತಪ್ಪು. ಕಾಂಗ್ರೆಸಿನ ಪ್ರತಿಷ್ಠೆ ಬೆಳೆ ಯುವದರಿಂದ ಬ್ರಿಟಿಶ ರಾಜ್ಯಕ್ಕೆ ಹೆಚ್ಚು ಸ್ಥಿರತೆಯುಂಟಾಗುವದು. ಆದು ದರಿಂದ ಕಾಲ್ಪನಿಕ ಅಂಜಿಕೆಯಿಂದ ಮುಸಲ್ಮಾನ ಬಂಧುಗಳು ಬೆದರಿ ಹೋಗ ಕೂಡದು. (೫) ಕಾಂಗ್ರೆಸು ಸರಕಾರದ ವಿರುದ್ಧವಿದ್ದುದರಿಂದ ಮುಸ ಲ್ಮಾನರು ಕಾಂಗ್ರೆಸನ್ನು ಸೇರಿದರೆ ಬ್ರಿಟಿಶರು ಮುಸಲ್ಮಾನರಿಗೆ ಮಾಡಿದ ಉಪಕಾರಕ್ಕೆ ಪ್ರತಿಯಾಗಿ ಅಪಕಾರವನ್ನುಂಟು ಮಾಡಿದ ಹಾಗಾಗುವ ದೆಂದು ಕೆಲವರು ಹೇಳುವರು; ಇದು ಅಯುಕ್ತವು. ಸರಕಾರವು ಮುಸ ಲ್ಮಾನರಿಗೆ ಕೊಟ್ಟ ಶಿಕ್ಷಣಕ್ಕೆ ತಕ್ಕ ಪ್ರತಿಫಲವನ್ನು ಕೊಡಬೇಕಾದರೆ ಮುಂದೆ ಬರುವ ಗಂಡಾಂತರದ ಎಚ್ಚರಿಕೆಯನ್ನು ಸಕಾಲದಲ್ಲಿಯೆ ಸರಕಾ ರಕ್ಕೆ ಕೊಡುವದು ನಮ್ಮ ಕರ್ತವ್ಯವಾಗಿದೆ. (೬) ಕಾಂಗ್ರೆಸು ಎಲ್ಲ ಜಾತಿ ಗಳ ಪ್ರತಿನಿಧಿಭೂತಸಂಸ್ಥೆಯಲ್ಲವೆಂಬ ಆಕ್ಷೇಪಣೆಗೆ ಉತ್ತರವಿಷ್ಟೆ; ಕಾಂಗ್ರೆಸು ತನ್ನ ಬಾಗಿಲನ್ನು ಎಲ್ಲ ಮತಸ್ಥರಿಗೆ ತೆರೆದಿಟ್ಟಿದೆ. ಎಲ್ಲ ಜಾತಿ ಗಳೂ ಅದನ್ನು ಸೇರುವದು ಆಯಾ ಜಾತಿಗಳ ಪರಮ ಕರ್ತವ್ಯವಾಗಿದೆ. (೭) ಕಾಂಗ್ರೆಸಿನಲ್ಲಿಯ ಜನರ ಉದ್ದೇಶಗಳು ಪ್ರಾಮಾಣಿಕವಿಲ್ಲವೆಂಬ ಆಕ್ಷೆ ಪಣೆಗೆ ನಾವು ಹೇಳುವದೆಂದರೆ ಪುರಾವೆಯಿಲ್ಲದೆ ಬರಿ ಬಾಯಿಮಾತಿನಿಂದ ಪ್ರಯೋಜನವೇನು? (೮) ಕಾಂಗ್ರೆಸದ ಕಾರ್ಯಕ್ರಮವು ವ್ಯವಹಾರ್ಯ ವಲ್ಲವೆಂದೂ ಕೆಲವರು ಅನ್ನುವರು; ಆದರೆ ಈಗಾಗಲೆ ಆದ ಪ್ರಚಂಡ ಜಾಗ್ರುತಿಯೆ ಈ ಮಾತಿನ ಪೊಳ್ಳುತನವನ್ನು ಸಿದ್ಧಪಡಿಸಲು ಸಾಕಷ್ಟಿದೆ. (೯) ದೊಡ್ಡ ದೊಡ್ಡ ವಿಷಯಗಳನ್ನು ಚರ್ಚಿಸುವ ಯೋಗ್ಯತೆಯು ಕಾಂಗ್ರೆ ಸಿನಲ್ಲಿಲ್ಲವೆನ್ನುವ ಆಕ್ಷೇಪಣೆಯು ಯೋಗ್ಯವಾದುದಲ್ಲ. ಕಾಂಗ್ರೆಸಿನಲ್ಲಿ ಕಾಯದೆ ಕೌನ್ಸಿಲ್ಲಿನ ಮೆಂಬರರು, ಮುನಸಿಪಾಲಿಟಿಯ ಸಭಾಸದರು, ವ್ಯಾಪಾರಸ್ಥರು, ಹೆಸರು ಪಡೆದ ವಕೀಲರು, ನಾಮಾಂಕಿತ ಡಾಕ್ಟರರು ಪ್ರತಿಯೊಂದು ಜಾತಿಯ ಪಂಗಡದ ಉದ್ಯೋಗದ ಪ್ರತಿನಿಧಿಗಳು ಸೇರು ವರು. ಕಾಂಗ್ರೆಸಿನಷ್ಟು ಮಹತ್ವದ ಇನ್ನೊಂದು ಸಂಸ್ಥೆಯನ್ನು ತೋರಿಸು ವದು ಅಸಾಧ್ಯವು. (೧೦) ಪಾಶ್ಚಿಮಾತ್ಯ ಜನಾಂಗಗಳಲ್ಲಿ ಪ್ರಚಲಿತವಿರುವ ಪ್ರಾತಿನಿಧಿಕ ರಾಜ್ಯಪದ್ಧತಿಯು ಹಿಂದುಸ್ಥಾನಕ್ಕೆ ಸರಿಯಾದುದಲ್ಲವೆಂದು

ಹೇಳುವದು ತಪ್ಪು, ಅರಸೊತ್ತಿಗೆಯ ರಾಜ್ಯಪದ್ಧತಿಗಿಂತಲೂ ಪ್ರಜಾರಾಜ್ಯವೆ ಒಳ್ಳೆಯ ರಾಜ್ಯಪದ್ಧತಿಯು.ಪ್ರಜಾಪದ್ಧತಿಯು ಮಹಮ್ಮದೀ ಸಮಾಜಕ್ಕೆ ಯೋಗ್ಯವಾದುದಲ್ಲವೆನ್ನುವ ಮಾತು ಸರಿಯಾದುದಲ್ಲ.(೧೧) ಕಾಂಗ್ರೆಸಿನಲ್ಲಿ ಯಾವಾಗಲೂ ಹಿಂದುಜನರ ಬಹುಮತವಿರುವದರಿಂದ ಅದರಲ್ಲಿ ಪಾಸಾಗುವ ಠರಾವುಗಳು ಹಿಂದೂ ಜನರಿಗೇ ಅನುಕೂಲವಾಗುವದೆಂಬುದರಲ್ಲಿಯೂ ಏನೂ ಹುರುಳಿಲ್ಲ. ಕಾಂಗ್ರೆಸಿನಲ್ಲಿಯ ಜನರು ಸುಸಂಸ್ಕೃತರು ಯಾವದೆ ವೈಯಕ್ತಿಕ ಇಲ್ಲವೆ ಜಾತಿಯ ಭಾವನೆಯಿಂದ ಪ್ರೇರಿತರಾದವರಲ್ಲ. (೧೨) "ಪರೀಕ್ಷೆಯಲ್ಲಿ ಪಾಸಾದವರಿಗಷ್ಟೆ ನೋಕರಿಗಳನ್ನು ಕೊಡಬೇಕೆಂದು ನಿಯಮವನ್ನು ಮಾಡಿದರೆ ಕೀಳುಕುಲದ ಹಿಂದುಗಳು ರಾಜಮನೆತನದ ಮುಸಲ್ಮಾನರನ್ನು ಪೀಡಿಸುವರು, ಆದುದರಿಂದ ಕಾಂಗ್ರೆಸಿನವರು ಕೇಳುವ ಹಾಗೆ ಪರೀಕ್ಷೆಯ ಪದ್ಧತಿಯನ್ನವಲಂಬಿಸದೆ ದೊಡ್ಡ ದೊಡ್ಡ ಮನೆತನದವರಿಗೆ ನೋಕರಿಗಳನ್ನು ಕೊಡುವದು ಯೋಗ್ಯವೆಂದು ಕೆಲವರು ಹೇಳುವರು. ಇದೇನು ಬರಿ ಇದೇ ರಾಜ್ಯದ ಮಾತಲ್ಲ. ಎಲ್ಲಿಯಾದರೂ ಹೀಗೆಯೆ ಆಗುವದುಂಟು. ಈ ದೋಷವನ್ನು ತೆಗೆದೊಗೆಯಬೇಕಾದರೆ ಎಲ್ಲರಿಗೂ ಹೆಚ್ಚಿನ ಶಿಕ್ಷಣವನ್ನು ಕೊಡುವದವಶ್ಯವು". ಆಗಿನ ಮುಸಲ್ಮಾನಸಮಾಜದವರಲ್ಲಿ ಕೆಲವರು ಮುಂದೆ ಚಾಚುವ ಆಕ್ಷೇಪಣೆಗಳಿಗೆ ಹೀಗೆ ಉತ್ತರಕೊಟ್ಟು ಸಯಾನಿಯವರು ಒಂದು ಬಂಗಾರದಂಥ ಉಪದೇಶದ ಮಾತನ್ನು ಹೇಳಿದರು: "ಹೇಡಿತನದ ಕಾಲ್ಪನಿಕ ಆಕ್ಷೇಪಣೆಗಳನ್ನು ದೂರನಿಂತು ಚಾಚದೆ, ಮುಸಲ್ಮಾನಬಂಧುಗಳು ಕಾಂಗ್ರೆಸಿಗೆ ಸ್ವತಃ ಬಂದು ಅಲ್ಲಿ ಏನು ನಡೆಯುತ್ತಿದೆಯೆಂಬುದನ್ನು ಕಣ್ಣಾರೆ ಕಾಣಬೇಕು; ಯಾವುದೆ ಸೂಚನೆಗೆ ಯೋಗ್ಯವಾದ ಆಕ್ಷೇಪಣೆಗಳನ್ನಿತ್ತಿದ್ದರೆ ಆ ಸೂಚನೆಯು ಬಿದ್ದು ಹೋಗುವದೆನ್ನುವದು ಅವರಿಗೆ ಕಂಡುಬರುವದು" ಒಕ್ಕಲಿಗರ ಸ್ಥಿತಿಯು ದಿನದಿನಕ್ಕೂ ಕೆಡುತ್ತಲಿದ್ದ ವಿಷಯವನ್ನು ಸಯಾನಿಯವರು ಹೇಳಿದರು. "ವರುಷವರುಷಕ್ಕೂ ಬೆಳೆಯುತ್ತಲಿರುವ ಈ ದಾರಿದ್ರ್ಯರೋಗಕ್ಕೆ ವಿಶಾಲವಾದ ಉಪಾಯಯೋಜನೆಯನ್ನು ಮಾಡಲೆಬೇಕು. ಈ ಭೀಷಣವಾದ ಪರಿಸ್ಥಿತಿಯನ್ನು ನೀವು ಒಳ್ಳೆ ರೀತಿಯಿಂದ ಮನನಮಾಡಬೇಕೆಂದು ನಾನು ಸೆರಗೊಡ್ಡಿ ಬೇಡಿಕೊಳ್ಳುವೆನು; ಇದರಿಂದ ಭಯಂಕರ ಗೊಂದಲವು ಏಳ

ಬಹುದು. ಹೊಟ್ಟೆಯು ಬಂಡಾಯಕ್ಕಿಂತಲೂ ಹೆಚ್ಚಿನ ಬಂಡಾಯವಿಲ್ಲ. ಸರಕಾರದವರು ಮಾಡಲಿರುವ ಉಪಾಯಯೋಜನೆಗೆ ನಾವೂ ನಮ್ಮ ಕೈಯಿಂದಾದಷ್ಟು ಸಹಾಯವನ್ನು ಮಾಡಲೆಬೇಕು". ಮರುವರುಷ ಜರುಗಲಿದ್ದ ವ್ಹಿಕ್ಟೋರಿಯಾ ಮಹಾರಾಜ್ಞಿಯವರ ವಜ್ರ-ಮಹೋತ್ಸವವನ್ನು ಉಲ್ಲೇಖಿಸಿ ಅವರು ಹೀಗೆ ಹೇಳಿದರು: "ವ್ಹಿಕ್ಟೋರಿಯಾ ಮಹಾರಾಣಿಯವರ ಆಳ್ವಿಯನ್ನು ಬ್ರಿಟಿಶ ಸಾಮ್ರಾಜ್ಯದೊಳಗಿನ ಎಲ್ಲ ಪ್ರಜಾಜನರೂ ಒಳ್ಳೆ ಅಭಿಮಾನದಿಂದ ನೆನೆಸುವರೆಂದು ಹೇಳಿದರೆ ಸಾಕು. ಅದುದರಿಂದ ಹಿಂದುಸ್ತಾನದಿಂದ ಎಲ್ಲ ಭಾಗಗಳಿಂದ ಇಲ್ಲಿ ಕಾಂಗ್ರೆಸಿನಲ್ಲಿ ಕೂಡಿದ ಪ್ರತಿನಿಧಿಗಳು ಮಹಾರಾಣಿಯವರ ವಿಷಯದಲ್ಲಿ ತಮಗಿರುವ ಭಕ್ತಿಯನ್ನು ವಿಜೃಂಭಣೆಯಿಂದ ಹೊರಪಡಿಸಲಿ! ಮಹಾರಾಣಿಯು ಚಿರಾಯುವಾಗಲೆಂದು ನಾವೆಲ್ಲರೂ ಹಾರೈಸೋಣ!"

ಅದೇ ವರ್ಷ ಹಿಂದುಸ್ತಾನದಲ್ಲಿಯ ಶಿಕ್ಷಣಖಾತೆಯ ನೋಕರರಲ್ಲಿ ಎರಡು ವಿಭಾಗಗಳನ್ನು ಮಾಡಿ ಉಚ್ಚ ವರ್ಗದ ನೋಕರರನ್ನು ಇಂಗ್ಲಂಡದಲ್ಲಿ ಆರಿಸಬೇಕೆಂದೂ ಅದಕ್ಕೂ ಕೆಳಗಿನ ತರಗತಿಯವರನ್ನು ಹಿಂದುಸ್ತಾನದಲ್ಲಿ ಆರಿಸಬೇಕೆಂದೂ ಸರಕಾರದವರು ಠರಾವು ಮಾಡಿದ್ದರು. ೧೮೮೦ಕ್ಕೆ ಮೊದಲು ಬಂಗಾಲದಲ್ಲಿ ಉಚ್ಚ ತರಗತಿಯ ನೋಕರರಿಗೆ ಅವರು ಹಿಂದೀಯರಿರಲಿ, ಯುರೋಪಿಯನರಿರಲಿ,- ಎಲ್ಲರಿಗೂ ಸರಿಸಮಾನ ಸಂಬಳವಿತ್ತು; ಎಲ್ಲರಿಗೂ ಪ್ರಾರಂಭಕ್ಕೆ ೫೦೦ ರೂಪಾಯಿಯ ವೇತನವು ದೊರೆಯುತ್ತಿತ್ತು. ಆದರೆ ೧೮೮೦ರಲ್ಲಿ ಹಿಂದೀ ಜನರಿಗೆ ಪ್ರಾರಂಭಕ್ಕೆ ೩೩೩ ರೂಪಾಯಿ ಕೊಡಬೇಕೆಂದು ಗೊತ್ತಾಗಿತ್ತು. ಈ ವರುಷ ಆದ ಹೊಸ ನಿಯಮದಂತೆ ಇಂಗ್ಲಿಷರಿಗೆ ಹತ್ತೆ ವರುಷದಲ್ಲಿ ೧೦೦೦ ರೂಪಾಯಿ ಸಂಬಳವಾದರೆ ಹಿಂದೀ ಮನುಷ್ಯನಿಗೆ ಮಾತ್ರ ಕೊನೆಯವರಿಗೂ ೭೦೦ಕ್ಕೆ ಹೆಚ್ಚು ಸಂಬಳವು ದೊರೆಯದಾತಿತ್ತು. ಈ ಅನ್ಯಾಯದ ಪಕ್ಷಪಾತವು ಕಾಂಗ್ರೆಸಿನ ಒಂದು ನಿರ್ಣಯದಲ್ಲಿ ಖಂಡಿಸಲ್ಪಟ್ಟಿತು. ದಕ್ಷಿಣ ಆಫ್ರಿಕೆಯಲ್ಲಿ ಹಿಂದೀಯರ ವಿರುದ್ಧ ನಡೆದಿರುವ ಅನ್ಯಾಯದ ವಿಷಯಕ್ಕೂ ಈ ಅಧಿವೇಶನದಲ್ಲಿ ಒಂದು ನಿರ್ಣವಾಯಿತು. ಉಳಿದ ನಿರ್ಣಯಗಳು ವಾಡಿಕೆಯಂತೆ ಆದವು.

**(೨೮) ಪುಣೆಯಲ್ಲಿ ಪ್ಲೇಗಪ್ರತಿಬಂಧಕ ಅತ್ಯಾಚಾರಗಳು (೧೮೯೭):—** ೧೮೯೭ ಇಸವಿಯ ಜಾನೆವರಿ ತಿಂಗಳಲ್ಲಿ ಮುಂಬಯಿಯಲ್ಲಿ ಪ್ಲೇಗದ ಬೇನೆಯು ಕಾಲಿಟ್ಟಿತು. ಮೊದಲಿಗೆ ಸರಕಾರದವರು ಅದನ್ನು ನಿಲ್ಲಿಸಲು ಅಷ್ಟೊಂದು ಉಪಾಯಯೋಜನೆಯನ್ನು ಮಾಡಲಿಲ್ಲ. ಮೆಲ್ಲ ಮೆಲ್ಲಗೆ ಅದು ಪುಣೆಗೂ ಬಂದು ಅಂಟಿಕೊಂಡಿತು. ಹಿಂದುಸ್ತಾನದಲ್ಲಿ ಪ್ಲೇಗವು ಹಬ್ಬಿಹೋದರೆ ಸಂಸರ್ಗದ ಅಂಜಿಕೆಯಿಂದ ಪರರಾಷ್ಟ್ರದವರು ಹಿಂದುಸ್ತಾನದೊಡನೆ ನಡೆಯುವ ವ್ಯಾಪಾರವನ್ನು ನಿಲ್ಲಿಸುವರೆಂಬ ಭಯದಿಂದ ವಿಲಾಯತ ಸರಕಾರದವರು ಹಿಂದುಸ್ತಾನ ಸರಕಾರದವರಿಗೆ ಏನಾದರೂ ಮಾಡಿ ಪ್ಲೇಗಿನ ಬೇನೆಯನ್ನು ಕೂಡಲೆ ನಿಲ್ಲಿಸಿರಿ ಎಂದು ಒತ್ತಾಯ ಪಡಿಸಹತ್ತಿದರು. ಇತ್ತ ಸರಕಾರದವರೂ ಕಾಯದೆಕೌನ್ಸಿಲ್ಲಿನಲ್ಲಿ ಒಂದು ಕಾಯದೆ ಪಾಸುಮಾಡಿಸಿಕೊಂಡು ಪ್ಲೇಗಿನ ಪ್ರತಿಬಂಧಕ್ಕಾಗಿ ಮನಸ ಬಂದಂತೆ ಬೇಕಾದ ಉಪಾಯಗಳನ್ನುಪಯೋಗಿಸುವ ಅಧಿಕಾರಗಳನ್ನು ಪಡೆದರು. ಪುಣೆಗಾಗಿ ರ್‍ಯಾಂಡರೆಂಬ ಪ್ಲೇಗ ಕಮೀಶನರರೂ ನೇಮಿಸಲ್ಪಟ್ಟರು. ಹೊರಗೆ ರೋಗವು ಹಬ್ಬಬಾರದೆನ್ನುವದಕ್ಕೆ ಅಲ್ಲಲ್ಲಿ ಕ್ವಾರಂಟಾಯಿನಗಳನ್ನು ಏರ್ಪಡಿಸಿದರು. ಪ್ರತಿರೋಗಿಗೂ ಸರಕಾರೀ ದವಾಖಾನೆಯಲ್ಲಿ ತಂದೇ ತೀರಬೇಕೆಂದು ಒತ್ತಾಯ ಪಡಿಸಿದರು. ರೋಗಿಗಳು ಬಹಳ ಬರಲಿಲ್ಲವಾದುದರಿಂದ ಜನರು ರೋಗಿಗಳನ್ನು ಬಚ್ಚಿಡುತ್ತಲಿರುವರೆಂಬ ನೆವದಿಂದ ಮನೆಗಳ ಝಡತಿ ಮಾಡಹತ್ತಿದರು. ಮುಂದೆ ಹೆಣಗಳನ್ನು ಜನರು ಮನೆಯಲ್ಲಿ ಬಚ್ಚಿಡುತ್ತಲಿರುವರೆಂಬ ನೆವದಿಂದ ಮನೆಗಳನ್ನೆಲ್ಲ ಸೋಲ್ಜರರು ಹೊಕ್ಕು ನೋಡಹತ್ತಿದರು. ಕೆಲವರು ಮನೆಯಲ್ಲಿಯ ಮಾಲುಮತ್ತೆಗೂ ಕೈಹಚ್ಚಿದರು. ಮುಂಬೈ ಇಲಾಖೆಗಳ ಎಲ್ಲ ಜಿಲ್ಲೆಗಳಲ್ಲಿಯೂ ಪ್ಲೇಗಪ್ರತಿಬಂಧಕ ಉಪಾಯಗಳ ಹಾವಳಿಯಾಗಿತ್ತು. ಪುಣೆಯಲ್ಲಿಯಂತೂ ಆ ಕಾಲಕ್ಕೆ ಲಷ್ಕರೀ ರಾಜ್ಯವೆ ನಡೆದಿತ್ತು. ಜನರಿಗೆ ಪ್ಲೇಗಿನ ಮರಣ ಬಂದರೆ ಒಳಿತು; ಆದರೆ ಈ ಸೋಲ್ಜರರ ಜುಲುಮಿನ ಆಳಿಕೆ ಬೇಡವೆಂದೆನಿಸಿತು. ಲೋಕಮಾನ್ಯ ಟಿಳಕರು ಜನರಿಗೆ ಧೈರ್ಯಕೊಡುತ್ತ, ಸ್ವತಂತ್ರವಾಗಿಯೆ ಒಂದು ಆಸ್ಪತ್ರಿಯನ್ನು ಪ್ರಾರಂಭಿಸಿ, ಜನರಿಗೆ ಯೋಗ್ಯ ಸಲಹೆಯನ್ನು ಕೊಡುತ್ತಲಿದ್ದರು; ಅಷ್ಟೆ ತೀವ್ರವಾಗಿ ಸರಕಾರೀ ಅಧಿಕಾರಿಗಳ ಅನ್ಯಾಯಗಳನ್ನು ಕೇಸರಿಯಲ್ಲಿ

ಟೀಕಿಸುತ್ತಿದ್ದರು. ಮೇ ತಿಂಗಳ ಕೊನೆಗೆ ಪ್ಲೇಗದ ಬೇನೆಯು ನಿಂತಿತು. ಆದರೆ ಮಳೆಯು ನಿಂತರೂ ಮರದನಿ ನಿಲ್ಲಲಿಲ್ಲವೆನ್ನುವಂತೆ ಪ್ಲೇಗು ನಿಂತರೂ ಜನರ ಮನಸ್ಸಿನಲ್ಲಿಯ ಪ್ರಜ್ವಲಿತವಾದ ಸಂತಾಪಾಗ್ನಿಯು ಆರಲಿಲ್ಲ. ತಾ|| ೨೨ ಜೂನ ರಾತ್ರಿ ರ್‍ಯಾಂಡ ಮತ್ತು ಕರ್ನಲ ಆಯರ್ಸ್ಟರು ಗವರ್ನರರ ಬಂಗ್ಲೆಯಲ್ಲಿ ಮಹಾರಾಣಿಯವರ ವಜ್ರ-ಮಹೋತ್ಸವವನ್ನು ತೀರಿಸಿ ಕೊಂಡು ಬರುವಾಗ ಯಾರೋ ಒಬ್ಬರು ಬಂದು ಅವರಿಬ್ಬರ ಮೇಲೂ ಪಿಸ್ತೂಲಿನಿಂದ ಗುಂಡು ಹಾರಿಸಿದರು; ಆಯರ್ಸ್ಟರು ಅಲ್ಲಿಯೆ ತೀರಿದರು, ರ್‍ಯಾಂಡರು ಆಸ್ಪತ್ರಿಯಲ್ಲಿ ಹನ್ನೊಂದು ದಿನಗಳ ನಂತರ ತೀರಿಕೊಂಡರು. ಖೂನಿ ಜನರನ್ನು ಹಿಡಿದುಕೊಟ್ಟವರಿಗೆ ೨೦,೦೦೦ ಸಾವಿರ ರೂಪಾಯಿ ಇನಾಮು ದೊರೆಯುವದೆಂದು ಸರಕಾರದವರು ಜಾಹೀರ ಪಡಿಸಿದರು. ಪುಣೆಯಲ್ಲಿಯೆ ಇರುವ ದ್ರುವಿಡ ಮನೆತನದ ಇಬ್ಬರು ಅಣ್ಣತಮ್ಮಂದಿರು ಕೊಟ್ಟ ಮಾಹಿತಿಯ ಮೇಲಿಂದ ದಾಮೋದರ ಚಾಫೇಕರನೆಂಬ ತರುಣನು ಹಿಡಿಯಲ್ಪಟ್ಟನು; ಮುಂದೆ ಚೌಕಶಿಯಾಗಿ ಅವನಿಗೆ ಫಾಶಿ ಶಿಕ್ಷೆಯಾಯಿತು. ಮುಂದೆ ಈ ದ್ರುವಿಡ ಬಂಧುಗಳೂ ೧೮೯೯ರಲ್ಲಿ ಪಿಸ್ತೂಲಿನಿಂದಲೆ ಕೊಲ್ಲಲ್ಪಟ್ಟರು. ಅವರ ಕೊಲೆಗಾಗಿ ಸಂಶಯದಿಂದ ಹಿಡಿಯಲ್ಪಟ್ಟ ವಾಸುದೇವ ಚಾಫೇಕರನು ಕಚೇರಿಯಲ್ಲಿಯೆ ಗುಂಡು ಹಾರಿಸಿದನು; ಮುಂದೆ ಅವನಿಗೂ ರಾನಡೆ ಎಂಬವನಿಗೂ ಬಾಳಕೃಷ್ಣ ಚಾಫೇಕರನೆಂಬವನಿಗೂ ಫಾಶಿ ಶಿಕ್ಷೆಯು ವಿಧಿಸಲ್ಪಟ್ಟು ಅವರೆಲ್ಲರು ಗಲ್ಲಿಗೇರಿಸಲ್ಪಟ್ಟರು. ರ್‍ಯಾಂಡರ ಕೊಲೆಯ ನಂತರ ಸರದಾರ ನಾತೂ ಬಂಧುಗಳು ಬೆಳಗಾವಿಗೆ ಒಯ್ದು ಇಡಲ್ಪಟ್ಟರು. ಕೊಲೆಯಾದ ಒಂದು ವಾರದಲ್ಲಿಯೆ ಲೋಕಮಾನ್ಯರ ಟಿಳಕರ ಮೇಲೆ ರಾಜದ್ರೋಹವನ್ನು ಪಸರಿಸಿದ ಆರೋಪದಿಂದ ಖಟಲೆಯಾಗಿ ಅದರಲ್ಲಿ ಅವರಿಗೆ ೧೮ ತಿಂಗಳ ಶಿಕ್ಷೆಯಾಯಿತು. ಕೇಸರಿಯ ೧೫ ಜೂನದ ಸಂಚಿಕೆಯಲ್ಲಿ 'ಭವಾನೀತಲವಾರ' ಎಂಬ ಸಹಿಯೊಡನೆ "ಶಿವಾಜಿಯ ಉದ್ಗಾರಗಳು" ಎಂಬ ಕವಿತೆಯು ಪ್ರಸಿದ್ಧವಾಗಿತ್ತು; ಆ ಕವಿತೆಯು ರಾಜದ್ರೋಹಾತ್ಮಕವಾಗಿತ್ತೆಂಬುದೆ ಟಿಳಕರ ಮೇಲೆ ಆರೋಪವು-ಲೋಕಮಾನ್ಯರಿಗೆ ಶಿಕ್ಷೆಯಾದದ್ದನ್ನು ಕೇಳಿ ಹಿಂದುಸ್ತಾನದಲ್ಲಿಯ ಎಲ್ಲ ಸುಶಿಕ್ಷಿತ ಸಮಾಜವೂ ಹಳಹಳಿಸಿತು; ಎಲ್ಲ ವರ್ತಮಾನಪತ್ರದವರು ಲೋಕಮಾನ್ಯರನ್ನು ಕುರಿತು ಸಹಾನುಭೂತಿ

ಪರವಾದ ಬರಹಗಳನ್ನು ಬರೆದರು. ಮರು ವರ್ಷದ ಕಾಂಗ್ರೆಸಿನಲ್ಲಿ ಸುರೇಂದ್ರನಾಥರು ತಮ್ಮ ಮಾತಿನಲ್ಲಿ ಹೀಗೆ ಹೇಳಿದರು: "ಪುಣೆಯಲ್ಲಿ ಪ್ಯೂನಿಟಿವ್ಹ ಪೋಲೀಸರನ್ನಿಟ್ಟದ್ದು ದೊಡ್ಡ ತಪ್ಪಾಯಿತೆಂದು ನಮ್ಮ ಅಭಿಪ್ರಾಯ. ಟಿಳಕರನ್ನೂ ಪುಣೆಯ ಉಳಿದ ಅನೇಕ ವೃತ್ತಪತ್ರಕಾರರನ್ನೂ ಸೆರೆಮನೆಗಟ್ಟಿದ್ದು ಅದಕ್ಕೂ ದೊಡ್ಡ ತಪ್ಪೆಂದು ನಮ್ಮ ಅಭಿಪ್ರಾಯ. ಟಿಳಕರಿಗಾಗಿ ನನ್ನ ಅಂತಃಕರಣವು ತಳಮಳಗೊಳ್ಳುತ್ತಿದೆ. ಅವರಿದ್ದ ಸೆರೆಮನೆಗೆ ನನ್ನ ಭಾವನೆಗಳು ಹೋಗಿ ಮುಟ್ಟಿವೆ. ಇಡೀ ರಾಷ್ಟ್ರವೆ ಅವರಿಗಾಗಿ ಕಂಬನಿಗಳನ್ನು ಕರೆಯುತ್ತಲಿದೆ."

(೨೯) **ಅಮರಾವತಿಯಲ್ಲಿ ಹದಿಮೂರನೆಯ ಕೂಟವು** (೧೮೯೭):— ಕಾಂಗ್ರೆಸಿನ ಹದಿಮೂರನೆಯ ಅಧಿವೇಶನವು ಅಮರಾವತಿಯಲ್ಲಿ ತಾ॥ ೨೭ ಡಿಸೆಂಬರ ೧೮೯೭ ದಿನ ಕೂಡಿತು. ಸ್ವಾಗತಾಧ್ಯಕ್ಷರಾದ ಖಾಪರ್ಡೆಯವರು ಆ ವರುಷ ದೇಶಕ್ಕೆ ಒದಗಿದ ಸಂಕಟಪರಂಪರೆಯನ್ನು ಬಣ್ಣಿಸಿ ಹೇಳಿದರು:— "ಈ ವರುಷವು ಹಿಂದುಸ್ತಾನಕ್ಕೆ ಕಷ್ಟಪರಂಪರೆಯನ್ನು ತಂದುಕೊಟ್ಟಿದೆ. ದೇಶದಲ್ಲೆಲ್ಲ ಬರಗಾಲವಾಯಿತು. ಅನೇಕ ಶತಮಾನಗಳಲ್ಲಿ ಆಗದಷ್ಟು ಪ್ಲೇಗಿನ ಉಪದ್ರವವಾಯಿತು; ಸರಕಾರದವರು ಗಡಿನಾಡಿನಲ್ಲಿ ಹೂಡಿದ ನಿರರ್ಥಕ ಯುದ್ಧಗಳಿಂದ ಸರಕಾರದ ತಿಜೋರಿಯು ಬರಿದಾಯಿತು. ನೆರೆಹಾವಳಿಯೂ ಕೇಡು ತಂದಿತ್ತು; ಅಗ್ನಿನಾರಾಯಣನೂ ಅಲ್ಲಲ್ಲಿ ತನ್ನ ಪ್ರತಾಪವನ್ನು ತೋರಿಸಿದ; ಭೂಕಂಪದಿಂದಲೂ ಅನೇಕ ಜನರು ಅಸಹಾಯರಾದರು. ಜನರೂ ಸರಕಾರದವರೂ ಇವೆಲ್ಲ ಸಂಕಟಗಳನ್ನು ಎದುರಿಸುತ್ತಿರುವಾಗ ಪುಣೆಯಲ್ಲಿ ಆದ ಉದ್ವೇಗಜನಕ ಕೊಲೆಗಳು ದೊಡ್ಡದೊಂದು ಕಾರಸ್ಥಾನದ ಪರಿಣಾಮವೆಂದು ಎಲ್ಲ ಕಡೆಗೂ ಕೂಗಾಟವೆದ್ದಿತು; ಖಟಲೆಗಳಾದವು, ಹದ್ದುಪಾರುಗಳಾದವು. ಇಡೀ ವರ್ಷ ದುಃಖದ ಕಗ್ಗತ್ತಲೆಯಲ್ಲಿ ಒಂದೇ ಸಮಾಧಾನದ ಕಿರಣವೆಂದರೆ, ೧೮೫೮ ರಲ್ಲಿ ಜನರ ಹಕ್ಕುಗಳನ್ನು ಕಾಣಿಸಿ ಜಾಹೀರನಾಮೆಯನ್ನು ಹೊರಡಿಸಿದ ಮಹಾರಾಜ್ಞಿಯ ಮಹೋತ್ಸವವು". ಸ್ವಾಗತಾಧ್ಯಕ್ಷರ ಭಾಷಣವಾದ ನಂತರ ಸರ ಶಂಕರನಾಯರರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಅವರು ತಮ್ಮ ಮಾತಿನಲ್ಲಿ ಬ್ರಿಟಿಶರಿಂದ ಹಿಂದುಸ್ತಾನಕ್ಕೆ ಆದ ಲಾಭಗಳನ್ನು ಹೊಗಳಿ ಇಂಗ್ಲಂಡದ

ಆಶ್ರಯದಲ್ಲಿಯೆ ಹಿಂದುಸ್ತಾನದ ಪ್ರಜೆಗಳಿಗೆ ಹೆಚ್ಚಿನ ಹಕ್ಕುಗಳು ದೊರೆಯುವದು ಅವಶ್ಯವಿದೆಯೆಂದು ಹೇಳಿದರು; ರಾಜಕೀಯ ಸುಧಾರಣೆಯಷ್ಟೆ ಸಾಮಾಜಿಕ ಸುಧಾರಣೆಯೂ ಅವಶ್ಯವಾಗಿರುವದೆಂದು ಅಭಿಪ್ರಾಯಪಟ್ಟರು ದೇಶದಲ್ಲಿಯ ಬರಗಾಲವನ್ನುಲ್ಲೇಖಿಸಿ ಅವರು ಹೀಗೆ ಹೇಳಿದರು: "ಒಂದೇ ವರ್ಷದಲ್ಲಿ ಸ್ವಲ್ಪುಮಟ್ಟಿಗಾದರೂ ಬೆಳೆಯು ಬರದೆ ಹೋದರೆ ಬರಗಾಲವು ಬಂದುಬಿಡುತ್ತದೆ. ಬರಗಾಲವೆಂದರೆ ಆಗಾಗ್ಗೆ ತಪ್ಪದೆ ಬರುವ ಮಾತಾಗಿದೆ ಹೋಗಿದೆ. ೧೮೭೭ರಲ್ಲಿಯಂತೆಯೆ ಈ ವರುಷವಾದರೂ ಬರಗಾಲದಿಂದ ಬಹಳೇ ಪ್ರಾಣಹಾನಿಯಾಯಿತು. ಬರಗಾಲವು ಬಂದಹಾಗೆಲ್ಲ ರೈತರ ಸತ್ವವೆ ಕುಂದಿಹೋಗುತ್ತದೆ. ಈ ಗತಿಯು ಕಡೆಯವರೆಗೂ ಹೀಗೆಯೆ ನಡೆಯಬೇಕೆ? ಮುಂದೆ ಬರಗಾಲವು ಬರದಂತೆ ಏನಾದರೂ ಯೋಜನೆಯನ್ನು ಮಾಡಿರುವಿರೋ ಹೇಗೆಂಬುದನ್ನು ಸರಕಾರಕ್ಕೆ ಕೇಳುವ ಅಧಿಕಾರವೂ ನಮಗೆ ಇರಬಾರದೇ?" ಸರಕಾರದವರು ಪ್ಲೇಗಿನ ಹಾವಳಿಯ ಕಾಲದಲ್ಲಿ ಯೋಚಿಸಿದ ಕಡುತರ ಉಪಾಯಗಳನ್ನು ಅವರು ಟೀಕಿಸಿದರು. ಹಿಂದುಸ್ತಾನದ ಭವಿಷ್ಯತ್ತಿನ ವಿಷಯದಲ್ಲಿ ಅವರು ಆಶಾವಾದಿಗಳಾಗಿದ್ದರು. "ನಾವು ಗ್ರೇಟ ಬ್ರಿಟನನ್ನು ನಂಬಿಕೊಂಡಿರುವವರೆಗೆ ನಮಗೆ ನಿರಾಶೆ ಬೇಡ; ಆದರೆ ನಮ್ಮ ಕರ್ತವ್ಯವನ್ನು ನಾವು ಮಾಡಿಯೆ ತೀರಬೇಕು" ಎಂದು ಅವರು ಪ್ರತಿಪಾದಿಸಿದರು. ಸರಕಾರದವರು ಪ್ರಾರಂಭಿಸಿದ ದಬ್ಬಾಳಿಕೆಯನ್ನು ನಿಷೇಧಿಸುವ ಹೊರತು ಈ ಕಾಂಗ್ರೆಸಿನಲ್ಲಿ ಹೊಸತರದ ನಿರ್ಣಯಗಳೇನೂ ಆಗಲಿಲ್ಲ.

ಈ ಕಾಂಗ್ರೆಸ್ಸಿನಲ್ಲಿ ಸರಕಾರದವರ ದಬ್ಬಾಳಿಕೆಯ ಕೃತಿಗಳನ್ನು ನಿಷೇಧಿಸುವ ಠರಾವುಗಳೆ ಮೊದಲು ಮಂಜೂರು ಮಾಡಲ್ಪಟ್ಟವು. ರಾಜದ್ರೋಹದ ಪ್ರಚಾರವನ್ನು ತಡೆದು ಹಿಡಿಯುವದಕ್ಕಾಗಿ ಪಿನಲ್‌ಕೋಡಿನಲ್ಲಿಯೂ, ಕ್ರಿಮಿನಲ್ ಪ್ರೋಸಿಜರ ಕೋಡಿನಲ್ಲಿಯೂ ಮಾಡಿದ ಬದಲಾವಣೆಗಳನ್ನು ಕಾಂಗ್ರೆಸ್ಸಿನವರು ನಿಷೇಧಿಸಿದರು. ಕೆಲಕೆಲವು ಪ್ರಾಂತಗಳಲ್ಲಿ ವೃತ್ತಪತ್ರಗಳ ಮೇಲೆ ಕಣ್ಣಿಡುವದಕ್ಕಾಗಿ ಕೆಲವು ಗುಪ್ತಮಂಡಲಗಳನ್ನು ನೇಮಿಸಿದ ವಿಷಯಕ್ಕೆ ಅಸಮಾಧಾನವು ವ್ಯಕ್ತಪಡಿಸಲ್ಪಟ್ಟಿತ್ತು. ಮತ್ತು ಆಳರಸರ ಕೈಯಲ್ಲಿ ಬೇಕಾದ ಮನುಷ್ಯನನ್ನು ಬೇಕಾದಲ್ಲಿಗೊಯ್ಯುವ ಅಧಿಕಾರ

ಗಳನ್ನೀಯುವ ಹಳೆ ರೆಗ್ಯುಲೇಶನಗಳನ್ನು ರದ್ದುಪಡಿಸಬೇಕೆಂದು ಸೂಚಿಸಲ್ಪಟ್ಟಿತು. ಲಾರ್ಡ ಕರ್ಝನ್ನರಿಗೆ ಸ್ವಾಗತವನ್ನೀಯುವ ಠರಾವು ಪಾಸು ಮಾಡಲ್ಪಟ್ಟಿತು. ಕಲಕತ್ತಾ ಮುನ್ಸಿಪಾಲ್ಟಿಯ ಹಕ್ಕುಗಳನ್ನು ಮರ್ಯಾದಿತ ಮಾಡುವ ಬಂಗಾಲ ಕಾಯದೆ ಕೌನ್ಸಿಲಿನಲ್ಲಿ ಚರ್ಚೆಗೆ ಬಂದ ಠರಾವು ನಿಷೇಧಿಸಲ್ಪಟ್ಟಿತು. ಮಾಮೂಲಿನಂತೆ ಶಿಕ್ಷಣ ದೊಡ್ಡ ಹುದ್ದೆಗಳು ಮುಂತಾದ ವಿಷಯಗಳನ್ನು ಕುರಿತು ಠರಾವುಗಳು ಪಾಸಾದವು.

**(೩೦) ಲಖನೌದಲ್ಲಿ ಕಾಂಗ್ರೆಸಿನ ೧೫ನೆಯ ಅಧಿವೇಶನವು**

೧೮೯೯ನೆಯ ಇಸ್ವಿಯ ಡಿಸೆಂಬರ ೨೭ನೆ ತಾರೀಖಿನ ದಿನ ಪ್ರಾರಂಭವಾಯಿತು. ಅದೇ ಸರಕಾರಿ ನೌಕರಿಯಿಂದ ನಿವೃತ್ತರಾದ ರಮೇಶಚಂದ್ರ ದತ್ತರು ಅಧ್ಯಕ್ಷರಾಗಿದ್ದರು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಮೊದಲು ಕಾಂಗ್ರೆಸ್ಸಿನ ಗುರಿಯನ್ನು ಚರ್ಚಿಸಿದರು. ಕಾಂಗ್ರೆಸ್ಸಿನಿಂದ ಸರಕಾರಕ್ಕೆ ಯಾವ ವಿಧವಾದ ಸಹಾಯವಾಗುತ್ತಿದೆಂಬದನ್ನು ವಿವೇಚಿಸುತ್ತ ಅವರು ಹೀಗೆ ಹೇಳಿದರು:" ಕಾಂಗ್ರೆಸ್ಸಿನಿಂದ ಸರಕಾರಕ್ಕೆ ಆಗುವ ಸೇವೆಯ ಮಹತ್ವವು ಇಂತಿಷ್ಟೆಯೆಂದು ಹೇಳಲಿಕ್ಕೆ ಬರುವಂತಿಲ್ಲ. ನಮ್ಮ ಮನಸ್ಸಿನಲ್ಲಿಯ ಭಾವನೆಗಳನ್ನು ತಿಳಿದುಕೊಳ್ಳುವದರಿಂದ ಆಡಳಿತೆಗೆ ದೊಡ್ಡ ಲಾಭವೆ ಇದೆ."

೧೮೯೮ರಲ್ಲಿ ರಾಜದ್ರೋಹಗಳನ್ನು ತಡೆದು ಹಿಡಿಯುವದಕ್ಕಾಗಿ ಪಾಸು ಮಾಡಿದ ಕಾಯದೆಗಳ ನಿರರ್ಥಕತೆಯನ್ನು ಅವರು ವಿವೇಚಿಸಿದರು. ಕಲಕತ್ತಾ ಮ್ಯುನ್ಸಿಪಾಲ್ಟಿಯ ಅಧಿಕಾರಗಳನ್ನು ಕಿರಿದು ಮಾಡುವ ಕಾಯದೆಯನ್ನೂ ಅವರು ಖಂಡಿಸಿದರು. ಪಂಜಾಬ ಪ್ರಾಂತದಲ್ಲಿ ಭೂಮಿಯ ಮಾಲಕರು ಭೂಮಿಯನ್ನು ಪರಾಯಿ ಮಾಡುವದಕ್ಕೆ ತೊಂದರೆಯನ್ನು ತರುವ ಹೊಸ ಕಾಯದೆಯನ್ನು ಅವರು ಖಂಡಿಸಿದರು. ಗ್ರಾಮಸಂಸ್ಥೆಗಳ ಪುನರುಜ್ಜೀವನೆಯನ್ನು ಮಾಡಬೇಕೆಂದುಪದೇಶಿಸಿದರು. ಮ್ಯುನ್ಸಿಪಾಲ್ಟಿ ಲೋಕಲ್‌ಬೋರ್ಡ್ಸ ಪ್ರಾಂತಿಕ ಕೌನ್ಸಿಲುಗಳು ಜನಮತದ ಅಧಿಕಾರಕ್ಕೊಳಪಟ್ಟಿರಬೇಕೆಂದು ಪ್ರತಿಪಾದಿಸಿದರು. ಪ್ರಾಂತಿಕ ಕಾರ್ಯಕಾರೀ ಮಂಡಳದಲ್ಲಿಯೂ, ಹಿಂದುಸ್ತಾನ ಸರಕಾರದ ಕಾರ್ಯಕಾರೀ ಮಂಡಳದಲ್ಲಿಯೂ, ಒಬ್ಬೊಬ್ಬನನಾದರು ಹಿಂದೀ ಸಭಾಸದರನ್ನು ನೇಮಿಸಿಕೊಳ್ಳಬೇಕೆಂದು ಆಗ್ರಹದಿಂದ ಹೇಳಿದರು. ಜನರಿಗೆ ಸ್ವರಾಜ್ಯದ ಹಕ್ಕುಗಳನ್ನು

ಕೊಡದೆ ಬರಗಾಲದಿಂದುಂಟಾಗುವ ಕೇಡನ್ನು ತಡೆಯುವದಾಗಲೀ, ಜನಾಂಗದಲ್ಲಿ ಸಮೃದ್ಧಿಯನ್ನುಂಟು ಮಾಡುವದಾಗಲಿ, ಸಾಧ್ಯವಿಲ್ಲ ವೆಂದು ಅವರು ಹೇಳಿದರು. "ಆದುದರಿಂದಲೆ ಈ ಜಾಣತನದ ಮಾರ್ಗ ವನ್ನು ಅನುಸರಿಸಿರೆಂದು ಸರಕಾರದ ಹಳೆಯ ಪ್ರಾಮಾಣಿಕ ಸೇವಾ ನಿವೃತ್ತನಾದ ಸೇವಕನೆಂದು ಹೇಳುವದು ನನ್ನ ಕರ್ತವ್ಯವೆಂದು ತಿಳಿದು ನಾನು ಈ ಮಾತುಗಳನ್ನು ಆಡಿದ್ದೇನೆ." ಎಂದು ಹೇಳಿ ತಮ್ಮ ಮಾತನ್ನು ಮುಗಿಸಿದರು.

ಈ ಕಾಂಗ್ರೆಸ್ಸಿನಲ್ಲಿ ಪಾಸಾದ ಠರಾವುಗಳಲ್ಲಿ ಹೊಸ ಠರಾವೆಂದರೆ ವಿದ್ಯಾಖಾತೆಯ ಡಾಯರೆಕ್ಟರರ ಪರವಾನಿಗೆಯ ಹೊರ್ತು ಶಾಲೆಯ ಶಿಕ್ಷ ಕರೂ ವಿದ್ಯಾರ್ಥಿಗಳೂ ಯಾವ ರಾಜಕೀಯ ಚಳವಳಿಯಲ್ಲಿಯೂ, ಭಾಗ ವಹಿಸಕೂಡದು, ಯಾವ ಸಭೆಗೂ ಹೋಗಕೂಡದು, ಎಂದು ಮಾಡಿದ ನಿಯಮವನ್ನು ಕಾಂಗ್ರೆಸ್ಸಿನವರು ಈ ಅಧಿವೇಶನದಲ್ಲಿ ನಿಷೇಧಿಸಿದರು. ಇದರ ಹೊರ್ತು ಹೊಸ ತರದ ಠರಾವುಗಳೇನೂ ಈ ಅಧಿವೇಶನದಲ್ಲಿಯಾಗ ಲಿಲ್ಲ.

(೩೧) **ಲಾಹೋರಿನಲ್ಲಿ ೧೫ನೆಯ ಅಧಿವೇಶನವು:**— ಕಾಂಗ್ರೆ ಸಿನ ೧೫ನೆಯ ಅಧಿವೇಶನವು ಲಾಹೋರಿನಲ್ಲಿ ಡಿಶಂಬರ ೨೭ನೆ ತಾರೀಖಿನ ದಿನ ಪ್ರಾರಂಭವಾಯಿತು. ಒಟ್ಟಿನಲ್ಲಿ ೫೬೭ ಪ್ರತಿನಿಧಿಗಳು ಬಂದಿದ್ದರು, ಆ ಮೊದಲೆ ಮುಂಬೈಯ ಹಾಯಕೋರ್ಟಿನ ಜಜ್‌ರೆಂದು ನೇಮಿಸಲ್ಪಟ್ಟ ಸರ ನಾರಾಯಣ ಚಂದಾವರಕರರು ಅಧ್ಯಕ್ಷರಾಗಿದ್ದರು. ೧೮೯೯ರಲ್ಲೊದ ಗಿದ ಹಿಂದುಸ್ಥಾನದಲ್ಲಿಯ ಬರಗಾಲದ ವಿಷಯಕ್ಕೆ ಅವರು ವಿಶೇಷವಾಗಿ ಮಾತನಾಡಿದರು. ಲಾರ್ಡಕರ್ಝನ್ನರನ್ನು ಅವರು ವಿಶೇಷವಾಗಿ ಹೊಗಳಿ ದರು. "ಲಾರ್ಡಕರ್ಝನ್ನರು ಹೋದ ಹೋದಲ್ಲೆಲ್ಲ ಜನರು ಅವರಿಗೆ ಒಳ್ಳೆ ಸ್ವಾಗತವನ್ನು ಕೊಡುತ್ತಲಿರುವರು. ಲಾರ್ಡಕರ್ಝನ್ನರು ಜನರ ಅಂತಃಕರಣವನ್ನು ತಮ್ಮ ವಶಮಾಡಿಕೊಂಡಿರುವರು." ಒಟ್ಟಿಗೆ ಚಂದಾವ ರಕರರ ಭಾಷಣದಲ್ಲಿ ಸರಕಾರದ ವಿಷಯದಲ್ಲಿ ಅವರಿಗೆ ಇರುವ ಪಕ್ಷಪಾತವು ಕಂಡುಬರುವಂತಿತ್ತು. ಸರಕಾರಿ ನೋಕರನು ಸರಕಾರದ ವಿಷಯದಲ್ಲಿ ನಿಷ್ಠು ರವಾದ ಮಾತುಗಳನ್ನಾಡುವದು ಹೇಗೆ ಸಾಧ್ಯವು ?

ಮೊದಲಿನ ಅಧಿವೇಶನಗಳಂತೆ ಈ ವರ್ಷವೂ ದೊಡ್ಡ ಹುದ್ದೆಗಳನ್ನು ಹಿಂದೀ ಜನರಿಗೆ ಕೊಡಿರೆಂದು ಬೇಡಿಕೊಳ್ಳುವ ಠರಾವು ಪಾಸಾಯಿತು. ಸರಕಾರದ ಬೇರೆ ಬೇರೆ ಖಾತೆಗಳ ನೌಕರರ ಸಂಖ್ಯೆಯನ್ನು ನೋಡಿದರೆ ಹಿಂದೀ ಜನರಿಗೆಷ್ಟು ಸ್ವಲ್ಪ ಅಧಿಕಾರಸ್ಥಳಗಳು ಆದುವರೆಗೆ ಸಿಕ್ಕಿದ್ದವೆಂಬು ದನ್ನು ಸುರೇಂದ್ರನಾಥ ಬಾನರ್ಜಿಯವರು ವಿಶದವಾಗಿ ಹೇಳಿದರು. ಆಡ ವಿಯ ಖಾತೆಯಲ್ಲಿ ೨೪ರಲ್ಲಿ ೨, ಅಫೂ ಖಾತೆಯಲ್ಲಿ ೭೭ರಲ್ಲಿ ಲ, ಕಸ್ಟಮ್ಸ್ ಖಾತೆಯಲ್ಲಿ ೩೩ರಲ್ಲಿ ೨, ತಾರ ಖಾತೆಯಲ್ಲಿ ೨೯ ರಲ್ಲಿ ೪, ಪೋಲಿಸ ಖಾತೆ ಯಲ್ಲಿ ೧೦೨ರಲ್ಲಿ ೫, ಇಷ್ಟೇ ದೊಡ್ಡ ಹುದ್ದೆಗಳು ಹಿಂದೀ ಜನರ ಪಾಲಿಗೆ ಬಂದಿದ್ದವು. ಸರ್ವೆ ಖಾತೆಯಲ್ಲಿಯಾಗಲೀ, ಜೇಲ ಖಾತೆಯಲ್ಲಿಯಾಗಲೀ, ದೊಡ್ಡ ಹುದ್ದೆಗಳಿಗೆ ಒಬ್ಬ ಹಿಂದೀ ಮನುಷ್ಯನೂ ನೇಮಿಸಲ್ಪಟ್ಟಿರಲಿಲ್ಲ. ಈ ವಿಷಯಕ್ಕೆ ಮಾತನಾಡುವಾಗ ಸುರೇಂದ್ರನಾಥ ಬಾನರ್ಜಿಯವರು ಮೊಗಲರ ಆಡಳತೆಯ ಧೋರಣವನ್ನೂ ಇಂಗ್ಲಿಷರ ಧೋರಣವನ್ನೂ ಹೋಲಿಸಿದರು. ಅಕಬರನ ಆಜ್ಞನೊಡನೆ ಹೋರಾಡಿದವರ ಮೊಮ್ಮಕ್ಕಳೆ ಅಕಬರನ ಸೇನಾಪತಿಗಳಾದರು, ಅವನ ರಾಜ್ಯದಲ್ಲಿ ಗವ್ಹರ್ನರರಾದರು, ಅವನ ವಿಶ್ವಾಸದ ಸಲಹೆಗಾರರಾದರು. ಮೊಗಲ ಅರಸರು ಹಿಂದೀ ಜನರಲ್ಲಿ ವಿಶ್ವಾಸವನ್ನಿಡುತ್ತಿದ್ದರು. ಇಂಗ್ಲಿಷ ಆಳರಸರು ಮಾತ್ರ ಹಿಂದೀ ಜನರಲ್ಲಿ ವಿಶ್ವಾಸವನ್ನಿಡುವದಿಲ್ಲ. ಕಲಕತ್ತಾ ಯುನಿವ್ಹರ್ಸಿಟಿಗೆ ಪದವೀಧರರ ಪರ ವಾಗಿ ಕೆಲವು ಪ್ರತಿನಿಧಿಗಳನ್ನು ಆರಿಸುವ ಪದ್ಧತಿಯು ನಿಲ್ಲಿಸಲ್ಪಟ್ಟ ಮಾತು, ಅದೇ ರೀತಿ ರೂರಕಿಯಲ್ಲಿಯ ಕೂಪರ್ಸ್ ಹಿಲ್ ಕಾಲೇಜಿಗೆ ಇಬ್ಬರೇ ಹಿಂದೀ ವಿದ್ಯಾರ್ಥಿಗಳು ಬರಬಹುದೆಂಬ ನಿರ್ಬಂಧವೂ, ನಿಷೇಧಿಸಲಾಯಿತು. ಮೆಹಥಾ, ಬಾನರ್ಜಿ, ಅನಂತಾಚಾರ್ಲು, ಮುಧೋಳಕರ, ಸಯಾನಿ ಹರಕಿಶ ನಲಾಲ, ಮುಂತಾದವರದೊಂದು ಶಿಷ್ಟಮಂಡಳವು ಹಿಂದೀ ಜನರ ದುಃಖ ಗಳನ್ನು ತೋಡಿಕೊಳ್ಳುವದಕ್ಕಾಗಿ ವ್ಹಾಯಿಸರಾಯರನ್ನು ಭೆಟ್ಟಿಯಾಗಬೇ ಕೆಂದು ಗೊತ್ತಾಯಿತು. ಉಳಿದ ಠರಾವುಗಳು ವಾಡಿಕೆಯಂತೆಯಾದವು.

**(೩೨) ಕಲಕತ್ತೆಯಲ್ಲಿ ೧೭ನೆಯ ಅಧಿವೇಶನವು:—** ಕಲಕತ್ತೆ ಯಲ್ಲಿ ಕೂಡಿದ ಅಧಿವೇಶನಕ್ಕೆ ೮೯೬ ಪ್ರತಿನಿಧಿಗಳು ಬಂದಿದ್ದರು. ಈ ಅಧಿ ವೇಶನದ ಅಧ್ಯಕ್ಷರು ದಿನ್ಶಾ ಎ ದಲ್ಜಿವಾಚಾ ಇದ್ದರು. ಅವರು ತಮ್ಮ

ಭಾಷಣದ ಪ್ರಾರಂಭದಲ್ಲಿ ಮುಂಬೈ ಸರಕಾರದವರು ಬರಗಾಲದ ವಿಷಯದಲ್ಲಿ ತೋರಿಸಿದ ಅನಾಸ್ಥೆಯನ್ನು ತೀವ್ರವಾಗಿ ಖಂಡಿಸಿದರು. ಸರಕಾರದವರು ರೈತರಿಂದ ಸಲ್ಲಬೇಕಾದ ತೀರ್ವೆಯ ಹಣವನ್ನು ಮೇಲಿಂದ ಮೇಲೆ ಹೆಚ್ಚಿಸಿದ್ದರಿಂದಲೂ ಈ ತರದ ಬರಗಾಲಗಳು ಮತ್ತೆ ಮತ್ತೆ ಆಗಲಿಕ್ಕೆ ಕಾರಣವಾಗಿದೆಯೆಂದು ಅವರು ಹೇಳಿದರು. ಇದೂ ಅಲ್ಲದೆ ನೀರಿನ ಕಾವಲಿಗಳನ್ನು ಹೆಚ್ಚು ಮಾಡುವದು, ಶೇತ್ಕಿ ಬ್ಯಾಂಕುಗಳನ್ನು ಸ್ಥಾಪಿಸುವದು, ಬರಗಾಲವು ಬಂದಾಗ, ಉಪಯೋಗಕ್ಕಾಗಿ ಧಾನ್ಯವನ್ನು ಸಂಗ್ರಹಿಸಿಡುವದೂ, ಹಳ್ಳಿಗರಿಗೆ ಶಿಕ್ಷಣವನ್ನು ಕೊಡುವದು, ಇವೆಲ್ಲ ಉಪಾಯಗಳನ್ನು ಅವರು ಸೂಚಿಸಿದರು. ರೈತರ ಬಡತನವು ಎಷ್ಟು ಹೆಚ್ಚಾಗಿದೆಂಬದನ್ನು ಸಾಧಾರವಾಗಿ ವಿವೇಚಿಸಿದರು. ಡ್ಯೂಕ ಆಫ್ ಆರ್ಗಾಯಿಲರು ಹೇಳಿದ ಹಿಂದುಸ್ಥಾನದಂತಹ ಬಡತನವು ಯುರೋಪದ ಯಾವ ದೇಶದಲ್ಲಿಯೂ ಕಂಡುಬರುವದಿಲ್ಲವೆಂಬ ಮಾತಿನ ನೆನಪು ಮಾಡಿಕೊಟ್ಟರು. ದೇಶದಿಂದ ಪರದೇಶಕ್ಕೆ ಯುರೋಪಿಯನ್ ಅಧಿಕಾರಿಗಳ, ಪಗಾರ ಪೇನಶನ್, ಮುಂತಾದ ರೂಪಗಳಿಂದ ೩೦-೪೦ ಕೋಟಿ ರೂಪಾಯಿಗಳು ಹೊರಗೆ ಹೋಗುವವರೆಗೆ ಹಿಂದುಸ್ಥಾನಕ್ಕೆ ಸುಖವಿಲ್ಲವೆಂಬುದನ್ನು ತೋರಿಸಿಕೊಟ್ಟರು. ೧೮೬೦ರಿಂದ ಇದೂವರೆಗೆ ೬೨೪ ಕೋಟಿ ರೂಪಾಯಿಗಳು ದೇಶದಿಂದ ಪರದೇಶಕ್ಕೆ ಹೋದವು. ತನ್ನ ಅಧಿಕಾರಿ ವರ್ಗವನ್ನಾರಿಸಿಕೊಳ್ಳುವ ಅಧಿಕಾರವು ಹಿಂದುಸ್ಥಾನಕ್ಕಿರುವದಿಲ್ಲ. ಹಿಂದುಸ್ಥಾನದಲ್ಲಿ ಕೇವಲ ೧೬೩೦೦ ಯುರೋಪಿಯನ್ನ ಅಧಿಕಾರಿಗಳು ಇರುವರೆಂದು ಹೇಳುವರು; ಆದರೆ ಅಷ್ಟೇ ಅಧಿಕಾರಿಗಳಿಗೆ ೧೬ ಕೋಟಿ ರೂಪಾಯಿಗಳು ವೆಚ್ಚವಾಗುತ್ತವೆ. ”

ಸೈನಿಕ ಖಾತೆಯ ಖರ್ಚಿನ ವಿಷಯವಾಗಿ ಮಾತಾಡುವಾಗ ಹಿಂದುಸ್ಥಾನ ಸರಕಾರದವರೇ ಹಿಂದೀ ಸೈನ್ಯದ ಖರ್ಚು ಹಿಂದುಸ್ಥಾನ ಸಂರಕ್ಷಣೆಯ ಬಗ್ಗೆ ಮಾಡದೆ ಬ್ರಿಟಿಶ ಸಾಮ್ರಾಜ್ಯದ ಭದ್ರತೆಗಾಗಿಯೇ ಎಂದು ಹೇಳಿದ ಮಾತನ್ನು ಅವರು ಮುಂದೆ ಚಾಚಿದರು. ದೇಶದೊಳಗಿನ ಉದ್ಯೋಗ ಧಂದೆಗಳು ಯಾವ ರೀತಿಯಿಂದ ನಷ್ಟವಾಗಿವೆಂಬದನ್ನು ಅವರು ಬಿಚ್ಚಿ ಬಿಚ್ಚಿ ಹೇಳಿದರು. ಒಟ್ಟಿನಲ್ಲಿ ಹಿಂದುಸ್ಥಾನದ ಆರ್ಥಿಕಪ್ರಶ್ನೆಯ ವಿಷಯಕ್ಕೆ ವಾಚ್ಛಾರವರ ಭಾಷಣವು ಒಳ್ಳೆ ಉದ್ಬೋಧಕವಾಗಿತ್ತು.

ಈ ಅಧಿವೇಶನದಲ್ಲಿ ರೈತರ ಬಡತನವನ್ನು ಹಿಂಗಿಸುವದಕ್ಕಾಗಿ ಶೇತ್ಕಿ ಬ್ಯಾಂಕುಗಳು ಸ್ಥಾಪಿಸಲ್ಪಡಬೇಕೆಂದೂ, ಒಕ್ಕಲತನದ ಸುಧಾರಣೆಗಾಗಿ ರಶಿಯಾ, ಹಾಲಂಡ, ಬೆಲ್ಜಿಯಮ್‌ದಲ್ಲಿಯಂತೆಯೇ ಯೋಜನೆಯನ್ನು ಕೈಕೊಳ್ಳಬೇಕೆಂದೂ ದೇಶದಲ್ಲಿ ಒಕ್ಕಲತನದ ಮಾದರಿಯ ಫಾರ್ಮಗಳನ್ನು ಹೆಚ್ಚಿಸಲ್ಪಡಬೇಕೆಂದೂ ಠರಾವುಗಳು ಪಾಸಾದವು. ಉಳಿದ ಠರಾವುಗಳು ವಾಡಿಕೆಯಂತೆಯಾದವು.

(೩೩) **ಅಹಮ್ಮದಾಬಾದಿನಲ್ಲಿ ೧೮ನೆಯ ಅಧಿವೇಶನವು** (೧೯೦೨):— ಈ ಸಲ ಕಾಂಗ್ರೆಸ್ಸಿನ ಅಧಿವೇಶನವು ೧ನೇ ಜಾನೇವರಿದಿನ ಜರುಗುವ ದಿಲ್ಲಿಯ ದರಬಾರಕ್ಕೆ ಹೋಗುವವರ ಅನುಕೂಲತೆಗಾಗಿ ತಾ॥ ೨೩ನೆಯ ಡಿಶಂಬರ ದಿನ ಪ್ರಾರಂಭವಾಯಿತು. ಅಹಮ್ಮದಾಬಾದಿನಲ್ಲಿಯ ಕಾಂಗ್ರೆಸ್ಸಿನ ಅಧಿವೇಶನಕ್ಕೆ ಸುರೇಂದ್ರನಾಥ ಬಾನರ್ಜಿಯವರು ಅಧ್ಯಕ್ಷರಾಗಿದ್ದರು. ಅದೇ ವರ್ಷ ೭ನೇ ಎಡ್ವರ್ಡರು ಪಟ್ಟಕ್ಕೇರಿದ ನಿಮಿತ್ತದಿಂದ ಹಿಂದುಸ್ಥಾನ ದೇಶದಲ್ಲಿ ದೊಡ್ಡ ದರಬಾರವನ್ನು ಮಾಡಬೇಕೆಂದು ಲಾರ್ಡ ಕರ್ಝನರು ಜಾಹೀರ ಪಡಿಸಿದ್ದರು. ಬರೇ ದುಡ್ಡು ಹಾಳು ಮಾಡಿ ಒಂದು ದೊಡ್ಡ ತಮಾಷೆಯನ್ನು ಮಾಡಿದರೆ ಜನರಿಗೆ ಅದರಿಂದೇನೂ ಸಮಾಧಾನವಿಲ್ಲ, ಪ್ರಜೆಗಳಿಗೆ ಹಿತವಾಗುವಂತಹ ಮಾತುಗಳನ್ನು ಇಂತಹ ಶುಭಪ್ರಸಂಗಗಳಲ್ಲಿ ಜಾಹೀರ ಪಡಿಸಿದರೆ ಮಾತ್ರ ಪ್ರಜೆಗಳಿಗೆ ಸ್ವಲ್ಪಾದರೂ ಸಮಾಧಾನವನ್ನುಂಟು ಮಾಡಬಹುದು ಎಂದು ಸುರೇಂದ್ರನಾಥರು ತಮ್ಮ ಭಾಷಣದಲ್ಲಿ ಹೇಳಿದರು. ಅದೇ ಸುಮಾರಿಗೆ ಯುನಿವ್ಹರ್ಸಿಟಿ ಕಮೀಶನ್ನಿನ ರಿಪೋರ್ಟ ಪ್ರಸಿದ್ಧವಾಗಿತ್ತು.

ಕಾಲೇಜಿನ ಫೀಯ ಕನಿಷ್ಟ ಪ್ರಮಾಣವನ್ನು ಸಿಂಡಿಕೇಟದವರು ನಿಶ್ಚಯಿಸಬೇಕು; ಎರಡನೆಯ ತರಗತಿಯ ಕಾಲೇಜಗಳನ್ನು ರದ್ದುಪಡಿಸಬೇಕು. ಅಲ್ಲಲ್ಲಿ ಕಾಲೇಜಗಳಿಗೆ ಸೇರಿಸಲ್ಪಟ್ಟ ವಕೀಲ ಅಭ್ಯಾಸದ ವರ್ಗಗಳು ನಿಲ್ಲಿಸಲ್ಪಡಬೇಕು. ಇವೇ ಆ ಕಮೀಶನ್ನಿನ ಮುಖ್ಯಸೂಚನೆಗಳಿದ್ದವು. ಯುನಿವ್ಹರ್ಸಿಟಿಯ ಮೇಲೆ ಹೆಚ್ಚಿನ ಸರಕಾರಿ ನಿಯಂತ್ರಣಗಳು ಇರಬೇಕೆಂದು ಕಮಿಶನ್‌ದವರು ಸೂಚಿಸಿದ್ದರು. ಇವೆಲ್ಲ ಸೂಚನೆಗಳಲ್ಲಿ ಅಡಕವಾದ ಧೋರಣವನ್ನು, ಸುರೇಂದ್ರನಾಥರು ಬಲು ತೀಕ್ಷ್ಣವಾಗಿ

ಖಂಡಿಸಿದರು. ಪೋಲಿಸಖಾತೆಯ ವಿಷಯಕ್ಕೆ ಚರ್ಚೆಯನ್ನು ಮಾಡುವಾಗ ಇಡಿಯ ಹಿಂದುಸ್ತಾನದಲ್ಲಿ ೪೭೧ ಸುಪರಿಂಟೆಂಡೆಂಟ ಅಸಿಸ್ಟಂಟ ಸುಪ-ರಿಂಟೆಂಡೆಂಟರಲ್ಲಿ ಕೇವಲ ೨೫ ಜನರು ಹಿಂದೀ ಜನಾಂಗಕ್ಕೆ ಸೇರಿದವರೆಂದು ಹೇಳಿದರು. ಕಾಂಗ್ರೆಸ್ಸಿನ ಗುರಿಯನ್ನು ಚರ್ಚಿಸುವಾಗ ಅವರು ಈ ಮಾತುಗಳಿದ್ನಾಡಿದರು. " ನಾವಿನ್ನೂ ನಮ್ಮ ಗುರಿಯೆಡೆಗೆ ನಮ್ಮನ್ನೊ ಯ್ಯುವ ದಾರಿಯಲ್ಲಿಯೇ ಇರುವೆವು. ಆ ದಾರಿಯು ದೂರವಿದೆ. ನಿರ್ಜನ ವಾದ ಕಾಡಿನೊಳಗಿಂದಲೂ ಹೋಗಬೇಕಾಗುವದು. ಹಿಂದೀ ಜನಾಂಗದಲ್ಲಿ ಒಕ್ಕಟ್ಟನ್ನು ಮಾಡುವದು ಬ್ರಿಟಿಶ ಸಾಮ್ರಾಜ್ಯವನ್ನು ಧೃಡಪಡಿಸುವದು ಇವೆ ನಮ್ಮ ಗುರಿಗಳಾಗಿವೆ. ಸದ್ಯಕ್ಕೆ ಮಾತ್ರ ನಮ್ಮ ಪ್ರಗತಿಯು ಕುಂಠಿ ತವಾದಂತಾಗಿದೆ. ಕ್ಷಣಮಾತ್ರಕ್ಕೆ ನಾವು ಸೋತಂತಾಗಿರುವೆವು. ಆದರೆ ಕಾಂಗ್ರೆಸ್ ಜನರಿಗೆ ಸೋಲೆಂಬುದಿಲ್ಲ. " ನಾವು ಮಾಡುತ್ತಿರುವ ಪ್ರಯತ್ನ ಗಳು ನಿಷ್ಫಲವಾಗಿವೆ. ಆದುದರಿಂದ ನಾವು ನಡೆದ ದಾರಿಯನ್ನೆ ತುಳಿಯು ವದರಿಂದ ನಮಗೇನು ಫಲ ? ಎಂದು ಕೆಲವರು ಕೇಳುವರು.ಅವರಿಗೆ ನಾನು ಹೇಳುವದಿಷ್ಟೆ. ಸ್ವಾತಂತ್ರ್ಯದೇವಿಯು ಒಲಿಯಬೇಕಾದರೆ ನಾವು ಬಹಳ ಕಾಲದವರೆಗೆ ಆಕೆಯ ಸೇವೆಯನ್ನು ಮಾಡಬೇಕು.'' ಎಂದು ಮುಂತಾದ ಸಮಾಧಾನದ ಮಾತುಗಳನ್ನು ಹೇಳಿ ಸುರೇಂದ್ರನಾಥರು ತಮ್ಮ ಭಾಷಣ ವನ್ನು ಮುಗಿಸಿದರು.

ಈ ವರ್ಷದ ಅಧಿವೇಶನದಲ್ಲಿ ವಾಡಿಕೆಯ ನಿರ್ಣಯಗಳಲ್ಲದೆ ಯುನಿ ವ್ಹರ್ಸಿಟಿ ಕಮಿಶನಿನ ಸೂಚನೆಗಳನ್ನು ನಿಷೇಧಿಸುವ ನಿರ್ಣಯವೂ ಪಾಸಾ ಯಿತು.

**(೩೪) ಕಾಂಗ್ರೆಸಿನ ೧೯ನೆಯ ಅಧಿವೇಶನವು:-** ಕಾಂಗ್ರೆಸಿನ ೧೯ನೆಯ ಅಧಿವೇಶನವು ಮದ್ರಾಸಿನಲ್ಲಿ ೧೯೦೩ ಇಸ್ವಿಯ ಡಿಶಂಬರ ತಿಂಗಳ ೨೮, ೨೯, ೩೦ನೇ ತಾರೀಖಿನ ದಿನ ಜರುಗಿತು. ಅಧಿವೇಶನಕ್ಕೆ ೫೩೮ ಪ್ರತಿ ನಿಧಿಗಳು ಬಂದಿದ್ದರು. ಬಂಗಾಲದ ಪ್ರಸಿದ್ಧ ವಾಗ್ಮಿಗಳಾದ ಲಾಲಮೋ ಹನ ಘೋಷರು ಅಧ್ಯಕ್ಷರಾಗಿದ್ದರು. ಅವರು ತಮ್ಮ ಭಾಷಣದಲ್ಲಿ ದಿಲ್ಲಿ ದರಬಾರದ ತಮಾಷೆಯನ್ನು ನಿಷೇಧಿಸಿದರು. ನ್ಯಾಯದಾನದ ವಿಷಯದಲ್ಲಿ ಹಿಂದೀಯರ ಮತ್ತು ಯುರೋಪಿಯನ್ನರ ನಡುವಿನ ಅಂತರವನ್ನು ತೋರಿ

ಸುವ ಕೆಲವು ಉದಾಹರಣೆಗಳನ್ನು ಹೇಳಿದರು. “ಕೆಲವು ವರ್ಷಗಳ ಹಿಂದೆ ಹಿಂದೀ ಮನುಷ್ಯನೂ ಕೆಲವು ಇಂಗ್ಲಿಷ ಅಧಿಕಾರಿಗಳೂ ಇವರ ನಡುವೆ ಒಂದು ಬಡಿದಾಟವೆದ್ದಿತ್ತು. ಆ ವಿಷಯದಲ್ಲಿ ಇಂಗ್ಲಿಷ ಸೆಶನ್ಸ ಜಜ್ಜನು ತನಗೆ ನ್ಯಾಯವೆಂದು ಕಂಡ ತೀರ್ಪುಕೊಟ್ಟನು. ಕಲೆಕ್ಟರ ಕಮಿಶನರ ಮುಂತಾದವರೆಲ್ಲರೂ ಇಂಗ್ಲಿಷ ಅಧಿಕಾರಿಗಳನ್ನೆ ಬೆಂಬಲಿಸಿದರು. ಸೆಶನ್ಸ ಜಜ್ಜನಿಗೆ ಮಾತ್ರ ತನ್ನ ಪ್ರಾಮಾಣಿಕತನದ ಕಟು ಫಲವನುಣ್ಣಬೇಕಾ ಯಿತು. ಇನ್ನೊಂದು ಪ್ರಕರಣದಲ್ಲಿ ಕೆಲವು ಮುಸಲ್ಮಾನರು ತಮಗೆ ಪೋಲೀಸ ಸುಪರಿಂಟೆಂಡೆಂಟನು ವಿನಾಕಾರಣವಾಗಿ ಕಾಡಿದನೆಂದು ಜಿಲ್ಹಾ ಮಾಜಿಸ್ಟ್ರೇಟನಿಗೆ ದೂರು ಹೇಳಲು ಜಿಲ್ಹಾ ಮ್ಯಾಜಿಸ್ಟ್ರೇಟನು ಅವರ ದೂರುಗಳನ್ನು ಬಿಸಾಟಿ ಅವರ ಮೇಲೆಯೆ ಸುಳ್ಳು ದೂರು ತಂದರೆಂದು ಆರೋಪವನ್ನು ಮಾಡಿದನು. ಸೆಶನ್ಸ ಜಜ್ಜನು ಈ ಬಡಜನರ ವಿಷಯ ದಲ್ಲಿ ನ್ಯಾಯವನ್ನು ಮಾಡಹೋದನು. ಅದಕ್ಕೆ ಫಲವೆಂದು ಆ ಸೆಶನ್ಸ ಜ್ಜನು ಅನಾರೋಗ್ಯಕರವಾದ ಜಿಲ್ಹೆಗೆ ಕಳಿಸಲ್ಪಟ್ಟನು.” ಹಿಂದೀ ಆಳರ ಸರ ದಬ್ಬಾಳಿಕೆಯ ಧೋರಣವನ್ನು ಲಾಲಮೋಹನಘೋಷರು ಒಳ್ಳೇತೀವ್ರ ವಾಗಿ ಖಂಡಿಸಿದರು. ಈ ಅಧಿವೇಶನದಲ್ಲಿ ಹೊಸ ಯುನಿವ್ಹರ್ಸಿಟಿ ಬಿಲ್ಲು ಸರಕಾರಿ ಗುಪ್ತ ಸಂಗತಿಗಳ ವಿಷಯಕ್ಕೆ ಮುಂದೆ ಮಾಡಿದ ಬಿಲ್ಲು ನಿಷೇಧಿ ಸಲ್ಪಟ್ಟವು. ಬಂಗಾಲದಿಂದ ಡಾಕಾ, ಮೈಮನಸಿಂಗ, ಚಿತಗಾಂಗ, ಭಾಗಗಳನ್ನು ಒಡೆಯಬೇಕೆಂಬ ಮುಂದೆ ಬಂದ ಸೂಚನೆಯನ್ನು ನಿಷೇ ಧಿಸಲಾಯಿತು.

(೩೫) **ಮುಂಬೈಯಲ್ಲಿ ೨೦ನೆಯ ಅಧಿವೇಶನವು:—** ಮುಂಬೈ ಯಲ್ಲಿಯ ಅಧಿವೇಶನವು ೧೯೦೪ನೆಯ ಇಸ್ವಿಯ ಡಿಶಂಬರ ತಿಂಗಳ, **೨೬, ೨೭, ೨೮** ನೆಯ ತಾರೀಖಿನ ದಿವಸ ಜರುಗಿತು. ಅಧಿವೇಶನಕ್ಕೆ ಸರ ಹೆನ್ರಿ ಕಾಟನರು ಅಧ್ಯಕ್ಷರಾಗಿದ್ದರು. ಆಳರಸರ ದಬ್ಬಾಳಿಕೆಯ ಕಾಯದೆಗಳ ಮೂಲಕ ಜನರಲ್ಲಿ ಬಹಳೇ ಅಸಂತೋಷವಾಗಿದ್ದರ ಮೂಲಕ ಈ ಅಧಿ ವೇಶನಕ್ಕೆ ಒಳ್ಳೆ ಕಳೆಯೇರಿತ್ತು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಮೊದಲು ಕಾಂಗ್ರೆಸ್ಸಿನ ಉದ್ದೇಶವನ್ನು ಹೇಳಿ ಕಾಂಗ್ರೆಸ್ಸಿನ ಕಾರ್ಯವನ್ನು ಹೊಗಳಿ ದರು. “ನೀವು ದೇಶದಲ್ಲಿ ದೊಡ್ಡ ಶಕ್ತಿಯಾಗಿರುವಿರಿ, ನಿಮ್ಮ ಮುಖಂಡರಿಗೆ

ಕೀರ್ತಿ ಮಂದಿರದಲ್ಲಿ ಪ್ರಮುಖವಾದ ಸ್ಥಾನವು ದೊರಕಿದೆ. ಅವರಲ್ಲಿ ಎಲ್ಲಕ್ಕೂ ಮುಂದೆ ದಾದಾಭಾಯಿ ನವರೋಜಿಯವರಿರುವರು. ಮಹದೇವ ಗೋವಿಂದ ರಾನಡೆ, ಮನಮೋಹನ ಘೋಷ, ಇವರು ತಮ್ಮ ಜೀವನದ ಉಜ್ವಲ ಉದಾಹರಣೆಗಳನ್ನು ನಮ್ಮ ಮುಂದಿಟ್ಟು ಪರಲೋಕಕ್ಕೆ ತೆರಳಿರು ವರು. ಫಿರೋಜಶಹಾ ಮೆಹಥಾ, ಉಮೇಶಚಂದ್ರ ಬಾನರ್ಜಿ, ಶಂಕರನ್ನಾ ಯರ, ರಮೇಶಚಂದ್ರ ದತ್ತ, ಸುರೇಂದ್ರನಾಥ ಬಾನರ್ಜಿ, ವಾಚ್ಛಾ, ಗೋಪಾಲಕೃಷ್ಣ ಗೋಖಲೆ ಮುಂತಾದ ಮುಖಂಡರು ತಮ್ಮ ಕಾರ್ಯ ವನ್ನು ಅವ್ಯಾಹತವಾಗಿ ನಡೆಸಿರುವರು. ಇಂಗ್ಲಂಡದಲ್ಲಿ ಹ್ಯೂಮ ವೆಡರ ಬರ್ನರು ಮಾಡುತ್ತಿರುವ ಕಾರ್ಯವನ್ನು ಎಷ್ಟು ಹೊಗಳಿದರೂ ಕಡಿಮೆ.'' ಸರಕಾರೀ ದಬ್ಬಾಳಿಕೆಯನ್ನು ನಿಷೇಧಿಸಿ ಹಿಂದೀ ವಸಹಾತುಗಳಲ್ಲಿರುವ ಸ್ವರಾಜ್ಯವೇ ಹಿಂದುಸ್ತಾನದ ಗುರಿಯೆಂದು ಸರ ಹೆನ್ರಿ ಕಾಟನರು ಪ್ರತಿ ಪಾದಿಸಿದರು. ಕಾಯದೆಕೌನ್ಸಿಲಿನ ಸುಧಾರಣೆಯಾಗಬೇಕೆಂದು ಸೂಚಿಸಿ ದರು. ಬಂಗಾಲದೊಳಗಿನ ಕೆಲವು ಜಿಲ್ಹೆಗಳನ್ನು ಒಡೆದು ಇನ್ನೊಂದು ಪ್ರಾಂತಕ್ಕೆ ಜೋಡಿಸಬೇಕೆಂಬ ಸೂಚನೆಯನ್ನು ಅಲ್ಲಗಳೆದರು. ಕೊನೆಗೆ "ಎಲ್ಲರ ವಿಷಯದಲ್ಲಿಯೂ ಸಮಾಧಾನವೃತ್ತಿಯನ್ನು ತಾಳಿರಿ. ರಾಷ್ಟ್ರೀಯ ಮುಖಂಡರ ವಿಷಯಕ್ಕೆ ಆದರದ ಭಾವನೆಗಳನ್ನು ತೋರಿಸಿರಿ ಪರಸ್ಪರ ರೊಡನೆ ಬಂಧುಭಾವವು ಇರಲಿ! ಎಂದು ಹೇಳಿ ತಮ್ಮ ಮಾತನ್ನು ಮುಗಿಸಿ ದರು.'' ಈ ಅಧಿವೇಶನದಲ್ಲಿ ಪಾಸಾದ ಮಹತ್ವದ ನಿರ್ಣಯವೆಂದರೆ ವಂಗ ಭಂಗವನ್ನು ನಿಷೇಧಿಸಿದ ನಿರ್ಣಯವು. ವಾಡಿಕೆಯಂತೆ ಉಳಿದ ವಿಷಯ ಗಳಿಗೆ ಸಂಬಂಧಿಸಿದ ನಿರ್ಣಯಗಳಾದವು. ಸರಕಾರೀ ಹುದ್ದೆಗಳಿಗೆ ಸಂಬಂಧಿ ಸಿದ ನಿರ್ಣಯವನ್ನು ಮಂಡಿಸುವಾಗ ಸುರೇಂದ್ರನಾಥ ಬಾನರ್ಜಿಯವರು ಹಿಂದೀ ಜನರು ದೊಡ್ಡ ಹುದ್ದೆಗಳಿಗೆ ಅಯೋಗ್ಯರೆಂದು ಲಾರ್ಡ ಕರ್ಝನರು ಆಡಿದ ಮಾತುಗಳನ್ನು ತೀವ್ರವಾಗಿ ಖಂಡಿಸಿದರು.

## ಮೂರನೆಯ ಭಾಗ

### ವಂಗಭಂಗದ ಆಂದೋಲನವು (೧೯೦೫-೧೯೧೧)

(೩೭) **ವಂಗಭಂಗ** (೧೯೦೫):— ಬ್ರಿಟಿಶ ಸಾಮ್ರಾಜ್ಯವು ಹಿಂದುಸ್ಥಾನದಲ್ಲಿ ಸ್ಥಿರವಾದ ನಂತರ ಹಿಂದುಸ್ಥಾನದ ಪ್ರಾಂತಗಳಲ್ಲಿ ಆಡಳಿತೆಯ ದೃಷ್ಟಿಯಿಂದ ಬಂಗಾಲಪ್ರಾಂತವು ಬಹಳೇ ದೊಡ್ಡದಾಗುತ್ತದೆಂದು ಸರಕಾರಿ ಅಧಿಕಾರಿಗಳಿಗೆ ಅನಿಸುತ್ತಿತ್ತು. ಈ ಕಾರಣದಿಂದಲೆ ಸಿಲ್ಹೇಟ, ಕಚಾರ ಮತ್ತು ಗೋಪಾಲಪೂರ ಈ ಮೂರು ಬಂಗಾಲಿ ಜಿಲ್ಹೆಗಳನ್ನೊಳಗೊಂಡ, ಆಸಾಮು ಪ್ರಾಂತವು ೧೮೭೪ರಲ್ಲಿ ಬೇರ್ಪಡಿಸಲ್ಪಟ್ಟಿತು. ಆದರೆ ಆ ಕಾಲಕ್ಕೆ ಲೋಕಮತವು ಜಾಗೃತವಿರದ್ದರಿಂದ ಬಂಗಾಲಿ ಜನರು ವಿಶೇಷ ಚಳವಳಿಯನ್ನು ಹೂಡಲಿಲ್ಲ. ಆಸಾಮು ಪ್ರಾಂತವು, ಆಯ್. ಸಿ. ಎಸ್. ನೌಕರರ ದೃಷ್ಟಿಯಿಂದ ಸ್ವಪರಿಪೂರ್ಣವಾಗಬೇಕಾಗಿದ್ದರೆ, ಆಸಾಮುಪ್ರಾಂತವನ್ನು ಇನ್ನೂ ಹೆಚ್ಚಿಗೆ ಬೆಳಿಸಬೇಕೆಂಬ ಕಲ್ಪನೆಯು ಧೃಢವಾಗುತ್ತ ಹೋಯಿತು. ಕೆಲಕಾಲದ ನಂತರ ಬಂಗಾಲ ಪ್ರಾಂತದೊಳಗಿಂದ, ಚಿತಗಾಂಗ, ನೋವಾಖಾಲಿ ಮತ್ತು ಟಿಪರಾ ಈ ಮೂರು ಜಿಲ್ಹೆಗಳನ್ನು ಒಡೆದು ಆಸಾಮು ಪ್ರಾಂತಕ್ಕೆ ಜೋಡಿಸಬೇಕೆಂಬ ಸೂಚನೆಯು ಮೇಲಕ್ಕೆದ್ದಿತು. ಆದರೆ ಈ ಮಾತಿಗೆ ಸಾರ್ವಜನಿಕರು ವಿರೋಧಿಸಬಹುದೆಂದು ಈ ಸೂಚನೆಯು ಅಲ್ಲಿಯೆ ಬಿದ್ದು ಹೋಯಿತು. ಲಾರ್ಡ ಕರ್ಝನರು ವ್ಹಾಯಿಸರಾಯರಾಗಿ ಬಂದ ಮೇಲೆ ಈ ಸೂಚನೆಗೆ ಮತ್ತೆ ಕಳೆಯೇರಿತು. ಲಾರ್ಡ ಕರ್ಝನರ ಕಾರ್ಯಪದ್ಧತಿಯೆ ಬೇರೆ. ಒಮ್ಮೆ ತಲೆಯಲ್ಲಿ ಕಲ್ಪನೆಯು ಸೇರಿತೆಂದರೆ ಅದನ್ನು ಹೇಗಾದರೂ ಮಾಡಿ ಕಾರ್ಯರಂಗದಲ್ಲಿ ತರುವದೆ ಅವರ ಹವ್ಯಾಸ. ಸಾರ್ವಜನಿಕ ಮತವನ್ನು ಯಾವದೆ ರೀತಿಯಿಂದ ಲೆಕ್ಕಿಸುವದು ಅವರ ಸ್ವಭಾವದಲ್ಲಿರಲಿಲ್ಲ. ಲೆಫ್ಟಿನೆಂಟ ಗವ್ಹರ್ನರರ ಅಧ್ಯಕ್ಷತೆಯಲ್ಲಿ ಮುಂದಾಳುಗಳೊಡನೆ ಖಾಸಗಿ ಮಾತುಕತೆಗಳು ಆದವು. ಆದರೆ ಜನರು ಬಂಗಾಲದೊಳಗಿನ ಯಾವದೆ ಜಿಲ್ಹೆಗಳನ್ನು ಒಡೆಯಗೊಡಲಿಕ್ಕೆ ತಮ್ಮ ಸಮ್ಮತಿಯನ್ನು

ಕೊಡಲಿಲ್ಲ. ಲಾರ್ಡ ಕರ್ಝನರು ಸ್ವತಃ ಪೂರ್ವ ಬಂಗಾಲಕ್ಕೆ ಹೋಗಿ ಬಂದರು. ಆದರೆ ಅದೂ ನಿಷ್ಫಲವಾಯಿತು. ಅವರನ್ನು ಒಳ್ಳೇ ಅಕ್ಕರತೆ ಯಿಂದ ಬರಮಾಡಿಕೊಂಡ ಮೈಮನಸಿಂಗದ ಮಹಾರಾಜರಾದ ಸೂರ್ಯ ಕಾಂತ ಆಚಾರ್ಯರೆ ಒಳ್ಳೆ ಗಟ್ಟಿಗತನದಿಂದ ಈ ಸೂಚನೆಯನ್ನು ವಿರೋಧಿ ಸಿದರು. ಬಂಗಾಲದ ಒಡೆತದ ಈ ಎಲ್ಲ ಕಾರ್ಯಕ್ರಮವು ರಹಸ್ಯದಲ್ಲಿಯೇ ನಡೆಯಿತು. ಲಾರ್ಡ ಮೋರ್ಲೆಯವರೆ ಪಾರ್ಲಮೆಂಟದಲ್ಲಿ ಹೇಳಿದಂತೆ ಈ ವಿಷಯದಲ್ಲಿ ಯಾರ ಅಭಿಪ್ರಾಯವು ಕೇಳಲ್ಪಡಲಿಲ್ಲ. ಸಾರ್ವಜನಿಕ ಮುಖಂಡರ ಮನವೊಲಿಸುವ ಪ್ರಯತ್ನಗಳು ನಿಷ್ಫಲವಾದನಂತರ ಇದೆಲ್ಲ ಕಾರಸ್ಥಾನವು ಗುಪ್ತ ರೀತಿಯಿಂದ ನಡೆಯಿತು. ಬಂಗಾಲ ಪ್ರಾಂತದೊಳ ಗಿಂದ ಇಡಿ ಉತ್ತರ ಭಾಗವನ್ನೂ ಫರೀದಪೂರ ಮತ್ತು ಬಾರಿಸಾಲ ಇವೆರಡು ಪೂರ್ವ ಬಂಗಾಲದ ಜಿಲ್ಹೆಗಳನ್ನೂ ಒಡೆದು ಆಸಾಮು ಪ್ರಾಂತಕ್ಕೆ ಜೋಡಿಸಬೇಕೆಂಬ ನಿರ್ಣಯವು ತಾ॥ ೧೦-೭-೧೯೦೫ನೆಯ ದಿನ ಸರಕಾರ ದಿಂದ ಜಾಹೀರ ಪಡಿಸಲ್ಪಟ್ಟಿತು. ಈ ನಿರ್ಣಯದಿಂದ ಅಖಿಲ ಬಂಗಾಲ ಪ್ರಾಂತವು ವಿಸ್ಮಿತವಾಯಿತು. ಸುರೇಂದ್ರನಾಥ ಬಾನರ್ಜಿಯವರು ಆ ಕಾಲದ ಸಾರ್ವಜನಿಕ ಭಾವನೆಯನ್ನು ಒಳ್ಳೆ ರೀತಿಯಿಂದ ವ್ಯಕ್ತಮಾಡಿ ದ್ದಾರೆ. " ನಮ್ಮ ಅಪಮಾನವಾಯಿತು, ನಮ್ಮ ಮಾನಖಂಡನೆಯಾಯಿತು, ನಮ್ಮನ್ನು ಸರಕಾರದವರು ಪೂರ್ಣ ಮೋಸಗೊಳಿಸಿದರೆಂದು ನಮ್ಮ ಪೂರ್ಣ ಭಾವನೆಯಾಯಿತು. ನಮ್ಮ ಪ್ರಾಂತದ ಮುಂದಿನ ಸುಖಕ್ಕೆ ಸಂಕಟವುಂಟಾ ಯಿತೆಂದು ನಮ್ಮ ಭಾವನೆಯಾಯಿತು. ಬಂಗಾಲೀ ಮಾತನಾಡುವ ಜನ ರಲ್ಲಿ ಬೆಳೆಯುತ್ತಲಿರುವ ಅರಿವನ್ನೂ ಒಕ್ಕಟ್ಟನ್ನೂ, ಅಳಿಸಿಬಿಡಬೇಕೆಂಬ ಬುದ್ಧಿಯಿಂದಲೆ ಈ ಹೊಸ ಯೋಜನೆಯು ಅಮಲಿನಲ್ಲಿ ಬಂದಿತೆಂದು ನಮ್ಮ ಭಾವನೆಯಾಯಿತು. ಕೇವಲ ಆಡಳಿತೆಯ ಅನಕೂಲತೆಗಾಗಿಯೆ ಈ ಸೂಚನೆಯು ಮೊದಲು ಮುಂದೆ ಬಂದಿರಬಹುದು; ಆದರೆ ಈಗ ಆ ಸೂಚನೆಗೆ ರಾಜಕೀಯ ಬಣ್ಣವು ಬಡಿಯಿತು. ಆ ಯೋಜನೆಯನ್ನು ವಿರೋಧಿಸದೆ ಬಿಟ್ಟರೆ ಅದರಿಂದ ನಮ್ಮ ರಾಜಕೀಯ ಉನ್ನತಿಗೂ ಹಿಂದೂ ಮುಸಲ್ಮಾನರ ನಡುವಿನ ಒಕ್ಕಟ್ಟಿಗೂ ಬಾಧೆ ಬರುವದೆಂದು ನಮ್ಮ ಮನ ವರಿಕೆಯಾಯಿತು. ಇದೂ ಅಲ್ಲದೆ ಆಸಾಮು ಪ್ರಾಂತವು ಮುಸಲ್ಮಾನೀ

ಪ್ರಾಂತವಾಗುವದೆಂದೂ ಹೊಸ ಪ್ರಾಂತದಲ್ಲಿ ಮುಸಲ್ಮಾನರಿಗೆ ಹೆಚ್ಚು ಅನುಕೂಲತೆಗಳು ಕೊಡಲ್ಪಡುವವೆಂದೂ ಸರಕಾರದವರೆ ಜಾಹೀರ ಪಡಿಸಿದ್ದರು. ''

ಬಂಗಾಲದ ಈ ಒಡೆತದಿಂದ ಹಿಂದುಸ್ಥಾನದ ಅರ್ವಾಚೀನ ಇತಿಹಾಸ ದಲ್ಲಿ ಒಂದು ಹೊಸ ಯುಗವೆ ಪ್ರಾರಂಭವಾದಂತಾಯಿತು. ಸರಕಾರದ ವರು ಜನರನ್ನು ಯಾವ ರೀತಿಯಿಂದಲೂ ಕೇಳದೆ ಬಂಗಾಲ ಪ್ರಾಂತವನ್ನು ಜನರ ಭಾವನೆಯನ್ನು ನೋಯಿಸುವಂತೆ ಒಡೆದದ್ದರ ವಿರುದ್ಧವಾಗಿ ಚಳವಳಿ ಯನ್ನು ಹೂಡಲು ಅಖಂಡ ಬಂಗಾಲ ಪ್ರಾಂತವೆ ಎದ್ದು ನಿಂತಿತು. ಮಹ ರಾಜಾ ಜ್ಯೋತೀಂದ್ರ ಮೋಹನ ಟಾಗೋರರ ಅರಮನೆಯಲ್ಲಿ ಮೊದಲನೆಯ ಖಾಸಗಿ ಚರ್ಚೆಯಾಯಿತು. ಮುಂದೆ ಬಂಗಾಲ ಪ್ರಾಂತಿಕ ಕೌನ್ಸಿಲ್ಲಿಗೆ ಅಧ್ಯಕ್ಷರಾದ ಹೆನ್ರಿ ಕಾಟನ್ನರೂ ಈ ಸಭೆಗೆ ಬಂದಿದ್ದರು. ಎಲ್ಲ ಆಂಗ್ಲೋ ಇಂಡಿಯನ್ ವರ್ತಮಾನಪತ್ರಗಳು ಮೊದಲು ಮೊದಲು ಈ ವಿಷಯದಲ್ಲಿ ಬಂಗಾಲೀ ಜನರಿಗೆ ಸಹಾನುಭೂತಿಯನ್ನು ಕೊಟ್ಟವು. ಜ್ಯೋತೀಂದ್ರ ಮೋಹನ ಟಾಗೋರರು ಪ್ರಾಂತವನ್ನು ಒಡೆಯುವದೆ ಆದರೆ ಎಲ್ಲ ಬಂಗಾಲಿ ಭಾಷೆ ಮಾತನಾಡುವವರನ್ನು ಒಂದೆ ಪ್ರಾಂತದಲ್ಲಿ ಇರಿಸುವ ವ್ಯವಸ್ಥೆ ಯನ್ನು ಮಾಡಬೇಕೆಂದು ತಾರು ಮಾಡಿದರು. ಅನಂತರ ದಿನಾಲು ಮೈಮ ನಸಿಂಗದ ಮಹರಾಜರ ಮನೆಯಲ್ಲಿಯಾಗಲೀ, ಇಂಡಿಯನ್ ಅಸೋಸಿಯೇ ಶನ್‌ದ ಆಫೀಸಿನಲ್ಲಿಯಾಗಲೀ, ಸಭೆಗಳು ಆಗುತ್ತಿದ್ದವು. ೭ನೆಯ ಅಗಷ್ಟ ದಿನ ಟೌನಹಾಲದಲ್ಲಿ ದೊಡ್ಡ ಸಭೆಯನ್ನು ನೆರಿಸಬೇಕೆಂದು ಗೊತ್ತಾಯಿತು. ಆದರೆ ಬರೆ ಸಭೆಯಿಂದ ಏನು ಪ್ರಯೋಜನ? ಇದಕ್ಕೂ ಹೆಚ್ಚಿನ ಉಪಾಯ ಗಳನ್ನು ಕೈಕೊಳ್ಳಬಾರದೆ? ಅನೇಕ ಸೂಚನೆಗಳು ಬಂದವು. ಆನರರಿ ಮ್ಯಾಜಿಸ್ಟ್ರೇಟರು ತಮ್ಮ ಹುದ್ದೆಗೆ ರಾಜೀನಾಮೆ ಕೊಡಬೇಕೆಂದೂ ಒಂದು ಸೂಚನೆಯು ಬಂದಿತು. ಕೊನೆಗೆ ಸರಕಾರದ ಈ ನಿರ್ಣಯದ ವಿರುದ್ಧವಾಗಿ ನಿಷೇಧವೆಂದು ವಂಗಭಂಗದ ಯೋಜನೆಯು ಅಮಲಿನಲ್ಲಿರುವವರೆಗೆ ಬ್ರಿಟಿಶ ಮಾಲಿಗೆ ಬಹಿಷ್ಕಾರವನ್ನು ಹಾಕಬೇಕೆಂದು ಗೊತ್ತಾಯಿತು. ಈ ವಿಷಯಕ್ಕೆ ಕೆಲವು ಇಂಗ್ಲಿಷ ಮಿತ್ರರನ್ನು ಕೇಳಲಾಗಿ ಅವರೂ ಬಹಿಷ್ಕಾರದ ಈ ಯೋಜ ನೆಗೆ ತಮ್ಮ ಸಮ್ಮತಿಯನ್ನು ಕೊಟ್ಟರು. ಟೌನಹಾಲಿನ ಸಭೆಯಲ್ಲಿ

ಮಂಡಿಸಲ್ಪಟ್ಟ ಗೊತ್ತುವಳಿಯು ಈ ಮುಂದಿನಂತೆ ಇತ್ತು. ಬ್ರಿಟಿಶ ಜನತೆಯು ಹಿಂದುಸ್ತಾನದ ವಿಷಯಕ್ಕೆ ತೋರಿಸುವ ಅನಾಸ್ಥೆಯನ್ನೂ, ಈ ಅನಾಸ್ಥೆಯ ಮೂಲಕ ಈಗಿನ ಸರಕಾರದವರು ಹಿಂದುಸ್ತಾನದ ಸಾರ್ವಜನಿಕ ಮತವನ್ನು ಕೇಳುಗಳೆಯುವದನ್ನೂ ನಿಷೇಧಿಸಲಿಕ್ಕೆಂದು, ವಂಗಭಂಗದ ನಿರ್ಣಯವು ರದ್ದಾಗುವವರೆಗೆ ಬ್ರಿಟಿಶಮಾಲನ್ನು ಬಹಿಷ್ಕರಿಸಬೇಕೆಂದು ಅನೇಕ ಸಭೆಗಳಲ್ಲಿ ಈ ಮೊದಲೆ ನಿರ್ಣಯವಾಗಿದೆ. ಆ ನಿರ್ಣಯಕ್ಕೆ ಈ ಸಭೆಯು ತನ್ನ ಸಂಪೂರ್ಣ ಬೆಂಬಲವನ್ನು ಕೊಡುತ್ತದೆ." ಬಂಗಾಲದ ಚಳವಳಿಯ ಪ್ರಾರಂಭವು ಈ ರೀತಿ ಬಹಿಷ್ಕಾರದಿಂದ ಆಯಿತು.

ಟೌನಹಾಲದಲ್ಲಿ ಅಗಸ್ಟ ೭ನೆಯ ದಿನದ ಸಭೆಯು ಕೇವಲ ಅಪೂರ್ವವಾಯಿತು. ಆ ದಿನ ಕಲಕತ್ತಾ ಪಟ್ಟಣದಲ್ಲಿ ಮುಂಜಾವಿನಿಂದ ಒಳ್ಳೇ ಗೊಂದಲನೆದ್ದಿತು. ಮಧ್ಯಾಹ್ನ ೨ ಘಂಟೆಗೆ ಪಟ್ಟಣದಲ್ಲೆಲ್ಲ ಹರತಾಳವಾಯಿತು. ದೊಡ್ಡ ದೊಡ್ಡ ಮಹಾರಾಜರೂ, ವ್ಯಾಪಾರಿ ಸಾರವಾಡಿಗಳೂ ಈ ಚಳವಳಿಯಲ್ಲಿ ಬಂದು ಕೂಡಿದರು. ಬಣ್ಣಾ ಬಣ್ಣದ ಬಟ್ಟೆಗಳನ್ನು ತೊಟ್ಟುಕೊಂಡ ಯುವಕರು ಕೈಯಲ್ಲಿ ನಿಶಾನಿಯನ್ನು ಹಿಡಿದು ಮೆರವಣಿಗೆಯ ಹಿಂದೆ ಹೊರಟರು. ಜನರ ಸಂದಣಿಯು ಬಹಳವಾಯಿತು. ಒಟ್ಟಿಗೆ ನಾಲ್ಕು ಸಭೆಗಳನ್ನು ಏರ್ಪಡಿಸಬೇಕಾಯಿತು. ಕಾಸಿಮುಬಝಾರದ ಮಹರಾಜರು, ಭೂಪೇಂದ್ರನಾಥ ಬಸು, ಅಂಬಿಕಾಚರಣ ಮುಜುಮುದಾರರು, ಸುರೇಂದ್ರನಾಥ ಬಾನರ್ಜಿಯವರು ಬೇರೆ ಬೇರೆ ಸಭೆಗಳಿಗೆ ಅಧ್ಯಕ್ಷರಾದರು. ಸಭೆಯಲ್ಲಿ ಮೇಲೆ ಕಾಣಿಸಿದ ವಿಷಯಕ್ಕೆ ಚರ್ಚೆಯಾಯಿತು. ೧೩ ಮಹರಾಜರನ್ನೊಳಗೊಂಡ ಎರಡು ನೂರು ಜನರ ಕಮಿಟಿಯು ನೇಮಿಸಲ್ಪಟ್ಟಿತು. ಈ ಚಳವಳಿಯು ಹೇಗೆ ಬೆಳೆಯಿತೆಂಬುದನ್ನು ಕೇಳಕರರು ಒಳ್ಳೆ ಮಾರ್ಮಿಕ ರೀತಿಯಿಂದ ವರ್ಣಿಸಿರುವರು. "ಈ ಚಳವಳಿಯಲ್ಲಿ ಮುಂದೆ ಬಂದಷ್ಟು ಮುಖಂಡರೂ, ಮುಂದೆ ಬಂದಷ್ಟು ಕಾರ್ಯಕರ್ತರೂ, ಈ ಮೊದಲು ಎಂದಿಗೂ ಬಂದಿರಲಿಲ್ಲ. ಎತ್ತರವಾದ ಗುಡ್ಡದ ಮೇಲೆ ದೊಡ್ಡ ಮಳೆಯಾಯಿತೆಂದರೆ ಎಲ್ಲ ನೀರು ಹರಿದು ಹೋಗುವದಿಲ್ಲ. ಅದರಲ್ಲಿಯ ಕೆಲವು ನೀರು ಕೊಳ್ಳಗಳಲ್ಲಿಯೂ, ಗುಡ್ಡದ ಕೆಲವು ಮೂಲೆಗಳಲ್ಲಿಯೂ, ನಿಂತು ಅಂಥವರಿಂದಲೆ ಮುಂದೆ ಶಿಲೆಗಳು ಒಡೆಯುತ್ತವೆ. ರಾಷ್ಟ್ರೀಯ

ಭಾವನೆಯು ಮಾತೂ ಹೀಗೆಯೆ ಇದೆ. ಚಳವಳಿಯು ವಂಗಭಂಗದ ವಿರುದ್ಧ ಪ್ರಾರಂಭವಾದರೂ, ಆ ವಂಗಭಂಗದಿಂದ ಉತ್ಪನ್ನವಾದ ರಾಷ್ಟ್ರೀಯ ಭಾವನೆಯ ಶಿಲೆಗಳು ತಮ್ಮ ತಮ್ಮ ಪಂಯಿಂದ ಬೇರೆ ಬೇರೆ ದಿಕ್ಕುಗಳಲ್ಲಿ ಹರಿಯುಹತ್ತಿದವು. ವರ್ತಮಾನ ಪತ್ರಕರ್ತರು ಸಾಹಸದ ಬರಹಗಳನ್ನು ದಿಟ್ಟತನದಿಂದ ಬರೆಯುಹತ್ತಿದರು. ಅದುವರೆಗೆ ಮೂಕರಂತೆ ಸುಮ್ಮನೆ ಇರುವವರೆ ತೇಜಸ್ವಿಯಾದ ಭಾಷಣಗಳನ್ನು ಮಾಡಹತ್ತಿದರು. ಬುದ್ಧಿ ಇದ್ದರೂ ಸೋಮಾರಿಗಳಾಗಿದ್ದವರಿಗೆ ಸರಸ್ವತಿ ದೇವಿಯು ತನ್ನ ನವಲಿನ ಗರಿಗಳಿಂದ ಮೆಲ್ಲನೆ ಎಬ್ಬಿಸಿ ಲೇಖನ ಕಲೆಯ ಅಭ್ಯಾಸವನ್ನು ಮಾಡಿಸಿದಳು. ಕವಿಗೆ ದಿವ್ಯವಾದ ಪ್ರತಿಭೆಯು ಬರಹತ್ತಿತು. ಭಾಷೆಗೆ ಸುಂದರವಾದ ಅಲಂಕಾರಗಳು ದೊರೆಯುಹತ್ತಿದ್ದವು. ಬರಹದಲ್ಲಿಯೂ ಮಾತಿನಲ್ಲಿಯೂ ವ್ಯಾಜೋಕ್ತಿ–ವಕ್ರೋಕ್ತಿಗಳು ಸುಳಿದಾಡಹತ್ತಿದವು. ಲೇಖಕರ ಲೆಕ್ಕಣಿಕೆಯಂತೆ ಕಲಾವಂತರ ಕುಂಚಗಳಿಗೆ ಹೊಸ ಕಳೆ ಏರಿದಂತಾಯಿತು. ವ್ಯಕ್ತಿಗಳು ಒತ್ತಟ್ಟಿಗೆ ಬಂದು ಸಂಘಶಕ್ತಿಯು ಉತ್ಪನ್ನವಾಗಹತ್ತಿತು. ಜೈನಿ ಜನರು ತಮ್ಮ ವಿಲಾಸಗಳನ್ನು ತಮ್ಮ ಮನಸ್ಸಿನಲ್ಲಿಯೆ ಧಿಕ್ಕರಿಸಿದರು. ಧನಿಕರ ಧನವು ಪರೋಪಕಾರದ ದಾರಿಯನ್ನು ಹಿಡಿಯಿತು. ಪುಕ್ಕರು ವೀರರಾದರು. ಮೀಸೆ ಒಡೆಯದ ಎಳೆಯ ಯುವಕರು ದೊಡ್ಡವರಿಗಿಂತಲೂ ಕರ್ತೃತ್ವದಲ್ಲಿ ಮೇಲಾದರು. ಹೇಗಾದರೂ ಮಾಡಿ ಸರಕಾರದ ಪ್ರತಿಕಾರವನ್ನು ಮಾಡಲು ಕೈಗಳು ಚಪಲವಾದವು. "ಸನದಶೀರ, ಕಾಯದೇಶೀರ," ಈ ಶಬ್ದಗಳು ಲೋಪವಾಗಿ ಹೆಚ್ಚಿನ ಪರಾಕ್ರಮವನ್ನು ಮಾಡಲೂ ದುಃಖವನ್ನು ಸಹಿಸಲೂ ತರುಣರು ನಾಮುಂದೆ ನೀಮುಂದೆ ಎಂದು ಬರಹತ್ತಿದರು. ಕೆಲವು ತರುಣರು ಅತ್ಯಾಚಾರದ ಮಾರ್ಗವನ್ನು ಅವಲಂಬಿಸಿದರು. ಆದರೆ ವಂಗಭಂಗದ ಚಳವಳಿಯಲ್ಲಿ ಬಂಗಾಲೀ ಜನರು ತೋರಿಸಿದ ದೇಶಭಕ್ತಿಯೂ, ಸಂಘಶಕ್ತಿಯೂ ಕೇವಲ ಅಭೂತಪೂರ್ವವಾಯಿತೆಂದು ಹೇಳಿದರೆ ಅದು ಅತಿಶಯೋಕ್ತಿಯಾಗಲಿಕ್ಕಿಲ್ಲ."

(೩೭) **ರಾಷ್ಟ್ರೀಯ ಪಕ್ಷದ ಉದಯವು:–** ೧೯೦೫ನೆಯ ಇಸ್ವಿಯ ವರೆಗೆ ರಾಷ್ಟ್ರೀಯ ಸಭೆಯಿಂದ ಆದ ಕಾರ್ಯದ ವಿಷಯಕ್ಕೆ ಅನೇಕರ ಮನಸ್ಸಿನಲ್ಲಿ ಅಸಮಾಧಾನವುಂಟಾಗಹತ್ತಿತ್ತು. ಕಾಂಗ್ರೆಸ್ಸಿನ

ಠರಾವುಗಳಾದವು, ಬಿನ್ನಹಗಳಾದವು, ಶಿಷ್ಟಮಂಡಳಗಳನ್ನು ತೆಗೆದುಕೊಂಡು ಇಂಗ್ಲಂಡಕ್ಕೆ ಹೋದದ್ದಾಯಿತು. ಆದರೆ ಹಿಂದುಸ್ಥಾನದ ಹಿತದ ದೃಷ್ಟಿಯಿಂದ ಲಾಭವೇನೂ ಆಗಲಿಲ್ಲ. ಲೋಕಮಾನ್ಯ ಟಿಳಕರು ಈ ಮೊದಲೆ ಕಾಂಗ್ರೆಸ್ಸಿನ ಮುಖಂಡರ ವಿಷಯಕ್ಕೆ ಕೇಸರಿ ಪತ್ರದ ಮುಖಾಂತರವಾಗಿ ಅಸಮಾಧಾನವನ್ನು ವ್ಯಕ್ತ ಮಾಡಿದ್ದರು. ಇಂಗ್ಲಂಡಿಗೆ ಹೋಗಿ ಬಂದ ಲಾಲಾಲಜಪತರಾಯರು ಕೇವಲ ಬಿನ್ನಹಗಳಿಂದ ಯಾವುದೆ ಮಾತು ಸಾಧ್ಯವಾಗುವದಿಲ್ಲೆಂದು ತಿರುಗಿ ಬಂದು ಹೇಳಿದರು. ಆನಂತರ ಸ್ವಲ್ಪದರಲ್ಲಿಯೆ ಬಂಗಾಲದಲ್ಲಿ ಅರವಿಂದ ಘೋಷ, ಬಿಪಿನಚಂದ್ರಪಾಲ, ಮೋತಿಲಾಲ ಘೋಷ ಮುಂತಾದವರ ನೇತೃತ್ವದಲ್ಲಿ ಉಜ್ವಲ ರಾಷ್ಟ್ರೀಯ ತತ್ವದ ಪ್ರಚಾರವಾಗಹತ್ತಿತು. ವಂದೇಮಾತರಂ, ಸಂಧ್ಯಾ, ಮುಂತಾದ ಪತ್ರಗಳ ಮುಖಾಂತರವಾಗಿ ಈ ಮುಖಂಡರು ಶುದ್ಧ ರಾಷ್ಟ್ರೀಯ ತತ್ವದ ಉದ್ಘೋಷಣೆಯನ್ನು ಮಾಡತೊಡಗಿದರು. ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ, ಇವೆಲ್ಲ ತತ್ವಗಳನ್ನು ಧರ್ಮತತ್ವಗಳಂತೆ ಮುಖ್ಯವಾಗಿ ಮನ್ನಿಸಿ ಇವುಗಳ ಪ್ರಚಾರವನ್ನು ಈ ಬಂಗಾಲೀ ಮುಖಂಡರು ಮಾಡಿದರು. "ನಿಮ್ಮ ಗುರಿಯೇನು ?" ಎಂದು ರಾಮಸೆ ಮ್ಯಾಕ್ಡೊನಾಲ್ಡರು ಅರವಿಂದ ಘೋಷರನ್ನು ಕೇಳಿದಾಗ "ಸಂಪೂರ್ಣ ಸ್ವಾತಂತ್ರ್ಯವೆ ನಮ್ಮ ಗುರಿ"ಯೆಂದು ತಟಕ್ಕನೆ ಅರವಿಂದ ಘೋಷರು ಹೇಳಿದರು. ಬಂಗಾಲದ ಈ ಹೊಸಪಕ್ಷವು ಭಾವನಾಪರವಾಗಿತ್ತು. ಅರವಿಂದ ಘೋಷರ ಬರಹಗಳಲ್ಲಿ ಒಂದು ಹೊಸ ತರದ ಹೊಳಪು ಕಂಡುಬರುತ್ತಿತ್ತು. "ಮಾತೃಭೂಮಿಗೆ ವೈಭವವನ್ನು ತಂದುಕೊಡುವದಕ್ಕಾಗಿ ದುಡಿಯಿರಿ, ಮಾತೃಭೂಮಿಗೆ ಸಂತೋಷವಾಗಲೆಂದು ಸಂಕಟಗಳನ್ನು ಸಹಿಸಿರಿ" ಎಂಬುದೆ ಅವರ ಮಹಾಮಂತ್ರವಾಗಿತ್ತು. ಆ ಕಾಲದ ಬಂಗಾಲದ ರಾಷ್ಟ್ರೀಯ ತತ್ವಗಳನ್ನು ಬಿಪಿನಚಂದ್ರಪಾಲರು ತಮ್ಮದೊಂದು ಗ್ರಂಥದಲ್ಲಿ ಒಳಿತಾಗಿ ಬಣ್ಣಿಸಿರುವರು. "ರಾಜನೀತಿಯ ಮಾರ್ಗವನ್ನು ಹಿಂದೀ ಜನರು ಎಂದಿಗೂ ತಿಳಿದವರಲ್ಲ; ಆಳರಸರು ಹೇಳಿದ್ದನ್ನೆಲ್ಲ ಹಾಗೆಯೆ ನಂಬಿಬಿಟ್ಟರು. ತಮ್ಮ ಸ್ವಂತದ ಆಡಳಿತೆಯನ್ನು ನಡಿಸಲು ಹಿಂದೀ ಜನರು ಅಸಮರ್ಥರೆಂದು ಆಳರಸರು ಹೇಳಿದರು. ಹಿಂದೀ ಜನರು ಅದನ್ನು ನಿಜವೆಂದು ನಂಬಿಬಿಟ್ಟರು. ಜನರು ನಿರ್ಬಲರೆಂದೂ, ಸರಕಾರದ

ವರು ಬಲಿಷ್ಠರೆಂದೂ, ಆಳರಸರು ಹೇಳಿದರು. ಆ ಮಾತಿ ನಿಜವೆಂದು ಹಿಂದೀ ಜನರು ನಂಬಿಬಿಟ್ಟರು. ಈ ಮಬ್ಬನ್ನು ದೂರ್ಪಡಿಸಬೇಕೆಂದು ರಾಷ್ಟ್ರೀಯ ಪಕ್ಷದವರು ಪಣತೊಟ್ಟು ಅದರಂತೆ ಜನರಲ್ಲಿ ಜಾಗೃತಿಯನ್ನುಂಟು ಮಾಡಿದರು " ರಾಷ್ಟ್ರದಲ್ಲಿ ಜಾಗೃತಿಯನ್ನು ಹುಟ್ಟಿಸುವದು ಈ ಪಕ್ಷದ ಮೊದಲನೆಯ ಕಾರ್ಯಕ್ರಮವಿತ್ತು. ಜನರ ಮನಸ್ಸಿನಲ್ಲಿ ಸ್ವಾತಂತ್ರ್ಯಪ್ರೇಮವನ್ನು ಹುಟ್ಟಿಸುವದು ದೇಶಕ್ಕಾಗಿ ತ್ಯಾಗವನ್ನು ಮಾಡುವ ಪ್ರವೃತ್ತಿಯನ್ನು ಹುಟ್ಟಿಸುವದು ರಾಷ್ಟ್ರೀಯ ಪಕ್ಷದ ಎರಡನೆಯ ಉದ್ದೇಶವಾಗಿತ್ತು. "ಬ್ರಿಟಿಶ ಸರಕುಗಳ ಮೇಲೆ ಬಹಿಷ್ಕಾರ, ಸಂಬಳವಿಲ್ಲದ ಅಧಿಕಾರಸ್ಥಾನಗಳ ಬಹಿಷ್ಕಾರ, ಸರಕಾರೀ ಶಾಲೆಯೊಳಗಿಂದ ಹುಡುಗರನ್ನು ತೆಗೆದು ರಾಷ್ಟ್ರೀಯಶಾಲೆಗಳಲ್ಲಿ ಅವರಿಗೆ ರಾಷ್ಟ್ರೀಯ ಗುರಿಯನ್ನು ಸಾಧಿಸುವಂತಹ ಶಿಕ್ಷಣವನ್ನು ಕೊಡುವದು, ನಾಗರಿಕಸೇವೆಯನ್ನು ಮಾಡಲು ಉಪಯುಕ್ತವಾದ ಶಿಕ್ಷಣವನ್ನು ಕೊಡುವದು. ಪಂಚಾಯತಿಗಳನ್ನು ಸ್ಥಾಪಿಸುವದು, ಇವೆ ರಾಷ್ಟ್ರೀಯ ಪಕ್ಷದ ಸಾಧನಗಳಾಗಿದ್ದವು".

ಬಂಗಾಲದ ರಾಷ್ಟ್ರೀಯ ಪಕ್ಷವು ಹುಟ್ಟುವ ಮೊದಲೆ ಲೋಕಮಾನ್ಯ ಟಿಳಕರು ಕೇಸರೀ ಪತ್ರದ ಮುಖಾಂತರವಾಗಿ ರಾಷ್ಟ್ರೀಯ ತತ್ವಗಳನ್ನು ಸಾರುತ್ತಿದ್ದರು. ಪುಣೆಯಲ್ಲಿ ಶಿವಾಜಿ ಉತ್ಸವ, ಗಣೇಶ ಉತ್ಸವಗಳನ್ನು ಪ್ರಾರಂಭಿಸಿ ಜನರಲ್ಲಿ ಉಜ್ವಲ ದೇಶಾಭಿಮಾನವನ್ನು ದೃಢಪಡಿಸಲು ಹವಣಿಸಿದ್ದರು. ವಂಗಭಂಗದ ಚಳವಳಿಯೆಂದರೆ ಅವರಿಗೊಂದು ದೇವರ ವರವೆಂದು ಅನಿಸಿತ್ತು. ೧೯೦೫ ರಿಂದ ೧೯೦೮ ರವರೆಗೆ ಅವರು ಅವ್ಯಾಹತವಾಗಿ ರಾಷ್ಟ್ರೀಯ ಚಳವಳಿಯನ್ನು ನಡಿಸಿದರು. ನೂರಾರು ವ್ಯಾಖ್ಯಾನಗಳನ್ನು ಕೊಟ್ಟರು. ಕೇಸರಿಯಲ್ಲಿ ತೇಜಸ್ವಿ ಬರಹಗಳನ್ನು ಬರೆದರು. ಅವರ ಪ್ರೇರಣೆಯಿಂದಲೆ ಅನೇಕ ರಾಷ್ಟ್ರೀಯ ವಿದ್ಯಾಲಯಗಳು ಹೊರಟವು. ತತ್ವಗಳನ್ನು ವ್ಯವಹಾರದಾಚರಣೆಯಲ್ಲಿ ಯಾವಾಗ ಹೇಗೆ ತರಬೇಕೆಂಬ ಕಲೆಯು ಅವರಿಗೆ ಪೂರ್ಣವಾಗಿ ಸಾಧ್ಯವಾಗಿತ್ತು. ಅವರಲ್ಲಿ ರಾಷ್ಟ್ರೀಯ ಭಾವನೆಯು ಯಾವಾಗಲೂ ತುಂಬಿತುಳುಕುತ್ತಿತ್ತು. ಆದರೆ ಆ ಭಾವನೆಗಳಿಗೆ ವ್ಯಾವಹಾರಿಕ ಸ್ವರೂಪಗಳನ್ನು ಕೊಡುವಾಗ ಭಾವನಾವಶರಾಗಿ ಅವರು ದಿಕ್ಕುತಪ್ಪಿ ಹೋಗುತ್ತಿದ್ದಿಲ್ಲ. ಅವರು ಮಹಾರಾಷ್ಟ್ರದಲ್ಲಿ ಮಾಡಿದ

ಚಳವಳಿಯಿಂದ ಬಂಗಾಲಿ ಜನರಿಗೆ ಒಂದು ದೊಡ್ಡ ಆಧಾರವಾದಂತಾಯಿತು. ಸುರೇಂದ್ರನಾಥ ಬಾನರ್ಜಿಯವರು ಅವರಿಗೆ ಒಮ್ಮೆ "Yon are our Saviour" ನೀವೇ ನಮ್ಮ ತಾರಕರು ಎಂದು ತಾರು ಮಾಡಿದ್ದನ್ನು ಬಲ್ಲವರು ಹೇಳುತ್ತಾರೆ. ಅವರು ೧೯೦೬ರಲ್ಲಿ ಕಲಕತ್ತೆಗೆ ಹೋದಾಗ ಆರು ದಿವಸಗಳವರೆಗೆ ಪ್ರಚಂಡ ಉತ್ಸವವು ನೆರವೇರಿಸಲ್ಪಟ್ಟಿತು. ರಾಷ್ಟ್ರೀಯ ಪಕ್ಷದ ತತ್ವಗಳನ್ನು ಕುರಿತು ಅವರು ಹೇನ್ರಿ ನೇವ್ಹಿನ್ಸನ್‌ರೊಂದಿಗೆ ಮಾಡಿದ ಚರ್ಚೆಯ ಸಾರಾಂಶವನ್ನು ಹೆನ್ರಿ ನೇವ್ಹಿನ್ಸನರು ತಮ್ಮ "The New Spirit in India" ಎಂಬ ಪುಸ್ತಕದಲ್ಲಿ ಕೊಟ್ಟಿರುವರು. ಟಿಳಕರು ಅವರಿಗೆ ಹೀಗೆ ಹೇಳಿದರು:- "ಮಂದಪಕ್ಷದವರಾಗಲಿ ಉಗ್ರಪಕ್ಷದವರಾಗಲಿ, ಇವರಿಬ್ಬರ ಉದ್ದೇಶದಲ್ಲಿಯೂ, ಇವರ ಗುರಿಗಳಲ್ಲಿಯೂ, ಭೇದವಿಲ್ಲ. ಅವರಿಬ್ಬರ ನಡುವೆ ಕೇವಲ ಮಾರ್ಗದ ಭೇದವಿದೆ. ಬ್ರಿಟಿಶರ ರಾಜ್ಯವನ್ನು ಪೂರ್ಣವಾಗ ಕಿತ್ತೊಗೆಯಬೇಕೆಂಬ ಒಂದು ಸಣ್ಣ ಪಕ್ಷವು ಇರುವದೆಂಬದೇನೋ ನಿಜ; ಅಂಥ ಮಾತುಗಳನ್ನೆಲ್ಲ ಭವಿಷ್ಯತ್‌ಕಾಲಕ್ಕೆ ಬಿಟ್ಟು ಬಿಡುವಾ. ನಾವು ನಿಃಶಸ್ತ್ರರು, ಮತ್ತೆ ಮೇಲೆ ನಮ್ಮೊಳಗೆ ಒಡಕು, ನಮ್ಮಲ್ಲಿ ಸಂಘಟನೆಯು ಇಲ್ಲ. ಇಂಗ್ಲಿಷರ ರಾಜ್ಯವನ್ನು ಅಲ್ಲಾಡಿಸುವ ಸಾಮರ್ಥ್ಯವು ನಮಗೆಲ್ಲಿ? ದೇಶದ ಆಡಳಿತೆಯಲ್ಲಿ ನಮಗೂ ಅಧಿಕಾರವು ದೊರೆಯಬೇಕು; ಬೇರೆ ಬೇರೆ ಪ್ರಾಂತಗಳಿಂದೊಡಗೂಡಿದ ಸಂಯುಕ್ತಸ್ವರಾಜ್ಯದ ಘಟನೆಯು ನಮಗೆಬೇಕು. ಈ ಮಾತಾದರೂ ಸಧ್ಯದಲ್ಲಿಯೆ ಸಾಧ್ಯವಾಗುವಂತಿಲ್ಲ. ಇವೊತ್ತಿನ ಪ್ರಶ್ನೆಯೆಂದರೆ ಎಲ್ಲವೂ ಒಳಿತಾಗಿ ಸಾಗಿಲ್ಲವೆಂದು ತೋರಿಸಲು ನಾವು ಸರಕಾರಕ್ಕೆ ಧಕ್ಕೆಯನ್ನು ಕೊಡಬೇಕೆನ್ನುತ್ತೇವೆ. ರಶಿಯಾದಲ್ಲಿಯ ಆಳರಸರ ವರ್ಣನೆಯನ್ನು ನೀವು ಮಾಡಿರುವಿರಿ. ರಶಿಯದ ಆಳರಸರು ಎಷ್ಟೇ ಕೆಟ್ಟವರಾಗಿದ್ದರೂ ಅವರು ರಶಿಯಾ ದೇಶದವರೆ ಆಗಿರುತ್ತಾರೆ. ರಶಿಯಾ ದೇಶದ ಸಂಪತ್ತು ವರ್ಧನೆಯನ್ನು ಬೆಳೆಯಬೇಕೆಂದೇ ಅವರಿಗೆ ಅನಿಸುತ್ತದೆ. ಆದರೆ ಇಲ್ಲಿಯ ಆಳರಸರನ್ನು ನೋಡಿರಿ. ಅವರು ಪರಕೀಯರು, ಪರಕೀಯರಿಗಾಗಿ ದುಡಿಯುವರು, ಈ ಕಾರಭಾರದಲ್ಲಿ ನಮಗೆ ಎಲ್ಲಿಯೂ ಸ್ಥಾನವಿಲ್ಲ. ಆದುದರಿಂದ ಸರಕಾರಕ್ಕೆ ಸ್ವಲ್ಪ ಧಕ್ಕೆ ಕೊಡಬೇಕೆಂದು ನಮಗೆ ಅನಿಸುತ್ತದೆ. ಅದು ಹೇಗಾಗುವದೋ ಇದೆ ದೊಡ್ಡ ಪ್ರಶ್ನೆ ಇದೆ. ಉಗ್ರ ಮತ್ತು ಮಂದ

ಪಕ್ಷದವರ ನಡುವಿನ ಭೇದವು ಈ ಪ್ರಶ್ನೆಯ ಉತ್ತರದಲ್ಲಿಯೆ ಇದೆ. ಕೇವಲ ಯುಕ್ತಿವಾದದಿಂದ ಇಲ್ಲಿಯ ಇಂಗ್ಲಿಷ ಜನರ ಮನಸ್ಸನ್ನೊಲಿಸುವದು ಸಾಧ್ಯವಿದೆಯೆಂದು ಮಂದಪಕ್ಷದವರಿಗೂ ಅನಿಸುವದಿಲ್ಲ. ಅವರ ವಿಶ್ವಾಸವು ಇಂಗ್ಲಂಡದ ಮೇಲೆ. ಇಂಗ್ಲಂಡದಲ್ಲಿಯಾದರೂ ನಮ್ಮನ್ನು ಯಾರು ಕೇಳುವರು ? ಅಲ್ಲಿಯ ಜನರಿಗೆ ಹಿಂದುಸ್ತಾನದ ನಿಜವಾದ ಸಂಗತಿಗಳ ಜ್ಞಾನವು ಇರುವದೆ ಇಲ್ಲ. ಹಿಂದುಸ್ತಾನದ ವಿಷಯಕ್ಕೆ ತಮ್ಮ ತಮ್ಮೊಳಗೆ ಮತಭೇದವನ್ನು ಮಾಡಿಕೊಳ್ಳಬಾರದೆಂಬುದೆ ಅಲ್ಲಿಯ ಎಲ್ಲ ಪಕ್ಷಗಳ ಧೋರಣ. ಈ ಮಾತಿನಿಂದ ನಿರಾಶರಾಗಿ ಉಗ್ರಪಕ್ಷದವರಾದ ನಾವು ಬೇರೆ ದಾರಿಯನ್ನೆ ತುಳಿಯಬೇಕೆಂದು ಮಾಡಿದ್ದೇವೆ. ಇದೇನು ಕೇವಲ ಸ್ವಭಾವದ ಭೇದವು. ಯುವಕರೆಲ್ಲರೂ ನಮ್ಮ ಪಕ್ಷಕ್ಕೆ ಸೇರಿರುವರು. ಸ್ವಾವಲಂಬನವೆ ನಮ್ಮ ಮಹಾಮಂತ್ರವು. ಅವರಲ್ಲಿ ಬಂದ ಕಷ್ಟಗಳನ್ನು ಸಹಿಸಲು ನಾವು ಸಿದ್ಧರಿದ್ದೇವೆ. ಹಿಂದುಸ್ತಾನದ ಹಿತಕ್ಕಾಗಿ ನಾವು ಬೇಕಾದ ಕಷ್ಟಗಳನ್ನು ಸಹಿಸಲು ಮನಸ್ಸು ಗಟ್ಟಿಮಾಡಿದ್ದೇವೆ. ಮೂರು-ನಾಲ್ಕು ಸಾವಿರ ಜನರನ್ನು ಸೆರೆಮನೆಗೆ ಅಟ್ಟಬೇಕಾದರೆ ಸರಕಾರದವರು ವಿಚಾರ ಮಾಡಬೇಕಾದೀತು. ಅವರಿಗೆ ಆ ಮಾತು ಜಡವಾದೀತು. ಬಹಿಷ್ಕಾರದ ಚಳವಳಿಯಲ್ಲಿ ನಾವು ಯಾರಮೇಲೂ ಜುಲುಮೆಯನ್ನು ಮಾಡಬೇಕೆನ್ನುವದಿಲ್ಲ. ಸತ್ಯಾಗ್ರಹವನ್ನು ಮಾಡುವದಾದರೂ, ಕೇವಲ ದಬ್ಬಾಳಿಕೆಯ ಕಾಯದೆಗಳ ವಿಷಯದಲ್ಲಿಯೆ ! ಸರಕಾರದ ವ್ಯಾಪಾರಕ್ಕೆ ಧಕ್ಕೆ ತಟ್ಟಿದರೆ, ಸರಕಾರಕ್ಕೆ ಸ್ವಲ್ಪ ಆತಂಕವನ್ನುಂಟು ಮಾಡಿದರೆ ಇಂಗ್ಲಂಡದ ಕಣ್ಣುಗಳು ತೆರೆಯಬಹುದು. ನಮ್ಮಲ್ಲಿ ಹಿಂದೆ ಮುಂದೆ ಒಕ್ಕಟ್ಟಾಗಿಯೆ ತೀರುವದು ''

(೩೮) **ಕಾಶಿಯಲ್ಲಿ ೨೧ ನೆಯ ಅಧಿವೇಶನವು** (೧೯೦೫):-ಕಾಂಗ್ರೆಸ್ಸಿನ ೨೧ನೆಯ ಅಧಿವೇಶನವು ೧೯೦೫ನೆಯ ಇಸ್ವಿಯ ಡಿಶಂಬರ ತಿಂಗಳ ೨೭, ೨೮, ೨೯, ೩೦ನೆಯ ದಿನ ಜರುಗಿತು. ಸಭೆಯ ಅಧ್ಯಕ್ಷಸ್ಥಾನಕ್ಕೆ ಗೋಪಾಲಕೃಷ್ಣ ಗೋಖಲೆಯವರು ಆರಿಸಲ್ಪಟ್ಟರು. ಲಾರ್ಡ ಕರ್ಝನರ ದಬ್ಬಾಳಿಕೆಯ ಕಾಯದೆಗಳಿಂದ ದೇಶದಲ್ಲೆಲ್ಲ ಅಸಂತೋಷವು ಪಸರಿಸಿತ್ತು. ಆ ಅಸಂತೋಷವೆ ಅಧ್ಯಕ್ಷರ ಭಾಷಣದಲ್ಲಿ ಚನ್ನಾಗಿ ಮೂಡಿತ್ತು.

" ಅಂತೂ ಲಾರ್ಡ ಕರ್ಝನರ ಆಳ್ವಿಕೆಯು ಒಮ್ಮೆ ಮುಗಿಯಿತು. ಲಾರ್ಡ ಕರ್ಝನರ ಆಳಿಕೆಯನ್ನು ಹೋಲಿಸಬೇಕಾದರೆ ಔರಂಗಜೇಬನ ಕಾಲದ ಇತಿಹಾಸವನ್ನೆ ನಾವು ಓದಬೇಕು. ಹಿಂದುಸ್ತಾನವೆಂದರೆ ಇಂಗ್ಲಿಷರಿಗಾಗಿ ಕಾದಿಟ್ಟಭೂಮಿ, ಪರರಿಂದ ಆಳಿಸಿಕೊಳ್ಳುವದೆ ಹಿಂದುಸ್ತಾನದವರ ಕೆಲಸ, ಎಂದು ಅವರ ಭಾವನೆಯಿತ್ತು. ಅವರ ಕಾರ್ಯಕ್ರಮದಲ್ಲಿ ಸುಶಿಕ್ಷಿತರಿಗಂತೂ ಏನೂ ಸ್ಥಾನವೆ ಇಲ್ಲ. ಅವರು ಕೊನೆಗೂ ಸುಶಿಕ್ಷಿತರನ್ನು ದಬ್ಬಬೇಕೆಂದು ಪ್ರಯತ್ನಿಸಿದರು. ಲಾರ್ಡ ಕರ್ಝನರಲ್ಲಿ ಸ್ವಲ್ಪ ವಿನಯವಿದ್ದರೆ ಇಂತಹ ದೊಡ್ಡ ಪ್ರಮಾದವಾಗುತ್ತಿದ್ದಿಲ್ಲ. " ವಂಗಭಂಗವನ್ನೂ ಗೋಖಲೆಯವರು ತೀಕ್ಷ್ಣವಾಗಿ ನಿಷೇಧಿಸಿದರು. ಸ್ವದೇಶಿ ಚಳವಳಿಗಳಿಗೆ ಅವರು ಪ್ರೋತ್ಸಾಹವನ್ನು ಕೊಟ್ಟರು. ಬಹಿಷ್ಕಾರದ ಶಸ್ತ್ರವು ತಾತ್ಪೂರ್ತಿಕವಾಗಿ ಉಪಯೋಗಿಸಲ್ಪಡಬೇಕೆಂದು ಪ್ರತಿಪಾದಿಸಿದರು. ಬ್ರಿಟಿಶ ಸಾಮ್ರಾಜ್ಯದ ಘಟಕಗಳಾಗಿ ಸ್ವರಾಜ್ಯವನ್ನು ಅನುಭವಿಸುತ್ತಿರುವ ಸ್ವರಾಜ್ಯ ಪದ್ಧತಿಯೆ ಕಾಂಗ್ರೆಸ್ಸಿನ ಗುರಿಯೆಂದು ಹೇಳಿದರು. ಹೊಣೆಗಾರಿಕೆಯಿಲ್ಲದ ಆಳರಸರ ರಾಜ್ಯಪದ್ಧತಿಯನ್ನು ಕೀಳ್ಗಳೆದರು. ಕಾಯದೆ ಕೌನ್ಸಿಲುಗಳಲ್ಲಿಯೂ ಸೆಕ್ರೆಟರಿ ಆಫ್ ಸ್ಟೇಟಸ ಕೈಯಲ್ಲಿಯೂ, ಎಕ್ಝಿಕೂಟಿವ್ಹ ಕೌನ್ಸಿಲುಗಳಲ್ಲಿಯೂ ಹಿಂದಿ ಜನರು ಸೇರುವಂತೆ ಮಾಡಿ ಹಿಂದೀ ಜನರಿಗೆ ಹೆಚ್ಚಿನ ಅಧಿಕಾರಗಳನ್ನು ದೊರಕಿಸುವದು, ರಾಜ್ಯದಾಡಳಿತೆಯಲ್ಲಿ ಸುಧಾರಣೆಯನ್ನುಂಟು ಮಾಡುವದು, ರಾಜ್ಯದ ಆಯವ್ಯಯದ ವಿಷಯದಲ್ಲಿ ಯೋಗ್ಯ ವ್ಯವಸ್ಥೆಯನ್ನು ಮಾಡುವದು ದೇಶದ ಜನರಿಗೆ ಸುಖವಾಗುವಂತಹ ಉಪಾಯಗಳನ್ನು ಕೈಕೊಳ್ಳುವದು ಇವೆ ನಮ್ಮ ಇವ್ರೊತ್ತಿನ ಗುರಿಗಳೆ"ಂದು ಹೇಳಿದರು. ಈ ಅಧಿವೇಶನದಲ್ಲಿ [illegible] ಯುವರಾಜರಾಗಿದ್ದ ಜಾರ್ಜರಿಗೆ ಸ್ವಾಗತವನ್ನು ಕೊಡುವ ಠರಾವಿನ ಚರ್ಚೆನಡೆದಾಗ ರಾಷ್ಟ್ರೀಯ ಪಕ್ಷದ ಕೆಲವು ಜನರು ಸಭೆಯಿಂದೆದ್ದು ಹೋದರು. ವಂಗಭಂಗದ ವಿಷಯಕ್ಕೂ ಬಂಗಾಲದಲ್ಲಿ ಸರಕಾರದವರು ಕೈಕೊಂಡ ದಬ್ಬಾಳಿಕೆಯ ವಿಷಯಕ್ಕೂ ನಿಷೇಧಪರವಾದ ಠರಾವುಗಳು ಪಾಸಾದವು. ಹಿಂದುಸ್ತಾನದ ದಾರಿದ್ರ್ಯವನ್ನು ಕುರಿತು ಲೋಕಮಾನ್ಯ ಟಿಳಕರು ನಿರ್ಣಯವನ್ನು ಮಂಡಿಸಲು ಎದ್ದ ಕೂಡಲೆ ಸಭೆಯಲ್ಲಿ ಪ್ರಚಂಡ ಜಯ ಜಯಕಾರವಾಯಿತು. ಇದರಿಂದ ರಾಷ್ಟ್ರೀಯ

ಪಕ್ಷದ ಕಡೆಗೆ ಜನರು ಮೆಲ್ಲಗೆ ಒಲಿಯುತ್ತಿದ್ದರೆಂದು ಕಂಡು ಬಂದಿತು. ಕಾಶಿಯಲ್ಲಿಯೆ ರಾಷ್ಟ್ರೀಯ ಪಕ್ಷದ ಮುಖಂಡರ ಸಭೆಯಾಗಿ ಲೋಕಮಾನ್ಯರು ಸತ್ಯಾಗ್ರಹದ ಕಾರ್ಯಕ್ರಮವನ್ನು ಅಲ್ಲಿ ಕೂಡಿದ ಜನರೆದುರಿಗಿಟ್ಟರು. ಕಾಶಿಯಲ್ಲಿ ಮಂದಪಕ್ಷದವರಿಗೂ ಉಗ್ರಪಕ್ಷದವರಿಗೂ, ತಿಕ್ಕಾಟವು ಪ್ರಾರಂಭವಾಗಿತ್ತು. ಪಂಡಿತ ಮದನಮೋಹನ ಮಾಲವೀಯರ ಹಿಂದೂ ವಿದ್ಯಾಪೀಠದ ಕಾರ್ಯವು ಅದೇ ಕಾಲಕ್ಕೆ ಮುಂದುವರಿಸಲ್ಪಟ್ಟಿತು. ಬನಾರಸದ ಮಹಾರಾಜರ ಕೈಯಿಂದ ಸ್ವದೇಶಿ ಪ್ರದರ್ಶನವು ಅದೇ ಕಾಲಕ್ಕೆ ತೆರೆಯಲ್ಪಟ್ಟಿತು. ಅಂತೂ ಕಾಂಗ್ರೆಸ್ಸಿನ ಕಾರ್ಯವಾಹಕತ್ವವು ಇನ್ನು ಮಂದಪಕ್ಷದವರ ಕೈಯಲ್ಲಿಯೆ ಇದ್ದರೂ ಅದರ ಸುತ್ತಲು ಉಗ್ರವಾದ ರಾಷ್ಟ್ರೀಯ ಮತಾವರಣವು ಆವರಿಕೊಂಡಿತ್ತು.

**(೩೯) ವಂಗಭಂಗ ಚಳವಳಿಯ ಸ್ವರೂಪವು**:— ವಂಗಭಂಗದ ವಿರುದ್ಧವಾಗಿ ಎದ್ದ ಚಳವಳಿಯ ವಿಸ್ತೃತವಾದ ವರ್ಣನೆಯನ್ನು ಕೊಡುವದು ಇಲ್ಲಿ ಸಾಧ್ಯವಿಲ್ಲ. ೧೯೦೫ರಿಂದ ೧೯೦೮ರ ವರೆಗೆ ಸಾಮಾನ್ಯವಾಗಿ ಈ ಚಳವಳಿಯು ಎಲ್ಲ ರೀತಿಯಿಂದಲೂ ಒಳ್ಳೆ ಪ್ರಖರತೆಯಿಂದ ನಡೆದಿತ್ತು. ಅದರ ಮುಖ್ಯ ಸ್ವರೂಪವು ಸ್ವದೇಶಿ, ಬಹಿಷ್ಕಾರ ಮತ್ತು ರಾಷ್ಟ್ರೀಯ ಶಿಕ್ಷಣ ಈ ರೀತಿ ಮೂರು ವಿಧವಾಗಿತ್ತೆಂದು ಹೇಳಬಹುದು. ಮುಂದೆ ೧೯೦೬ರಲ್ಲಿ ದಾದಾಭಾಯಿ ನವರೋಜಿಯವರು ಸ್ವರಾಜ್ಯದ ಮಹಾಮಂತ್ರವನ್ನು ಉದ್ಘೋಷಿಸಿದನಂತರ ಸ್ವರಾಜ್ಯದ ಘೋಷಣೆಯು ಎಲ್ಲ ಕಡೆಗೆ ಆಗಹತ್ತಿತ್ತು. ಮೇಲಿನ ಕಾರ್ಯಕ್ರಮಗಳನ್ನು ನೆರವೇರಿಸುವಾಗ ಹಿಂದುಸ್ಥಾನದ ರಾಜಕೀಯ ಕಾರ್ಯಕರ್ತರಲ್ಲಿ ಮೂರು ಬಣಗಳು ಕಂಡು ಬಂದವು. ಮೊದಲನೆಯ ಬಣವು, ಸುರೇಂದ್ರನಾಥ ಬಾನರ್ಜಿ, ಫಿರೋಜಶಹಾ ಮೆಹತಾ, ಗೋಪಾಲಕೃಷ್ಣ ಗೋಖಲೆ, ಪಂಡಿತ ಮದನಮೋಹನ ಮಾಲವೀಯ, ಮುಂತಾದ ಕಾಂಗ್ರೆಸ್ಸಿನೊಳಗಿನ ಪ್ರಮುಖ ಮುಖಂಡರ ಪಕ್ಷವು. ಇವರೆಲ್ಲರು ಮೊದಲಿನಿಂದಲೂ ಬ್ರಿಟಿಶ ಸರಕಾರದ ವಿಷಯದಲ್ಲಿ ನಮ್ರಭಾವವನ್ನು ತಾಳಿದವರು. ಬಹಿಷ್ಕಾರದ ಅಸ್ತ್ರವನ್ನು ಕೈಕೊಂಡದ್ದೆ ಆದರೆ ಅದನ್ನು ಕೇವಲ ಬ್ರಿಟಿಶರ ಲಕ್ಷ್ಯವನ್ನು ಸೆಳೆಯುವದಕ್ಕಾಗಿ, ಬ್ರಿಟಿಶ ಸರಕಾರದ ಪ್ರತೀಕಾರಕ್ಕಂತಲ್ಲ; ಎರಡನೆಯ ಬಣವು ಲೋಕಮಾನ್ಯ ಟಿಳಕ,

ಅರವಿಂದ ಘೋಷ, ಬಿಪಿನ ಚಂದ್ರಪಾಲ, ಮೋತಿಲಾಲ ಘೋಷ, ಮುಂತಾದವರದು. ಪ್ರತೀಕಾರದ ಯಾವದೊಂದು ಉಗ್ರ ಉಪಾಯವನ್ನು ಕೈಕೊಳ್ಳಲಾರದೆ ರಾಷ್ಟ್ರದ ದುಃಖಗಳು ನೀಗಲಾರವೆಂದು ಇವರ ಅಭಿಪ್ರಾಯವಿತ್ತು. ಮೂರನೆಯ ಬಣವು ಕ್ರಾಂತಿಕಾರಕರದು. ಹಿಂಸಾ ಮಾರ್ಗದಿಂದ ಬ್ರಿಟಿಶರನ್ನು ಹಿಂದುಸ್ತಾನದಿಂದ ತಳ್ಳದೆ ಹಿಂದುಸ್ತಾನಕ್ಕೆ ತರಣೋಪಾಯವಿಲ್ಲವೆಂದು ಇವರ ಅಭಿಪ್ರಾಯವು. ಆ ಅಭಿಪ್ರಾಯದಂತೆ ಅವರು ಹಿಂಸಾ ಮಾರ್ಗದ ಚಟುವಟಿಕೆಗಳನ್ನು ಪ್ರಾರಂಭಿಸಿದರು. ಆ ಮೂರು ವರ್ಷಗಳೊಳಗಿನ ಬಂಗಾಲೀ ಚಳವಳಿಯ ಪ್ರತಿಯೊಂದು ಮಾತನ್ನು ವಿಸ್ತಾರವಾಗಿ ಕೊಡಲು ಸಾಧ್ಯವಿಲ್ಲೆಂದು ಮೇಲೆ ಹೇಳಿದ್ದೇವೆ. ಆದರೆ ಮೇಲ್ಕಾಣಿಸಿದ ಆ ಚಳವಳಿಯ ಮುಖ್ಯ ಸ್ವರೂಪವನ್ನೂ ಬೇರೆ ಬೇರೆ ಬಣಗಳ ಕಾರ್ಯಕ್ರಮವನ್ನೂ ಸರಕಾರದ ವಿವಿಧವಾದ ದಬ್ಬಾಳಿಕೆಯನ್ನೂ ಇಲ್ಲಿ ಸ್ವಲ್ಪದರಲ್ಲಿ ವಿವರಿಸಿದೆ.

**(೪೦) ಸ್ವದೇಶಿ ಬಹಿಷ್ಕಾರ:—** ಬಂಗಾಲದ ಚಳವಳಿಯು ಬ್ರಿಟಿಶ ಮಾಲಿನ ಬಹಿಷ್ಕಾರದಿಂದಲೆ ಸುರುವಾಯಿತೆಂದು ಮೇಲೆ ಹೇಳಿದೆ. ಆಂಗ್ಲೊ ಇಂಡಿಯನರು ಬಹಿಷ್ಕಾರದ ಚಳವಳಿಯು ಪ್ರಾರಂಭವಾದ ಕೂಡಲೆ ಅದರ ವಿಷಯಕ್ಕೆ ನಗುಚಾಟಿಗೆಯ ಮಾತುಗಳನ್ನಾಡಿದರು. ಆದರೆ ಸ್ವದೇಶಿ ಬಹಿಷ್ಕಾರದ ಚಳವಳಿಯು ಮಾತ್ರ ಒಳ್ಳೆ ವಿಜೃಂಭಣೆಯಿಂದ ಮುಂದೆ ಸಾಗಿತೆಂದು ಹೇಳಲು ಅಡ್ಡಿ ಇಲ್ಲ. ಸುರೇಂದ್ರನಾಥ ಬಾನರ್ಜಿಯವರು ಈ ವಿಷಯದಲ್ಲಿ ಹೀಗೆ ಬರೆದಿದ್ದಾರೆ. "ರಾಜ್ಯಕ್ರಾಂತಿಯನ್ನು ನಾನು ನೋಡಿಲ್ಲ; ಅದು ಹೇಗೆ ಇರಬಹುದೆಂಬ ಕಲ್ಪನೆಯನ್ನು ನಾನು ಮಾಡಲಾರೆ. ಆದರೆ ರಾಜ್ಯಕ್ರಾಂತಿಯು ಮುಂದೆ ಆಗಬೇಕಿದ್ದರೆ ಅದರ ಮೊದಲು ಬರುವ ಸಾರ್ವಜನಿಕ ಪ್ರಕ್ಷೋಭದ ಸ್ವಲ್ಪ ಕಲ್ಪನೆಯು ಮಾತ್ರ ನನಗೆ ಸ್ವದೇಶಿ ಆಂದೋಲನದ ಕಾಲಕ್ಕೆ ಬಂದಿತು. ಅಭೂತ ಪೂರ್ವವಾದ ಒಂದು ವಿಲಕ್ಷಣವಾದ ವಾತಾವರಣವು ನಿರ್ಮಾಣವಾಗುತ್ತದೆ. ಮುದುಕರೂ, ಹರೆಯದವರೂ, ಶ್ರೀಮಂತರೂ, ಬಡವರೂ, ಅಕ್ಷರಿಗರೂ, ನಿರಕ್ಷರರೂ, ದೊಡ್ಡವರೂ, ಎಲ್ಲರಲ್ಲಿಯೂ ಒಂದೇ ಭಾವನೆ ಮೂಡುತ್ತದೆ ಎಲ್ಲರನ್ನು ಯಾವದೇ ಒಂದು ಅದೃಶ್ಯವಾದ ಶಕ್ತಿಯು ಇತ್ತಿಂದತ್ತ ತೂಗುತ್ತದೆ. ಆ

ಪರಿಸ್ಥಿತಿಯಲ್ಲಿ ಬುದ್ಧಿಯ ತರ್ಕ ವಿತರ್ಕಗಳು ಮಾಯವಾಗಿ ಹೋಗುತ್ತವೆ. ಒಂದೇ ಒಂದು ಭಾವನೆಯ ದೊಡ್ಡ ಪ್ರವಾಹವು ಎಲ್ಲರನ್ನೂ ತನ್ನ ಶೀಘ್ರದಲ್ಲಿ ಎಳೆದುಕೊಂಡು ಹೋಗುತ್ತವೆ."

ಸ್ವದೇಶಿ ಚಳವಳಿಯಲ್ಲಿ ಸಾಹಜಿಕವಾಗಿ ತರುಣರು ಹೆಚ್ಚು ಉತ್ಸಾಹದಿಂದ ಭಾಗವಹಿಸಿದರು. ಸುರೇಂದ್ರನಾಥ ಬಾನರ್ಜಿಯವರಂತಹ ಮುಖಂಡರು ಅನೇಕ ಸಾರ್ವಜನಿಕ ಸಭೆಗಳಲ್ಲಿ ಒಳ್ಳೆ ಉತ್ಸಾಹದ ಮಾತುಗಳನ್ನಾಡಿ ವಿದ್ಯಾರ್ಥಿಗಳಲ್ಲಿ ಜಾಗೃತಿಯನ್ನುಂಟು ಮಾಡಿದರು. ವಿದ್ಯಾರ್ಥಿಗಳಲ್ಲಿ ಆಗ ಕಂಡುಬಂದ ಜಾಗೃತಿಯು ಕೇವಲ ಅಭೂತಪೂರ್ವವಾಗಿತ್ತು. ಕ್ಲಾಸಿಗೆ ಪರದೇಶಿ ವಸ್ತ್ರವನ್ನು ಧರಿಸಿಗೊಂಡು ಬರುವ ಧೈರ್ಯವು ಯಾವ ವಿದ್ಯಾರ್ಥಿಗೂ ಆಗುತ್ತಿರಲಿಲ್ಲ. ಕ್ಲಾಸಿನ ಪರೀಕ್ಷೆಗಳ ಕಾಲಕ್ಕೆ ಪರದೇಶಿ ಕಾಗದಗಳನ್ನು ಬರೆಯಲಿಕ್ಕೆಂದು ಕೊಟ್ಟರೆ ಅವುಗಳನ್ನು ದೂರ ಬಿಸಾಟಿ ಬಿಡುತ್ತಿದ್ದರು. ಸುರೇಂದ್ರನಾಥರು ಈ ವಿಷಯದಲ್ಲಿಯ ಕೆಲವು ಉದಾಹರಣೆಗಳನ್ನು ತಮ್ಮ ಆತ್ಮ ಚರಿತ್ರೆಯಲ್ಲಿ ಕೊಟ್ಟಿರುವರು. ರಿಪನ್ ಕಾಲೇಜಿಯೇಟ ಸ್ಕೂಲಿನಲ್ಲಿ ನಾಲ್ಕನೇ ಯತ್ತೆಯ ಒಬ್ಬ ವಿದ್ಯಾರ್ಥಿಯು ಒಂದು ದಿನ ಶಾಲೆಗೆ ಪರದೇಶಿ ವಸ್ತ್ರವನ್ನುಟ್ಟುಗೊಂಡು ಬಂದಿದ್ದನು. ಈ ಮಾತು ಗೊತ್ತಾದ ಕೂಡಲೆ ಎಲ್ಲ ವಿದ್ಯಾರ್ಥಿಗಳು ಅವನನುತ್ತ ಮುಕರಿದರು. ಅವನ ಮೈ ಮೇಲಿನ ಶರ್ಟನ್ನು ಹರಿದು ಚೂರು ಚೂರು ಮಾಡಿದರು. ಅವನು ಜೀವದಿಂದ ಉಳಕೊಂಡು ಹೋದದ್ದೆ ಅವನ ದೈವ. ರಿಪನ್ ಕಾಲೇಜಿನಲ್ಲಿ ಪರೀಕ್ಷೆಯ ಕಾಲಕ್ಕೆ ಪರದೇಶಿ ಕಾಗದವನ್ನು ಕೊಟ್ಟರೆ ಎಲ್ಲ ವಿದ್ಯಾರ್ಥಿಗಳು ಗುಂಪುಗಟ್ಟಿಕೊಂಡು ಆ ಕಾಗದವನ್ನು ಮುಟ್ಟುವದಿಲ್ಲವೆಂದು ನಿಷ್ಠುರವಾಗಿ ಹೇಳಿ ಬಿಟ್ಟರು. ಕಾಲೇಜಿನ ಅಧಿಕಾರಿಗಳು ಕೂಡಲೆ ದೇಶಿ ಕಾಗದವನ್ನು ತಂದು ಕೊಡಬೇಕಾಯಿತು. ವಿದ್ಯಾರ್ಥಿಗಳ ಈ ಉತ್ಸಾಹದ ಸೊಂಕು ಬಂಗಾಲದ ಇಡೀ ಸಮಾಜವನ್ನೇ ತಟ್ಟಿಬಿಟ್ಟಿತು. ಸ್ವದೇಶಿ ಚಳವಳಿಯು ಮನೆ ಮನೆಯನ್ನೂ ಆಡರಿಬಿಟ್ಟಿತು. ಮನೆಯಲ್ಲಿಯ ಹೆಂಗಸರು ಗಂಡಸರಿಗಿಂತಲೂ ಹೆಚ್ಚು ಉತ್ಸಾಹಪೂರ್ಣರಾಗಿದ್ದರು. ಮದುವೆಯ ಕಾಲಕ್ಕೆ ಮದುಮಗನು ಎಲ್ಲ ಪರದೇಶಿ ವಸ್ತ್ರಗಳನ್ನು ನಿರಾಕರಿಸುತ್ತಿದ್ದನು. ಐದೇ ವರ್ಷದ ವಯಸ್ಸಿನವಳಾದ ಸುರೇಂದ್ರನಾಥ ಬಾನರ್ಜಿಯವರ

ಮೊಮ್ಮಗಳು, ಆಕೆಗೆಂದು ಒಬ್ಬ ಆಪ್ತನು ಕಳಿಸಿಕೊಟ್ಟ ಸ್ಲಿಪರಿನ ಜೋಡನ್ನು ಅವು ಪರದೇಶೀಯೆಂದು ತಿರುಗಿ ಕಳಿಸಿಕೊಟ್ಟಳು. ಆರೇ ವರುಷ ವಯಸ್ಸಿನ ಇನ್ನೊಬ್ಬ ಸಣ್ಣ ಬಾಲಿಕೆಯು ಜಡ್ಡಿನಿಂದ ಸಾವಿನ ಬಾಯಿಯಲ್ಲಿ ತುತ್ತಾಗಿರುವಾಗ "ನಾನು ಪರದೇಶೀ ಔಷಧವನ್ನು ತಕ್ಕೊಳ್ಳಲಿಕ್ಕಿಲ್ಲ"ವೆಂದು ಬಡಬಡಿಸುತ್ತಲಿದ್ದಳೆಂದು ಒಬ್ಬ ದೊಡ್ಡ ಡಾಕ್ಟರರು ಪ್ರತ್ಯಕ್ಷವಾಗಿ ತಮ್ಮ ಅನುಭವವನ್ನು ಸುರೇಂದ್ರನಾಥರಿಗೆ ಹೇಳಿದರು.

ಈ ತರದ ಉತ್ಕಟವಾದ ಸ್ವದೇಶಿ ಚಳವಳಿಯಿಂದ ಬಂಗಾಲದೊಳಗೆ ಅನೇಕ ವಿಧವಾದ ವಿಧಾಯಕಕಾರ್ಯವು ಆಯಿತು. ಅಲ್ಲಲ್ಲಿ ಸಾಬೂನು ಕಡ್ಡಿಪೆಟ್ಟಿಗೆ ಮತ್ತು ನೂಲಿನ ಕಾರಖಾನೆಗಳು ಹೊರಟವು. ಹುಗಳಿ ಜಿಲ್ಲೆಯಲ್ಲಿಯ ಹರಿಪಾಲದಲ್ಲಿ ಸ್ವದೇಶಿ ಸಭೆ ಆದಾಗ ಅಲ್ಲಿಗೆ ಬಂದ ನೇಕಾರರೆಲ್ಲರು ಈ ಚಳವಳಿಯಿಂದ ತಮಗೆ ಒಳ್ಳೆಯ ಲಾಭವಾಗಿದೆಯೆಂದು ಹೇಳಿದರು. ಬಂಗಾಲದ ಮುಖಂಡರೆಲ್ಲರು ಪ್ರಯತ್ನಮಾಡಿ ೧೮ ಲಕ್ಷ ರೂಪಾಯಿಗಳನ್ನು ಕೂಡಿಸಿ ವಂಗ ಲಕ್ಷ್ಮೀ ಮಿಲ್ಲ ಯೆಂಬ ಹೊಸ ಗಿರಣಿಯನ್ನು ಸ್ಥಾಪಿಸಿದರು. ಬಂಗಾಲದ ನ್ಯಾಶನಲ್ ಬ್ಯಾಂಕು ಆದೇ ಕಾಲಕ್ಕೆ ಸ್ಥಾಪಿಸಲ್ಪಟ್ಟಿತು. ನ್ಯಾಶನಲ್ ಇನ್ಶ್ಯುಅರನ್ಸ ಕಂಪನಿಯೂ, ಹಿಂದುಸ್ಥಾನದ ಕೋ ಅಪರೇಟಿವ್ಹ ಇನ್ಶ್ಯುಅರನ್ಸ ಕಂಪನಿಯೂ ಆದೇ ಕಾಲಕ್ಕೆ ಹುಟ್ಟಿದವು.

ಬಂಗಾಲದಲ್ಲಿ ಸ್ವದೇಶಿ ಚಳವಳಿಯು ಉಗಮವಾದನಂತರ ಮುಂಬಯಿ ಇಲಾಖೆಯಲ್ಲಿಯೂ ಲೋಕಮಾನ್ಯರು ಅದನ್ನು ಎತ್ತಿ ಹಿಡಿದರು. ಮಹಾರಾಷ್ಟ್ರ ಮತ್ತು ಕರ್ನಾಟಕ ಇವೆರಡು ಪ್ರಾಂತಗಳಲ್ಲಿಯೂ ಅನೇಕಸಭೆಗಳಾಗಿ ಅನೇಕ ಸ್ವದೇಶಿ ಅಂಗಡಿಗಳು ತೆರೆಯಲ್ಪಟ್ಟವು. ೧೯೦೫ರಲ್ಲಿ ಮುಂಬಯಿಯಲ್ಲಿ ಸ್ವದೇಶಿ ಕೋ ಆಪರೆಟಿವ್ಹ ಸ್ಟೋರ್ಸ್ ಹೊರಡಿಸಲ್ಪಟ್ಟಿತು. ಸ್ವದೇಶಿ ಸಕ್ಕರೆಯಲ್ಲಿ ಎಲುಬಿನ ಪುಡಿ ಕೂಡಿದ್ದರಿಂದ ಅದನ್ನು ಬಹಿಸ್ಕರಿಸಬೇಕೆಂದು ಟಿಳಕರು ಪ್ರತಿಪಾದಿಸಿದರು. ೧೯೦೫ನೆಯ ಇಸ್ವಿಯ ಅಗಸ್ಟ ೨೨ನೇತಾರೀಖಿನ ದಿನ ಪುಣೆಯ ಸಾರ್ವಜನಿಕ ಸಭೆಯಮುಂದಿರದಲ್ಲಿ ವಿದ್ಯಾರ್ಥಿಗಳ ದೊಡ್ಡ ಸಭೆಯಾಯಿತು. ಅಲ್ಲಿ ಪರದೇಶಿ ವಸ್ತ್ರಗಳು ಕೂಡಿಹಾಕಲ್ಪಟ್ಟು ಸುಡಲ್ಪಟ್ಟವು. ಮುಂದೆ ಪೈಸಾಫಂಡ ಸಂಸ್ಥೆಯು ಒಳ್ಳೆ ಜೋರಿನಿಂದ ಧೃಢೀಕರಿಸಲ್ಪಟ್ಟಿತು. ಈ ೨–೩ ವರ್ಷಗಳಲ್ಲಿ ಉಳಿದ ಮಾತುಗಳೊಡಗೆ ಸ್ವದೇಶಿ ಪ್ರಚಾರವನ್ನು

ಲೋಕಮಾನ್ಯ ಟಿಳಕರು ಒಳ್ಳೆ ಜೋರಿನಿಂದ ಮಾಡಿದರು. ೧೯೦೭ನೆ ಇಸ್ವಿಯ ಡಿಸೆಂಬರ ತಿಂಗಳಲ್ಲಿ ಚಿಂಚಪೋಕಳಿಯಲ್ಲಿ ಕೂಲಿಕಾರರೆದುರಿಗೆ ಮಾತನಾಡುವಾಗ ಟಿಳಕರು ಸ್ವದೇಶಿಯ ವಿಷಯಕ್ಕೆ ಹೀಗೆ ಹೇಳಿದರು. "ಸ್ವದೇಶಿಯ ವಿಷಯಕ್ಕೆ ಯಾರಾದರೂ ನಿಮ್ಮ ಬುದ್ಧಿ ಭೇದವನ್ನು ಮಾಡಬಹುದು. ಆದರೆ ಅದನ್ನು ನೀವು ಲೆಕ್ಕಿಸಕೂಡದು. ಸ್ವದೇಶಿಯು ನಿಮ್ಮ ಹೊಟ್ಟೆಯ ಪ್ರಶ್ನೆ ಇದೆ. ನಾನು ನಿಮ್ಮ ಗಿರಣಿಯ ಅರಿವೆಯನ್ನು ತೆಗೆದುಕೊಳ್ಳುತ್ತೇನೆ. ಆ ಅರಿವೆಯನ್ನು ಮಾಡುವ ಕೂಲಿಯು ನಿಮಗೆ ದೊರೆಯುತ್ತದೆ. ಅಂದರೆ ಸ್ವದೇಶಿಯಿಂದ ನಿಮಗೆ ಪ್ರತ್ಯಕ್ಷವಾಗಿ ಲಾಭವಾಗುತ್ತದೆ. ನೀವು ಎರಡು ಲಕ್ಷ ಜನರಿರುವಿರಿ. ಸರಕಾರದ ಹತ್ತರ ಎರಡು ಲಕ್ಷ ಸೈನ್ಯವಾದರೂ ಇರುವದಿಲ್ಲ. ನಿಮ್ಮ ದೇಶದಲ್ಲಿ ಹೊಟ್ಟೆ ತುಂಬಿಕೊಳ್ಳುವ ಸಾಧನವು ನಿಮ್ಮ ಹತ್ತರ ಇಲ್ಲ. ಆದುದರಿಂದಲೆ ಮನೆಮಾರು ಬಿಟ್ಟು ಮುಂಬೈಯಂತಹ ಪಟ್ಟಣಕ್ಕೆ ನೀವು ಬರುವಿರಿ. ಸ್ವದೇಶಿಯ ಉದ್ದೇಶವಾದರೂ ನಿಮಗೆ ಉದ್ಯೋಗ ಧಂದೆಗಳು ದೊರಕಬೇಕೆಂಬುದೆ ಇದೆ."

(ಳಙ) **ಬಹಿಷ್ಕಾರ:—** ಸ್ವದೇಶಿಯೊಡನೆ ಬಹಿಷ್ಕಾರದ ಚಳವಳಿಯೂ ಒಳ್ಳೆ ಜೋರಿನಿಂದ ನಡೆಯಿತು. ೧೯೦೫ನೆಯ ಇಸ್ವಿಯಲ್ಲಿ ಕಲಕತ್ತೆಯಿಂದ ಮ್ಯಾಂಚೆಸ್ಟರ ಅರಿವೆಗಾಗಿ ಯಾವ ಬೇಡಿಕೆಯೂ ಹೋಗಲಿಲ್ಲ. ಸ್ವಲ್ಪೇ ಕಾಲದಲ್ಲಿ ಬಹಿಷ್ಕಾರವು ಅತ್ಯಂತ ಪ್ರಖರವಾಯಿತು. ಪೂರ್ಣವಾಗಿ ಆಂಗ್ಲೋ ಇಂಡಿಯನ ಪಕ್ಷಪಾತಿಯಾದ ಇಂಗ್ಲಿಷಮನ್ನ ಪತ್ರಿಕೆಯು ಈ ಮಾತನ್ನು ಒಪ್ಪಿಕೊಂಡಿತು. "ಕಲಕತ್ತೆಯಲ್ಲಿಯ ಪರದೇಶಿ ಅರಿವೆಯೆಲ್ಲವೂ ಮಾರಾಟವಾಗದೆ ಹಾಗೆಯೆ ಬಿದ್ದಿರುವದೆಂಬ ಮಾತು ಸಂಪೂರ್ಣವಾಗಿ ನಿಜವಿದೆ. ಅನೇಕ ಮಾರವಾಡಿ ವ್ಯಾಪಾರಿಗಳು ಪೂರಾ ಹಾಳಾಗಿ ಹೋದರು. ಬ್ರಿಟಿಶ ಮಾಲಿನ ವ್ಯಾಪಾರವನ್ನು ಮಾಡುವ ಅನೇಕ ಯುರೋಪಿಯನ್ ಕಂಪನಿಗಳು ಆ ವ್ಯಾಪಾರವನ್ನೆ ನಿಲ್ಲಿಸಬೇಕಾಗಿ ಬಂದಿನೆ. ಮೊದಲು ಮಾಲು ಬೇಡಿದ ಮಾರವಾಡಿ ಮತ್ತು ಹಿಂದಿ ವ್ಯಾಪಾರಸ್ಥರು ಈಗ "ಈ ಮಾಲಿಗೆ ಬೇಡಿಕೆಯೆ ಇಲ್ಲ; ನಾವು ಅವನ್ನೀಗ ತಕೊಳ್ಳಲಾರೆವೆಂ"ದು ಹೇಳುತ್ತಾರೆ. ಇವೆಲ್ಲ ಮಾತುಗಳನ್ನು ಇನ್ನು ಮುಂದೆ ಬಚ್ಚಿಟ್ಟು ಪ್ರಯೋಜನವಿಲ್ಲ. ಬಹಿಷ್ಕಾರದಿಂದ ಆದ ಹಾನಿಯು ಪೂರ್ಣವಾಗಿ ಬಯಲಿಗೆ ಬರುವದೆ ಈಗ

ಉಚಿತವಾಗಿದೆ. ಇದರಿಂದ ಬಹಿಷ್ಕಾರದ ಪ್ರವರ್ತಕರಿಗೆ ಉತ್ತೇಜನವು ದೊರೆಯುವದೆಂಬ ಮಾತು ಸರಿಯಾದುದಲ್ಲ. ಏಕಂದರೆ ಬಹಿಷ್ಕಾರವಾದಿಗಳಿಗೆ ಉತ್ತೇಜನದ ಅವಶ್ಯಕತೆಯಿಲ್ಲ. ಆದರೆ ಸರಕಾರದ ಶತ್ರುಗಳು ಬಹಿಷ್ಕಾರದ ಬ್ರಹ್ಮಾಸ್ತ್ರವನ್ನು ತೆಗೆದು ಹಿಂದುಸ್ತಾನದೊಳಗೆ ಬ್ರಿಟಿಶರಿಗೆ ಆಗುವ ಲಾಭವನ್ನು ತಡೆದು ಹಿಡಿದಿರುವರೆಂಬ ಮಾತು ಇಂಗ್ಲಂಡದೊಳಗಿನ ಸಾರ್ವಜನಿಕರಿಗೂ, ಹಿಂದುಸ್ತಾನದ ಸರಕಾರದವರಿಗೂ, ತಿಳಿಯುವ ಸಮಯವು ಈಗೊದಗಿದೆ." ಬಹಿಷ್ಕಾರದ ಮೇಲೆ ಬೆಂಕಿಯನ್ನು ಕಾರುವ ಈ ಬರಹದಲ್ಲಿ ಕೊನೆಯ ಮಾತುಗಳು ಹೀಗಿದ್ದವು: "ಈಗ ಮುಂದೆ ಬಂದಿರುವ ಮುಖ್ಯ ಪ್ರಶ್ನೆಯೆಂದರೆ ಸರಕಾರದವರು ಈ ಬಹಿಷ್ಕಾರದ ವಿಷಯಕ್ಕೆ ಏನು ಮಾಡುವರು ? ಬಹಿಷ್ಕಾರವನ್ನು ಹೀಗೆಯೆ ಮುಂದೆ ನಡೆಯಗೊಡಲು ಸಾಧ್ಯವಿಲ್ಲ. ಸಶಸ್ತ್ರ ಬಂಡಾಯಕ್ಕಿಂತಲೂ ಈ ಬಹಿಷ್ಕಾರದ ಶಸ್ತ್ರದಿಂದಲೇ ಹಿಂದುಸ್ತಾನದೊಡನೆ ಇರುವ ಬ್ರಿಟಿಶ ಸಂಬಂಧವು ಖಂಡಿತವಾಗಿ ಕಡಿದು ಹೋಗುವದು." ಇದೂ ಅಲ್ಲದೆ ಬಹಿಷ್ಕಾರದ ಚಳವಳಿಯಿಂದ ಪೂರ್ವಬಂಗಾಲದಲ್ಲಿಯಂತೂ ಬಂದುಹೊಸ ಪರಿಸ್ಥಿತಿಯು ನಿರ್ಮಾಣವಾಯಿತು. ಬಾರಿಸಾಲದ ಪೋಲೀಸ ಸುಪರಿಂಟೆಂಡೆಂಟರೂ ಕಲೆಕ್ಟರರೂ ಕೂಡಿ ಪೇಟೆಯಲ್ಲಿ ಹೋಗಿ ಮ್ಯಾಂಚೆಸ್ಟರದ ಅರಿವೆಯನ್ನುಕೊಳ್ಳಲು ಹೋದರೆ ಒಬ್ಬ ವ್ಯಾಪಾರಸ್ಥನಾದರೂ ಒಪ್ಪಲಿಲ್ಲ. ಬಾರೀಸಾಲದ ಮುಖಂಡರಾದ ಅಶ್ವಿನಿ ಕುಮಾರ ದತ್ತರ ಪರವಾನಿಗಿಯನ್ನು ತಂದರೆ ಮಾತ್ರ ನಾವು ಕೊಡುವೆವೆಂದು ಹೇಳಿದರು. ಬಾರೀಸಾಲದಲ್ಲಿ ಈ ರೀತಿಯಾದ ಅಪಮಾನವನ್ನು ಸಹಿಸದೆ ಪೂರ್ವಬಂಗಾಲದ ಲೆಫ್ಟಿನೆಂಟ ಗವ್ಹರ್ನರನಾದ ಫುಲ್ಲರನು ಕರ್ಝನನ ಸಮ್ಮತಿಯನ್ನು ತೆಗೆದುಕೊಂಡು ಬಾರೀಸಾಲಕ್ಕೆ ನೂರುಜನ ಗುರ್ಖಾ ಸೈನಿಕರನ್ನು ಕಳಿಸಿದನು. ಅನಂತರ ಸ್ಥಳಿಕ ಮುಖಂಡರು ತೆಗೆದ ಬಹಿಷ್ಕಾರ ಪತ್ರಿಕೆಯನ್ನು ತಿರುಗಿ ತೆಗೆದುಕೊಳ್ಳಿರೆಂದು ಹೇಳಿದನು. ಆ ಹುಕುಮನ್ನು ಅಮಾನ್ಯ ಮಾಡಿದರೆ ಶಾಂತತೆಯು ಭಂಗವಾಗುವದೆಂಬದನ್ನು ನೆನೆದು ಮುಖಂಡರು ಆ ಪತ್ರಿಕೆಯನ್ನು ತಿರುಗಿ ತೆಗೆದುಕೊಂಡರು. ಇದರ ಮೇಲಿನ ಉದಾಹರಣೆಯಿಂದ ಬಹಿಷ್ಕಾರದ ವರ್ಚಸ್ಸು ಎಷ್ಟು ಪ್ರಖರವಾಗಿತ್ತೆಂಬದು ಕಂಡುಬರುವದು.

**(೪೬) ರಾಷ್ಟ್ರೀಯ ಶಿಕ್ಷಣ:**—ಬಹಿಷ್ಕಾರದ ಈ ವೇಗವನ್ನು ತಡೆದು ಹಿಡಿಯುವದಕ್ಕಾಗಿ ಬಹಿಷ್ಕಾರವನ್ನು ಸಾಗಿಸುವ ಕಾರ್ಯಕರ್ತರಾದ ವಿದ್ಯಾರ್ಥಿಯರು ಯಾವದೆ ರೀತಿಯಿಂದ ರಾಜಕಾರಣದಲ್ಲಿ ಭಾಗವನ್ನು ತೆಗೆದುಕೊಳ್ಳಕೂಡದೆಂದು ಸರಕಾರದವರು ನಿಯಮವನ್ನು ಮಾಡಿದರು. ಬಹಿಷ್ಕಾರವು ಯಶಸ್ವಿಯಾದದ್ದು ಪಿಕೆಟಿಂಗಿನಿಂದ; ಪಿಕೆಟಿಂಗನ್ನು ನಿಲ್ಲಿಸಬೇಕಾದರೆ ವಿದ್ಯಾರ್ಥಿಗಳು ಪಿಕೆಟಿಂಗಿಗೆ ಹೋಗದಂತೆ ಮಾಡಬೇಕು. ಈ ವಿಚಾರದಿಂದ ಮೇಲಿನ ಕಟ್ಟಪ್ಪಣೆಯನ್ನು ಸರಕಾರದವರು ಹೊರಡಿಸಿದರು. ಇದಕ್ಕೆತಕ್ಕ ಉತ್ತರವೆಂದು ಬಂಗಾಲೀ ಮುಖಂಡರು ಒಂದು ರಾಷ್ಟ್ರೀಯ ವಿದ್ಯಾಪೀಠವನ್ನು ಸ್ಥಾಪಿಸಬೇಕೆಂದು ಗೊತ್ತುಮಾಡಿದರು. ಈ ರಾಷ್ಟ್ರೀಯ ಶಿಕ್ಷಣದ ನೇತೃತ್ವವನ್ನು ಆ ಮೊದಲಿನ ಕಲತ್ತಾ ಹಾಯಕೋರ್ಟಿನ ಜಜ್‌ರೂ ಕಲಕತ್ತಾ ಯುನಿವ್ಹರ್ಸಿಟಿಯ ವ್ಹಾಯಿಸ ಚಾನ್ಸಲರರೂ ಆದ ಸರ ಗುರುದಾಸ ಬಾನರ್ಜಿಯವರು ವಹಿಸಲು ಸಿದ್ಧರಾದರು. ಅದೇ ಕಾಲಕ್ಕೆ ರಾಷ್ಟ್ರೀಯ ಶಿಕ್ಷಣದ ಚಳವಳಿಗೆ ಅರವಿಂದ ಘೋಷರು ಬಂದು ಕೂಡಿದರು. ಅವರ ಜೊತೆಗೆ ಅನೇಕ ಪ್ರತಿಭಾ ಸಂಪನ್ನ ಕಾರ್ಯಕರ್ತರು ಬಂದು ಕೂಡಿಕೊಂಡರು. ೧೯೦೬ನೆ ಇಸ್ವಿಯ ಅಗಷ್ಟ ೧೫ನೇ ತಾರೀಖಿನ ದಿವಸ ಕಲಕತ್ತೆಯಲ್ಲಿ ರಾಷ್ಟ್ರಿಯ ಶಾಲೆಯೂ ಮತ್ತು ಕಾಲೇಜೂ ಪ್ರಾರಂಭಿಸಲ್ಪಡುವವೆಂದು ಜಾಹಿರಾತು ಹೊರಡಿಸಲ್ಪಟ್ಟಿತು. ಸುಭೋದಚಂದ್ರ ಮಲಿಕರು ರಾಷ್ಟ್ರಿಯ ಶಿಕ್ಷಣದ ಕಾರ್ಯಕ್ಕಾಗಿ ಒಂದು ಲಕ್ಷ ರೂಪಾಯಿಗಳನ್ನು ಕೊಟ್ಟರು. ಗೌರಿಪುರದ ರಾಜರು ಏಳು ಲಕ್ಷ ರೂಪಾಯಿಗಳನ್ನು ಕೊಟ್ಟರು. ಇನ್ನೊಬ್ಬರು ೫೦ ಸಾವಿರ ರೂಪಾಯಿಗಳನ್ನು ಕೊಟ್ಟರು. ಅಂತೂ ಬಂಗಾಲಿ ರಾಷ್ಟ್ರಿಯ ಶಿಕ್ಷಣದ ಮಂಡಳವು ಒಳ್ಳೆ ಕಸುವಿನಿಂದ ಪ್ರಾರಂಭವಾಯಿತು. ಅದೆ ಕಾಲಕ್ಕೆ ಪುಣೆಯಲ್ಲಿಯೂ ಮಹಾರಾಷ್ಟ್ರ ವಿದ್ಯಾ ಪ್ರಸಾರಕ ಸಂಸ್ಥೆಯು ಪ್ರಾರಂಭವಾಗಿ ಸಮರ್ಥ ವಿದ್ಯಾಲಯದ ಜಾಹೀರನಾಮೆ ಪ್ರಸಿದ್ಧವಾಯಿತು. ಕೊಲ್ಹಾಪೂರದಲ್ಲಿ ಆ ಮೊದಲೆ ಪ್ರಾರಂಭಿಸಲ್ಪಟ್ಟ ಸಮರ್ಥ ವಿದ್ಯಾಲಯದಂತಹ ಅನೇಕ ವಿದ್ಯಾಲಯಗಳನ್ನು ಸ್ಥಾಪಿಸುವದು ನಮ್ಮ ಕಾರ್ಯಕ್ರಮವಿದೆಯೆಂದು ಜಾಹೀರನಾಮೆಯಲ್ಲಿ ಬರೆದಿದ್ದರು. ಕರ್ನಾಟಕದಲ್ಲಿಯೂ ಅನೇಕ ಸ್ಥಳಗಳಲ್ಲಿ

ರಾಷ್ಟ್ರೀಯ ವಿದ್ಯಾಲಯಗಳು ಸ್ಥಾಪಿಸಲ್ಪಟ್ಟವು. ರಾಷ್ಟ್ರೀಯ ಶಿಕ್ಷಣದ ಪ್ರಚಾರವು ೧೯೦೬ರಿಂದ ೧೯೧೦ರ ವರೆಗೆ ಅವ್ಯಾಹತವಾಗಿ ನಡೆದು ಮುಂದೆ ಸರಕಾರದವರೇ ಆ ಎಲ್ಲ ರಾಷ್ಟ್ರೀಯ ಸಂಸ್ಥೆಗಳನ್ನು ಬೆಕಾಯದೆಶೀರೆಂದು ಮಾಡಿಬಿಟ್ಟರು. ರಾಷ್ಟ್ರೀಯ ಶಿಕ್ಷಣದ ವಿಷಯಕ್ಕೆ ಆಗಿನ ಮುಖಂಡರ ವಿಚಾರಗಳು ಹೇಗಿದ್ದವೆಂಬದನ್ನು ತೋರಿಸಲು ಲೋಕಮಾನ್ಯರ ಭಾಷಣದೊಳಗಿಂದ ಒಂದೆರಡು ಮಾತುಗಳನ್ನು ಈ ಕೆಳಗೆ ಕೊಟ್ಟಿದೆ.

"ಹೊಸ ಪೀಳಿಗೆಯ ಅವನತಸ್ಥಿತಿಯು ಇನ್ನೂ ಹೀಗೆ ಎಷ್ಟು ದಿನಗಳ ವರೆಗೆ ಸಾಗಬೇಕು ? ಆದುದರಿಂದಲೆ ಎಲ್ಲ ಪ್ರಾಂತದ ಮುಂದಾಳುಗಳು ಈ ಪ್ರಶ್ನೆಯನ್ನು ಕೈಯಲ್ಲಿ ತೆಗೆದುಕೊಂಡಿದ್ದಾರೆ. ಸರಕಾರದವರು ವಿದ್ವಾಂಸರನ್ನು ತಯಾರಿಸುತ್ತಲಿರುವರು. ಆದರೆ ಈ ವಿದ್ವಾಂಸರೆಲ್ಲರ ಜ್ಞಾನವು ಕುಂಟವಾಗಿರುತ್ತದೆ. ಸರಕಾರದ ಈ ಧೋರಣಕ್ಕೆ ನಮ್ಮ ಒಪ್ಪಿಗೆ ಇಲ್ಲ. ಈ ಧೋರಣದಿಂದ ಮುಂದಿನ ಪೀಳಿಗೆಯು ಕಳೆಗೆಡುವದು. ಆದುದರಿಂದ ನಮ್ಮ ಹುಡುಗರ ಶಿಕ್ಷಣವನ್ನು ನಾವು ನಮ್ಮ ಕೈಯಲ್ಲಿಯೆ ತೆಗೆದುಕೊಳ್ಳಬೇಕು. ಮಹರ್ಷಿ ದಾದಾಭಾಯಿಯವರು ಸ್ವರಾಜ್ಯದ ಗುರಿಯನ್ನು ನಮ್ಮ ಕಣ್ಣೆದುರಿಗೆ ಇರಿಸಿದಾಗಿನಿಂದ ಒಂದೇ ಒಂದು ವರ್ಷದಲ್ಲಿ ದೊಡ್ಡ ವಿಚಾರ ಕ್ರಾಂತಿಯಾಗಿದೆ. ಆ ವಿಚಾರ ಕ್ರಾಂತಿಯ ಓಘವನ್ನು ನಾವು ಮುಂದೆ ನಡಿಸಬೇಕೆ ? ಇಲ್ಲವೆ ಅದನ್ನು ತಡೆದು ಹಿಡಿಯಬೇಕೆ ? ದಾದಾಭಾಯಿಯವರು ೫೦ ವರ್ಷ ಆಯಾಸಪಟ್ಟು ರಮೇಶಚಂದ್ರ ದತ್ತರು ೧೫ ವರ್ಷಗಳ ವರೆಗೆ ಶ್ರಮಪಟ್ಟು ಪ್ರಸ್ಥಾಪಿಸಿದ ಸಿದ್ಧಾಂತಗಳು ನಮ್ಮ ಹುಡುಗರ ಮನಸ್ಸಿನಲ್ಲಿ ಚಿಕ್ಕಂದಿನಲ್ಲಿಯೇ ಬಿಂಬಿಸಿರಬೇಕು. ರಾಷ್ಟ್ರೀಯ ಶಿಕ್ಷಣವನ್ನು ಪಡೆದವರಿಗೆ ಸರಕಾರಿ ನೌಕರಿಗಳು ಸಿಗಲಿಕ್ಕಿಲ್ಲ. ಆದರೆ ನಮ್ಮಲ್ಲಿ ವ್ಯಾಪಾರದಲ್ಲಿ ತೊಡಗಿದವರಿಗೆ ಸರಕಾರಿ ಶಿಕ್ಷಣದ ಅವಶ್ಯಕತೆಯೆಂದಿಗೂ ಅನಿಸಿಲ್ಲ. ಸಿಸ್ತಿನ ಹೆಸರಿನಿಂದ ಸಾರ್ವಜನಿಕ ಜೀವನದಲ್ಲಿ ಭಾಗತೆಗೆದುಕೊಳ್ಳಬಾರದೆಂದು ಸರಕಾರದವರು ಒಂದು ಸರಕ್ಯೂಲರನ್ನು ಹೊರಡಿಸಿರುವರು. ಸರಕಾರಿ ನಿಯಮಗಳನ್ನು ಮುರಿದರೆ ಆ ವಿದ್ಯಾರ್ಥಿಗಳು ಪರೀಕ್ಷೆಗೆ ಕೂಡ್ರಬಾರದಂತೆ ! ನಮಗೇನೂ ಸಿಸ್ತು ಬೇಡವಂತಲ್ಲ ! ರಾಷ್ಟ್ರೀಯ ಶಾಲೆಗಳಲ್ಲಿ ನಾವೇನು ಹುಡುಗರಿಗೆ ಕಳವು ಮಾಡಲಿಕ್ಕೆ ಕಲಿಸುವೆವೋ ? ವಿದ್ಯಾರ್ಥಿಗಳು

ಸಭೆಗೆ ಹೋಗಬಾರದೆಂದು ಸರಕಾರದ ಕಟಾಕ್ಷ. ಆದರೆ ವಿದ್ಯಾರ್ಥಿಗಳು ಸಭೆಗೆ ಹೋಗುವದು ಅವಶ್ಯವೆಂದು ನನಗೆ ಅನಿಸುತ್ತದೆ. ವಿದ್ಯಾರ್ಥಿಗಳಿಗೆ ಸಭೆಯಲ್ಲಿ ದೊರೆಯುವ ಶಿಕ್ಷಣವು ಸರಕಾರಿ ಶಾಲೆಗಳಲ್ಲಿ ಸಿಗುವದಿಲ್ಲೆಂದೇ ಈ ಸಭೆಗಳಿಗೆ ವಿದ್ಯಾರ್ಥಿಗಳು ಬರಬೇಕೆಂದು ನಾನು ಹೇಳುತ್ತೇನೆ.'' ಈ ಮೇಲಿನ ಮಾತುಗಳಿಂದ ರಾಷ್ಟ್ರೀಯ ಶಿಕ್ಷಣದ ಮೂಲಭೂತ ವಿಚಾರಗಳ ಕಲ್ಪನೆಯು ಬರಬಹುದು.

(೪೭) **ವಂಗಭಂಗದ ವಿರುದ್ಧ ಮತಪ್ರಚಾರವು** (೧೯೦೫-೧೯೧೧):— ಮೇಲೆ ಹೇಳಿದಂತೆ ಸರಕಾರಿ ಅನ್ಯಾಯದ ಪ್ರತಿಕಾರವನ್ನು ಮಾಡಲು ಅನೇಕ ತರದ ಕಾರ್ಯಕ್ರಮಗಳು ಕೈಕೊಳ್ಳಲ್ಪಟ್ಟವು. ಪ್ರತ್ಯಕ್ಷವಾಗಿ ವಂಗಭಂಗದ ನಿಷೇಧವಂತೂ ೧೯೦೫ರಿಂದ ವಂಗಭಂಗವು ರದ್ದಾಗುವವರೆಗೆ ನಡೆದೇಯಿತ್ತು. ಬಂಗಾಲವನ್ನೊಡೆಯುವ ಈ ಹೊಸ ಯೋಜನೆಯು ಅಕ್ಟೋಬರ ತಿಂಗಳದ ೧೬ನೇ ತಾರೀಖಿನ ದಿವಸ ಅಮಲಿನಲ್ಲಿ ಬರುವದಿತ್ತು. ಆ ದಿನವನ್ನು ಸೂತಕದ ದಿನವೆಂದು ಪಾಲಿಸಬೇಕೆಂದು ಗೊತ್ತಾಗಿತ್ತು. ಆ ದಿನದ ಕಾರ್ಯಕ್ರಮವನ್ನು ಸುರೇಂದ್ರನಾಥ ಬಾನರ್ಜಿಯವರು ಈ ರೀತಿ ವರ್ಣಿಸಿರುವರು. ''ರಾಖೀ ಬಂಧನವಿಧಿಯು ಮೊದಲನೆಯ ಕಾರ್ಯಕ್ರಮವು. ನಮ್ಮ ಬಂಧುಗಳೆಂದು ಎನ್ನಿಸಿಗೊಳ್ಳುವ ಎಲ್ಲರ ಕೈಗಳಿಗೆ ಬಂಧುವಾತ್ಸಲ್ಯದ ಕುರುಹಾದ ಕೆಂಪು ಧಾರವನ್ನು ಕಟ್ಟುವದು. ಬಂಗಾಲ ಪ್ರಾಂತವನ್ನು ಸೀಳಿ ಮಾಡಲ್ಪಡುವ ಎರಡು ತುಂಡುಗಳ ನಡುವಿನ ಬಾಂಧವ್ಯವು ಎಂದಿಗೂ ಅಳಿಯಲಾರದೆಂಬುದಕ್ಕೆ ಇದು ದ್ಯೋತಕವು.'' ೧೬ನೆಯ ಅಕ್ಟೋಬರ ದಿನ ಉಪವಾಸವನ್ನು ಮಾಡಬೇಕೆಂದು ಗೊತ್ತಾಯಿತು. ಅಡಿಗೆಯನ್ನು ಯಾರೂ ಮಾಡಕೂಡದು, ಅಂಗಡಿಯನ್ನು ಯಾರೂ ತೆರೆಯಕೂಡದು ಎಲ್ಲರೂ ಬರಿಗಾಲಿನಿಂದ ಗಂಗಾತೀರಕ್ಕೆ ಬೆಳಿಗ್ಗೆ ಹೋಗಿ ಆತ್ಮಶುದ್ಧಿಗಾಗಿ ಸ್ನಾನವನ್ನು ಮಾಡತಕ್ಕದ್ದು. ಆ ದಿನ ಪೂರ್ವ ಮತ್ತು ಪಶ್ಚಿಮ ಬಂಗಾಲದ ಅಚ್ಛೇದ್ಯ ಕುರುಹೆಯೆಂದು ಕಟ್ಟಲ್ಪಡಬೇಕಾಗಿದ್ದ ಮಂದಿರದ ತಳಗಲ್ಲನ್ನು ಕೂಡಿಸಬೇಕೆಂದು ಗೊತ್ತಾಯಿತು. ಆ ದಿನದ ಕಾರ್ಯಕ್ರಮವು ಒಳ್ಳೆ ವಿಜೃಂಭಣೆಯಿಂದ ನೆರವೇರಿತು. ಅದನ್ನು ಸುರೇಂದ್ರನಾಥರು ಹೀಗೆ ಬಣ್ಣಿಸಿರುವರು. ''ನಮ್ಮ ಕಾರ್ಯಕರ್ತರೆಲ್ಲರೂ ಧುರು

ದಿನದ ವ್ಯವಸ್ಥೆಗಾಗಿ ಇರುಳೆಲ್ಲ ದುಡಿದಿದ್ದರು. ಅವರು ಪೂರಾ ದಣಿದು ಹೋಗಿದ್ದರೂ ಒಳ್ಳೆ ಉತ್ಸಾಹದಲ್ಲಿದ್ದರು. ಬೆಳಗಾಯಿತು. ಬೆಳಗಿನ ಜಾವ ದಿಂದಲೂ ಕಲಕತ್ತೆಯ ಬೀದಿಗಳು ವಂದೇಮಾತರಂ ಜಯಘೋಷದಿಂದ ಮುಳುಗಿ ಹೋದವು. ಹರೆಯದವರೂ ಮುದುಕರೂ ಗುಂಪು ಗುಂಪಾಗಿ ನದಿಯದಂಡೆಯ ಕಡೆಗೆ ಹೋಗುತ್ತಿದ್ದರು. ವಂದೇಮಾತರಂ ದಂತಹ ದೇಶಭಕ್ತಿ ಪೂರಿತವಾದ ಹಾಡುಗಳನ್ನು ಹಾಡುತ್ತ ಸಂಕೀರ್ತನದ ಮೇಳ ಗಳು ನಡೆದಿದ್ದವು. ನದಿಯ ದಂಡೆಯಲ್ಲಿಯ ಸ್ನಾನದ ಸ್ಥಳಗಳಂತೂ, ಅಲ್ಲಿ ಕೂಡಿದ ಜನಸಂದಣಿಯಿಂದ ಕಿಕ್ಕಿರಿದು ಹೋಗಿದ್ದವು.'' ಸುರೇಂದ್ರ ನಾಥರು ಮುಂದೆ ಬರೆಯುತ್ತಾರೆ. ''ಅಸಂಖ್ಯ ಯುವಕರು ನನ್ನ ಕಾಲು ಮುಟ್ಟಿ ನಮಸ್ಕಾರಮಾಡಿ ನನ್ನನ್ನು ಅಪ್ಪಿಕೊಂಡರು. ನನ್ನ ತೋಳುಗಳೆಲ್ಲ ರಾಖೀಗಳಿಂದ ಕೆಂಪು ಕೆಂಪಾಗಿ ಕಾಣುತ್ತಲಿದ್ದವು. ಜೀವನದಲ್ಲಿ ಒಮ್ಮೆ ಮಾತ್ರ ಬರಬಹುದಾದ ಸ್ಫೂರ್ತಿಯ ದಿನವದು. ಆ ಒಂದೇ ದಿನದಿಂದ ಬಾಳ್ವೆಯ ಸಾಫಲ್ಯವಾಗುವಂತಿತ್ತು.'' ಆ ದಿನದ ಸಭೆಯಲ್ಲಿ ಸರ ಗುರುದಾಸ ಬಾನರ್ಜಿಯವರೂ ಭಾಗವಹಿಸಿದರು.

''ಬಂಗಾಲೀ ರಾಷ್ಟ್ರದ ಮನಸ್ಸಿನ ವಿರುದ್ಧ ಬಂಗಾಲ ಪ್ರಾಂತವನ್ನು ಒಡೆಯುವ ನಿಶ್ಚಯವನ್ನು ಸರಕಾರವು ಮಾಡಿತು. ನಮ್ಮ ಜನಾಂಗದ ಐಕ್ಯವು ಸತತವಾಗಿ ಬಾಳಿ ನಮ್ಮ ಪ್ರಾಂತವನ್ನೊಡೆದದ್ದರಿಂದಾಗಬಹು ದಾದ ಕೇಡುಗಳನ್ನು ತಡೆದು ಹಿಡಿಯಲು ನಾವು ಎಲ್ಲ ವಿಧದಿಂದ ಪ್ರಯ ತ್ನಿಸುವೆವು. ದೇವರು ನಮಗೆ ಶಕ್ತಿಯನ್ನು ದಯಪಾಲಿಸಲಿ!'' ಎಂದು ಸಭೆಯಲ್ಲಿ ಜಾಹೀರ ನಾಮೆಯು ಸಾರಲ್ಪಟ್ಟಿತು. ದೇಶೀ ಉದ್ಯೋಗ ಗಳಿಗೆ ಉತ್ತೇಜನ ಕೊಡುವದೆಂದು ಗೊತ್ತಾಗಿ ೭೦ ಸಾವಿರ ರೂಪಾ ಯಿಯ ನಿಧಿಯು ಕೂಡಿತು. ಆ ನಿಧಿಯ ಒಡ್ಡಿಯು ಈಗಲೂ ಎರಡು ಔದ್ಯೋಗಿಕ ಶಾಲೆಗಳಿಗೆ ಕೊಡಲ್ಪಡುತ್ತದೆ. ಸಾರ್ವಜನಿಕ ಸಭೆಯಲ್ಲಂತೂ ಆಯಿತು. ಆದರೆ ಕಾಂಗ್ರೆಸ್ಸಿನಲ್ಲಿಯೂ ವರ್ಷ ವರ್ಷಕ್ಕೂ ವಂಗಭಂಗವು ನಿಷೇಧಿಸಲ್ಪಡುತ್ತಿತ್ತು. ವಂಗಭಂಗವನ್ನು ನಿಷೇಧಿಸುವ ಕಾರ್ಯವನ್ನು ಮಂದಪಕ್ಷದವರೂ ಉಗ್ರಪಕ್ಷದವರೂ ಶಾಂತಿವಾದಿಗಳೂ ಕ್ರಾಂತಿಕಾರ ಕರೂ ೧೯೧೧ರಲ್ಲಿ ವಂಗಭಂಗವು ರದ್ದಾಗುವವರೆಗೆ ಒಂದೇ ಸವನೆ ಎಲ್ಲ ಪಂಗಡದವರು ನಡಿಸಿದರು.

೧೯೦೫ರ ಕಾಶಿಯ ಕಾಂಗ್ರೆಸಿನಲ್ಲಿ ಗೊತ್ತಾದಂತೆ ಗೋಖಲೆಯವರು ಇಗ್ಲಂಡದಲ್ಲಿ ಜಾಗೃತಿಯನ್ನು ಮಾಡುವದಕ್ಕಾಗಿ ಹೋದರು. ಈಸ್ಟ ಇಂಡಿಯನ್ ಅಸೋಶಿಯೇಶನ್ನದ ಸಭೆಯಲ್ಲಿ ಮಾತನಾಡುವಾಗ ಅವರು ನಿರಾಶೆಯ ಉದ್ಗಾರಗಳನ್ನು ತೆಗೆದರು."ನಾನು ಹೇಳಿದ ಮಾತುಗಳು ನಿಮಗೆ ಸವಿಯಾಗಿರಲಿಕ್ಕಿಲ್ಲ. ಆದರೆ ನಿಮಗೆ ಬೇಡಾದ ಮಾತುಗಳನ್ನಾಡದೆ ನನಗೆ ಗತ್ಯಂತರವಿಲ್ಲೆಂದು" ಅವರು ಸ್ಪಷ್ಟ ರೀತಿಯಿಂದ ಹೇಳುತ್ತಿದ್ದರು. ಅವರು ಇಂಗ್ಲಂಡದಲ್ಲಿ ಅನೇಕ ಸಭೆಗಳಲ್ಲಿ ಮಾತನಾಡಿದರು. ತಿರುಗಿಬರುವಾಗ ಲಾರ್ಡ ಮೋರ್ಲೆಯವರು ಹಿಂದುಸ್ತಾನದ ಜನರಿಗೆ ಹೆಚ್ಚಿನ ಹಕ್ಕುಗಳನ್ನು ಕೊಡಲಿರುವರೆಂದು ಸುದ್ದಿಯನ್ನು ತಂದರು.

(೪೪) **ಕಾಂಗ್ರೆಸಿನ ೨೨ ನೆಯ ಅಧಿವೇಶನವು:—** ೧೯೦೬ ರ ರಾಷ್ಟ್ರೀಯ ಕಾಂಗ್ರೆಸಿನ ಅಧಿವೇಶನವು ಕಲಕತ್ತೆಯಲ್ಲಿ ಜರುಗಿತು. ಈ ಸಭೆಗೆ ಅಧ್ಯಕ್ಷರು ಯಾರು ಆಗಬೇಕೆಂಬ ಬಗ್ಗೆ ಅನೇಕ ಸೂಚನೆಗಳು ಮುಂದೆ ಬಂದವು. ಲಾಲಾಲಜಪತರಾಯರು ಅಧ್ಯಕ್ಷರಾಗಬೇಕೆಂದು ಖಾಪರ್ಡೆಯವರು ಸೂಚಿಸಿದರು. ಟಿಳಕರು ಅಧ್ಯಕ್ಷರಾಗಬೇಕೆಂದು ಬಿಪಿನಚಂದ್ರಪಾಲರು ಸೂಚಿಸಿದರು. ಕೊನೆಗೆ ದಾದಾಭಾಯಿ ನೌರೋಜಿಯವರನ್ನು ಕರಿಸಬೇಕೆಂದು ಗೊತ್ತಾಯಿತು. ಕಲಕತ್ತೆಯಲ್ಲಿ ದಾದಾಭಾಯಿಯವರ ಅಪೂರ್ವ ಸ್ವಾಗತವಾಯಿತು. ಅರಸರ ಮನಸ್ಸಿನಲ್ಲಿಯೂ ಮತ್ಸರವನ್ನು ಹುಟ್ಟಿಸುವಷ್ಟು ಅವರ ಮೇಲೆ ಮಾನಪತ್ರಗಳ ಹೂಗಳ ಜಯಜಯಕಾರದ ಮಳೆಯಾಯಿತು. ಅಧಿವೇಶನಕ್ಕೆ ೧೬೬೩ ಪ್ರತಿನಿಧಿಗಳು ಬಂದಿದ್ದರು. ಸಭೆಗೆ ೨೦೦೦೦ ಪ್ರೇಕ್ಷಕರು ಬಂದಿದ್ದರು. ರಾಸಬಿಹಾರಿ ಘೋಷರು ಸ್ವಾಗತಾಧ್ಯಕ್ಷರಾಗಿದ್ದರು. ಅವರು ತಮ್ಮ ಭಾಷಣದಲ್ಲಿ ಬಂಗಾಲದಲ್ಲಿ ನಡೆದಿರುವ ದಬ್ಬಾಳಿಕೆಯನ್ನು ವರ್ಣಿಸಿದರು. ದಾದಾಭಾಯಿ ನೌರೋಜಿಯವರು ತಮ್ಮ ಭಾಷಣದಲ್ಲಿ ಕಾಂಗ್ರೆಸ್ಸಿನ ಮುಖ್ಯ ಕಾರ್ಯಕ್ರಮವನ್ನು ವಿವೇಚಿಸಿದರು. "ಹಿಂದುಸ್ತಾನವು ಯಾವ ತತ್ವಗಳಂತೆ ಆಳಲ್ಪಡುವದೆಂಬ ವಿಚಾರವನ್ನು ಮಾಡುವದು ಸದ್ಯದ ಆಡಳಿತೆಯಲ್ಲಿ ಸುಧಾರಣೆಯನ್ನು ಸೂಚಿಸುವದು ಇವೆರಡು ಕಾಂಗ್ರೆಸಿನ ಕಾರ್ಯಗಳಾಗಿವೆ." ಯೆಂದು ಹೇಳಿದರು. "ನಮಗೆ ಬ್ರಿಟಿಶ ನಾಗರಿಕರ ಎಲ್ಲ

ಹಕ್ಕುಗಳು ಸಲ್ಲಬೇಕು. ಇದು ನಮ್ಮ ಜನ್ಮಸಿದ್ಧವಾದ ಹಕ್ಕು. ಕಾಲ ಕಾಲಕ್ಕೆ ನಮಗೆ ಈ ತರಹದ ವಚನಗಳು ಸರಕಾರದಿಂದ ದೊರೆತಿವೆ. ಹಿಂದೆ ಅನುಭವಿಸಿದ ದುಃಖಕಷ್ಟಗಳ ದೃಷ್ಟಿಯಿಂದಾದರೂ, ಈ ಹಕ್ಕುಗಳು ನಮಗೆ ದೊರೆಯುವದು ನ್ಯಾಯುವಿದೆ. ಬ್ರಿಟಿಶರ ಸದಸದ್ವಿವೇಕಬುದ್ಧಿಯ ದೃಷ್ಟಿಯಿಂದಲೂ, ಈ ಹಕ್ಕುಗಳು ನಮಗೆ ದೊರೆಯಲೆಬೇಕು ''.... '' ಆಡಳಿತೆಯ ಎಲ್ಲ ಅಧಿಕಾರಸ್ಥಳಗಳು ಹಿಂದಿ ಜನರ ಕೈಯಲ್ಲಿಯೇ ಇರಬೇಕು; ಹಿಂದುಸ್ಥಾನದ ಆರ್ಥಿಕ, ಬೌದ್ಧಿಕ, ನೈತಿಕ, ಔದ್ಯೋಗಿಕ ಉನ್ನತಿಗೆ ಇವು ಅತ್ಯಂತ ಅವಶ್ಯವು. ರಾಷ್ಟ್ರಕ್ಕಾಗಿ ಕಾಯದೆಗಳನ್ನು ಮಾಡುವ ಅಧಿಕಾರವೂ ತೆರಿಗೆಯಿಂದ ಬಂದ ದುಡ್ಡಿನ ವ್ಯಯವನ್ನು ಮಾಡುವ ಅಧಿಕಾರವೂ ಜನತೆಯ ಪ್ರತಿನಿಧಿಗಳಿಗೆಯೆ ಇರಬೇಕು, ಇಂಗ್ಲಂಡ ಮತ್ತು ಹಿಂದುಸ್ಥಾನ ಇವೆರಡರ ನಡುವಿನ ಆರ್ಥಿಕ ಸಂಬಂಧವು ನ್ಯಾಯವಾಗಿರಬೇಕು; ಅಂದರೆ ಹಿಂದುಸ್ಥಾನದ ವೆಚ್ಚವಾಗುವ ದುಡ್ಡಿಗೆ ತಕ್ಕ ಪ್ರತಿಫಲವು ದೊರೆಯಬೇಕು. '' ಈ ಮೂಲಭೂತ ಹಕ್ಕುಗಳನ್ನು ವಿವೇಚಿಸಿ, ಅರ್ಜಿಗಳಿಂದಲೂ, ಸಭೆಗಳಿಂದಲೂ, ಉಳಿದ ಶಾಂತ ಮಾರ್ಗಗಳಿಂದಲೂ, ನಾವು ನಮ್ಮ ಹಕ್ಕುಗಳನ್ನು ದೊರಕಿಸಬೇಕೆಂದು ಅವರು ಹೇಳಿದರು. '' ಚಳವಳಿ ಮಾಡಿರಿ, ಹಿಂದುಸ್ಥಾನ ಜನರಿಗೆ ಅವರ ಹಕ್ಕುಗಳು ಎನಿವೆಯೆಂಬುದನ್ನೂ, ಅವನ್ನು ಅವರು ಹೇಗೆ ದೊರಕಿಸಬೇಕೆಂಬುದನ್ನೂ ತಿಳಿಸಿ ಹೇಳಿರಿ. ನಾವು ಏನೂ ಮಾತಾಡದಿದ್ದರೆ ನಾವು ಸಂತುಷ್ಟರಿರುವೆವೆಂದು ನಮ್ಮ ಪ್ರತಿಪಕ್ಷಿಗಳು ಹೇಳುತ್ತಾರೆ. ನಾವು ಮಾತಾಡಹತ್ತಿದರೆ ನಾವು ಚಳವಳಿಖೋರರೆಂದು ನಮ್ಮನ್ನು ದಬ್ಬುತ್ತಾರೆ. ಏನೆ ಆದರೂ ಚಳವಳಿಯನ್ನು ಬಿಡಬೇಡಿರೆಂ''ದು ಅವರು ಹೇಳಿದರು. ಕೊನೆಗೆ ಎಲ್ಲರೂ ಸ್ವರಾಜ್ಯಕ್ಕಾಗಿ ಹೋರಾಡಬೇಕೆಂದೂ, ಸ್ವರಾಜ್ಯದಲ್ಲಿಯೇ ನಮ್ಮ ಆಸೆ, ನಮ್ಮ ಕನಸು, ನಮ್ಮ ದೊಡ್ಡಿಸ್ತನವೂ ಇವೆಯೆಂ''ದೂ ಅವರು ಹೇಳಿದರು. ದಾದಾಭಾಯಿಯವರ ಭಾಷಣವು ಅನೇಕ ದೃಷ್ಟಿಯಿಂದ ಅಪೂರ್ವವಾಯಿತು. ಸ್ವರಾಜ್ಯವೆ ನಮ್ಮ ಧ್ಯೇಯಯೆಂಬುದನ್ನು ಸ್ಪಷ್ಟವಾಗಿ ಹೇಳಿದವರೆಂದರೆ ಅವರೆ ಮೊದಲಿನವರು. ಹಿಂದುಸ್ಥಾನದ ಹಿತಕ್ಕಾಗಿ ೫೦ ವರ್ಷಗಳ ವರೆಗೆ ಅವರು ಹಗಲಿರುಳು ಹೊರಾಡಿದ್ದರು. ಹಿಂದುಸ್ಥಾನದ ಮುಖಂಡರಲ್ಲಿ

ಅವರೆ ಜ್ಞಾನವೃದ್ಧರೂ, ವಯೋವೃದ್ಧರೂ ಇದ್ದರು. ಅವರ ಬಾಯಿಂದ ಸ್ವರಾಜ್ಯದ ಘೋಷಣೆಯಾದ ಕೂಡಲೆ ಜನರ ಮನಸ್ಸಿನಲ್ಲಿ ಒಂದು ಹೊಸ ಚೈತನ್ಯವು ಉಂಟಾದಂತಾಯಿತು.

ಇನ್ನೊಂದು ಕಾರಣದಿಂದಲೂ, ಕಲಕತ್ತೆಯ ರಾಷ್ಟ್ರೀಯ ಸಭೆಯು ಬಹಳ ಮಹತ್ವದ್ದಾಯಿತು. ಹೊಸ ರಾಷ್ಟ್ರೀಯ ಪಕ್ಷದ ಕಾರ್ಯಕ್ರಮದ ನಾಲ್ಕು ಭಾಗಗಳಾದ ಸ್ವದೇಶಿ,ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ, ಮತ್ತು ಸ್ವರಾಜ್ಯ, ಈ ನಾಲ್ಕು ಮಾತುಗಳ ವಿಷಯಕ್ಕೆ ಕಾಂಗ್ರೆಸ್ಸಿನಲ್ಲಿ ಠರಾವುಗಳಾದವು. ಈ ನಾಲ್ಕೂ ಠರಾವುಗಳು ವಿಶೇಷ ಮಹತ್ವವಿದ್ದುದರಿಂದ ಅವುಗಳನ್ನು ಈ ಕೆಳಗೆ ಕೊಟ್ಟಿದೆ:—

"ಸ್ವದೇಶಿ:— ಅವಶ್ಯವಿದ್ದರೆ ಸ್ವಾರ್ಥತ್ಯಾಗವನ್ನು ಮಾಡಿಯೂ ಸ್ವದೇಶಿ ವಸ್ತುಗಳನ್ನೇ ಉಪಯೋಗಿಸಿ, ಸ್ವದೇಶಿ ಉದ್ಯೋಗಧಂದೆಗಳಿಗೆ ಉತ್ತೇಜನವನ್ನು ಕೊಟ್ಟು ಸ್ವದೇಶಿ ಚಳವಳಿಯು ಯಶಸ್ವಿಯಾಗುವಂತೆ ದುಡಿಯಬೇಕೆಂದು, ಕಾಂಗ್ರೆಸ್ಸು ಎಲ್ಲ ಜನರಿಗೂ ಬಿನ್ನವಿಸುತ್ತದೆ."

"ಬಹಿಷ್ಕಾರ:— ದೇಶದ ಆಡಳಿತೆಯಲ್ಲಿ ಜನರಿಗೆ ಯಾವ ತರಹದ ಅಧಿಕಾರವೂ ಇಲ್ಲ. ಜನರ ಹೇಳಿಕೆಗೆ ಸರಕಾರದವರು ಯಾವ ಮನ್ನಣೆಯನ್ನೂ ಕೊಡುವದಿಲ್ಲ. ಆದುದರಿಂದ ವಂಗಭಂಗದ ನಿಷೇಧವೆಂದು ಬಂಗಾಲದಲ್ಲಿ ಹೂಡಿದ ಬಹಿಷ್ಕಾರದ ಚಳವಳಿಯು ಯೋಗ್ಯವಾದದ್ದಿತ್ತು, ಯೋಗ್ಯವಾದದ್ದಿದೆಯೆಂದು ಈ ಕಾಂಗ್ರೆಸ್ಸಿನ ಅಭಿಪ್ರಾಯವಿದೆ."

"ರಾಷ್ಟ್ರೀಯ ಶಿಕ್ಷಣ:— ರಾಷ್ಟ್ರೀಯ ಶಿಕ್ಷಣದ ಪ್ರಶ್ನೆಯನ್ನು ಮೇಲಕ್ಕೆತ್ತಿ ರಾಷ್ಟ್ರೀಯ ಧೊರಣೆಯಿಂದ ರಾಷ್ಟ್ರೀಯ ನೇತೃತ್ವದಲ್ಲಿ ಬೌದ್ಧಿಕ, ಶಾಸ್ತ್ರೀಯ, ಔದ್ಯೋಗಿಕ, ಶಿಕ್ಷಣದ ಏರ್ಪಾಟನ್ನು ಮಾಡುವ ಸಮಯವು ಒದಗಿದೆಯೆಂದು ಈ ಕಾಂಗ್ರೆಸ್ಸಿನ ಅಭಿಪ್ರಾಯವಿದೆ."

"ಸ್ವರಾಜ್ಯ:— ಸ್ವಸ್ವತ್ವಾತ್ಮಕ ಬ್ರಿಟಿಶ ವಸಹಾತುಗಳಲ್ಲಿ ಅಮಲಿನಲ್ಲಿರುವ ರಾಜ್ಯಪದ್ಧತಿಯೆ ಹಿಂದುಸ್ಥಾನಕ್ಕೂ ಅನ್ವಯಿಸಬೇಕೆಂದು ಈ ಕಾಂಗ್ರೆಸಿನ ಅಭಿಪ್ರಾಯವಿದೆ. ಆ ದೃಷ್ಟಿಯಿಂದ ಈ ಕೆಳಗಿನ ಸುಧಾರಣೆಗಳು ಕೂಡಲೆ ಕೈಕೊಳ್ಳಲ್ಪಡಬೇಕು. ಅ) ಸದ್ಯಕ್ಕೆ ಇಂಗ್ಲಂಡದಲ್ಲಿಯಷ್ಟೆ ಜರಗುವ ಪರೀಕ್ಷೆಗಳು ಇನ್ನು ಮುಂದೆ ಹಿಂದುಸ್ಥಾನದಲ್ಲಿಯೂ ಇಂಗ್ಲಂಡ

ದಲ್ಲಿಯೂ ಕೂಡಿಯೆ ನಡೆಯಬೇಕು. ಹಿಂದುಸ್ತಾನದಲ್ಲಿಯ ದೊಡ್ಡ ಹುದ್ದೆಗಳೆಲ್ಲವೂ, ಆ ಹುದ್ದೆಗಳಿಗಾಗಿ ಏರ್ಪಡಿಸಲ್ಪಟ್ಟ ಪರೀಕ್ಷೆಗಳಲ್ಲಿ ಮೇಲೆ ಒಂದಿವರಿಗೆ ಕೊಡಬೇಕು. ಬ) ಸ್ಟೇಟ ಸೆಕ್ರೆಟರಿಯ ಕೌನ್ಸಿಲ್ಲುಗಳಲ್ಲಿಯೂ, ವ್ಹಾಯಿಸರಾಯರ ಕಾರ್ಯಕಾರೀಮಂಡಳದಲ್ಲಿಯೂ, ಮುಂಬೈ ಮತ್ತು ಮದ್ರಾಸದ ಗವ್ಹರ್ನರರ ಕಾರ್ಯಕಾರೀ ಮಂಡಳದಲ್ಲಿಯೂ, ಸಾಕಷ್ಟು ಹಿಂದೀಜನರ ಸೇರ್ಪಡೆಯಾಗಬೇಕು. ಕ) ವರಿಷ್ಟಕಾಯದೆಕೌನ್ಸಿಲಿನಲ್ಲಿಯೂ, ಪ್ರಾಂತಿಕ ಕಾಯದೇ ಕೌನ್ಸಿಲಿನಲ್ಲಿಯೂ, ಜನತೆಯ ಪ್ರತಿನಿಧಿಗಳು ಹೆಚ್ಚು ಪ್ರಮಾಣದಿಂದ ಸೇರಿಸಲ್ಪಡಬೇಕು. ಮತ್ತು ಜನತೆಯ ಪ್ರತಿನಿಧಿಗಳಿಗೆ ದೇಶದ ಆಯವ್ಯಯದ ಮೇಲೂ, ಆಡಳಿತೆಯ ಮೇಲೂ,ಹೆಚ್ಚಿನ ಅಧಿಕಾರಗಳು ದೊರೆಯಬೇಕು. ಡ) ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಿಗೆ ಹೆಚ್ಚು ಅಧಿಕಾರಗಳು ಕೊಡಲ್ಪಡಬೇಕು. ಮತ್ತು ಅವುಗಳ ಮೇಲಿರುವ ಅಧಿಕಾರಗಳ ವರ್ಚಸ್ಸು ಕಡಿಮೆಯಾಗಬೇಕು.

(೪೯) **ಸುರತದ ರಾಷ್ಟ್ರೀಯ ಸಭೆ:—** (೧೯೦೭) ಇಸ್ವಿ ಸನ್ ೧೯೦೭ರಲ್ಲಿ ವಂಗಭಂಗದ ವಿರುದ್ಧ ಚಳವಳಿಯು ಒಳ್ಳೇ ಜೋರನಿಂದ ಸಾಗಿತು. ವಂಗಭಂಗದ ನಿಷೇಧದ ಈ ಚಳವಳಿಯಲ್ಲಿ ಮೊದಲಿನಿಂದಲೆ ರಾಷ್ಟ್ರೀಯ ಪಕ್ಷವು ಮುಂದಾಗಿತ್ತು. ಸರಕಾರದ ದಬ್ಬಾಳಿಕೆಯಿಂದ ಜನರು ತ್ರಸ್ತರಾಗಿ ಅವರ ಮನಸ್ಸು ರಾಷ್ಟ್ರೀಯ ಪಕ್ಷದವರ ಕಡೆಗೆ ಒಲಿಯಹತ್ತಿತು. ಕಲಕತ್ತೆಯಲ್ಲಿ ಪಾಸಾದ ತೀಕ್ಷ್ಣ ಠರಾವುಗಳು ಮಂದ ಪಕ್ಷದವರಿಗೆ ಪೂರ್ಣವಾಗಿ ಸಮ್ಮತವಿರಲಿಲ್ಲ. ಈ ವಿಷಯಕ್ಕೆ ಮಂದಪಕ್ಷ ಮತ್ತು ರಾಷ್ಟ್ರೀಯ ಪಕ್ಷ ಇವೆರಡರ ನಡುವೆ ದೊಡ್ಡ ವಾದವು ಆಯಿತು. ಲೋಕಮಾನ್ಯ ಟಿಳಕರು ನೇವ್ಹಿನ್ಸನ್ನರಿಗೆ ಹೇಳಿದಂತೆ ಮಂದಪಕ್ಷದವರ ಮತ್ತು ರಾಷ್ಟ್ರೀಯರ ಗುರಿಯಲ್ಲೇನೂ ಅಂತರವಿರಲಿಲ್ಲ. ಮಂದಪಕ್ಷದ ಮುಖಂಡರಾದ ಗೋಖಲೆಯವರು ಅಲ್ಹಾಬಾದದಲ್ಲಿ ೧೯೦೭ ನೆಯ ಇಸ್ವಿಯ ಫೆಬ್ರುವರಿ ೪ ನೆಯ ತಾರೀಖಿನ ಜಾಹೀರ ಸಭೆಯಲ್ಲಿ ಮಾತನಾಡುವಾಗ ರಾಷ್ಟ್ರದ ಗುರಿಯ ವಿಷಯವಾಗಿ ಈ ಕೆಳಗಿನ ಮಾತುಗಳನ್ನು ಹೇಳಿದರು. "ಮಾತೃಭೂಮಿಯ ವಿಷಯದಲ್ಲಿ ನನ್ನ ಮಹತ್ವಾಕಾಂಕ್ಷೆಗೆ ಯಾವ ಎಲ್ಲೆಯೂ ಇಲ್ಲ. ಪರರಾಷ್ಟ್ರದಲ್ಲಿ ಅಲ್ಲಿಯ ನಾಗರಿಕರು

ಇರುವ ಹಾಗೆಯೆ ನಮ್ಮ ಜನರು ನಮ್ಮ ದೇಶದಲ್ಲಿರಬೇಕು. ಯಾವು
ಜಾತಿ ಪಂಥದ ಭೇಧವಿಲ್ಲದೆ ನಮ್ಮಲ್ಲಿಯ ಗಂಡಸರೂ, ಹೆಂಗಸರ
ಯಾವದೆ ತರಹದ ಆತಂಕವಿಲ್ಲದೆ ಪೂರ್ಣ ಉನ್ನತಿಯನ್ನು ಮಾಡಿಕೊಳ್ಳಲ
ಸಮರ್ಥರಾಗಬೇಕೆಂದು ನನ್ನ ಅಭಿಪ್ರಾಯವಿದೆ. ರಾಜಕೀಯ ಔದ್ಯೋ
ಗಿಕ ಧಾರ್ಮಿಕ ಕ್ಷೇತ್ರಗಳಲ್ಲಿಯೂ ವಾಙ್ಮಯ ಶಾಸ್ತ್ರಕಲೆಗಳ ವಿಷಯ
ಗಳಲ್ಲಿಯೂ, ಹಿಂದುಸ್ಥಾನವು ದೊಡ್ಡ ರಾಷ್ಟ್ರಗಳಲ್ಲಿ ತನ್ನ ಯೋಗ್ಯಸ್ಥಾ
ವನ್ನು ಪಡೆಯುವದು ನನಗೆ ಬೇಕಾಗಿದೆ.'' ಕರಬಂದಿಯವರೆಗಿನ ಎ
ಶಾಂತ ಉಪಾಯಗಳು ನ್ಯಾಯ್ಯವಾಗಿವೆಯೆಂದು ಗೋಖಲೆಯವರ ಅ
ಪ್ರಾಯವಿತ್ತು. ಸ್ವದೇಶಿಗೆ ಅವರು ಪ್ರೋತ್ಸಾಹನವನ್ನು ಕೊಟ್ಟರು. ಬ
ಷ್ಕಾರದಿಂದ ರಾಜಕೀಯ ತೊಡಕುಗಳು ಬಿಡುವವೆಂದು ಅವರಿಗೆ ಅನಿಸಿ
ಲ್ಲಿಲ್ಲ. ರಾಷ್ಟ್ರೀಯ ಶಾಲೆ ಕಾಲೇಜುಗಳು ದೊಡ್ಡ ಪ್ರಮಾಣದಲ್ಲಿ ಆ
ಬೇಕಾದರೆ ಅನೇಕ ವರ್ಷಗಳುಬೇಕು. ಹೀಗಿರುವಾಗ ಇದ್ದ ಶಿಕ್ಷಣ ಸಂ
ಗಳನ್ನು ಬಹಿಷ್ಕರಿಸಿರಿಯೆಂದು ಹೇಳುವದು ತಪ್ಪು. ಸರಕಾರಿ ನೋಕ
ಯಿಂದ ಜನರು ಪರಾವೃತ್ತರಾಗಿ ಸ್ವತಂತ್ರ ರೀತಿಯಿಂದ ಜೀವನದ ವೃತ್ತಿ
ಯನ್ನು ಸಾಗಿಸಿದರೆ ಒಳಿತು. ಆದರೆ ಸರಕಾರಿ ನೋಕರಿಯನ್ನೆ ಬಹಿಷ್ಕ
ಸುವದು ಸದ್ಯದ ಪರಿಸ್ಥಿತಿಯಲ್ಲಿ ಅಶಕ್ಯವೆಂದೂ, ಮುನಸಿಪಾಲ್ಟಿ ಲೋ
ಲ್‌ಬೋರ್ಡು ಕೌನ್ಸಿಲುಗಳನ್ನು ಬಹಿಷ್ಕರಿಸಿ ಪ್ರಯೋಜನವಿಲ್ಲೆಂದ
ಗೋಖಲೆಯವರ ಅಭಿಪ್ರಾಯವಿತ್ತು. ೧೯೦೭ ನೆಯ ಇಸ್ವಿಯ ಅಕ್ಟೋಬ
೯ನೆಯ ತಾರೀಖಿನ ದಿನ ಮುಂಬೈಯ ಸ್ಟುಡಂಟ್ಸ ಬ್ರದರಹುಡ್‌ದ ಪ
ವಾಗಿ ಆಡಿದ ಮಾತಿನಲ್ಲಿ ಅವರು ಈ ಹೊಸ ರಾಷ್ಟ್ರೀಯ ಪಕ್ಷದ ಕಾಯ
ಕ್ರಮವು ಅವ್ಯವಹಾರ್ಯವಾಗಿತ್ತೆಂದು ಗೋಖಲೆಯವರು ಹೇಳಿದರು. ಹೊ
ಪಕ್ಷದವರು ನೂರಾರು ಭಾಷಣಗಳಲ್ಲಿಯೂ, ನೂರಾರು ವರ್ತಮಾನಪತ
ಗಳಲ್ಲಿಯೂ, ಪ್ರಚಾರ ಮಾಡಿದ ರಾಷ್ಟ್ರ ಭಕ್ತಿಯ ಪ್ರಚಾರವು ಒ
ಯದು; ಆದರೆ ಇವರು ಬ್ರಿಟಿಶ ಸಾಮ್ರಾಜ್ಯದಲ್ಲಿ ತೋರಿದ ಅವಿಶ್ವಾಸ
ಇವರ ಮುಖ್ಯ ಶಸ್ತ್ರವಾದ ಬಹಿಷ್ಕಾರವೂ ಇವೇನೂ ಒಳಿತಾದ ಸಂಗತಿ
ಳಲ್ಲವೆಂದು ಅವರು ಹೇಳಿದರು. ಈ ಮೇಲಿನ ಮಾತುಗಳಿಂದ, ಗೋಖ
ಮೆಹಥಾ ಸುರೇಂದ್ರನಾಥ ಬಾನರ್ಜಿಯವರ ಪಕ್ಷದಲ್ಲಿಯೂ, ಟಿಳ

ಅರವಿಂದ ಘೋಷ ಬಿಪಿನ ಚಂದ್ರಪಾಲ ಇವರ ಪಕ್ಷದಲ್ಲಿಯೂ, ಗುರಿಯ ಭೇದವಿರದೆ ಕೇವಲ ಮಾರ್ಗಗಳ ಭೇದವಿತ್ತೆಂದು ಹೇಳಬಹುದು. ಇವೆರಡೂ ಪಕ್ಷಗಳ ನಡುವೆ ೧೯೦೫, ೧೯೦೬, ೧೯೦೭, ಈ ಮೂರು ವರ್ಷಗಳಲ್ಲಿಯೂ ತಕ್ಕಾಟವು ನಡೆದೇ ಇತ್ತು. ಹೊಸ ಪಕ್ಷದಲ್ಲಿ ವಿಶೇಷವಾಗಿ ತರುಣರ ಸೇರ್ಪಡೆಯಾಗಿತ್ತು.

ಕಲಕತ್ತೆಯ ಕಾಂಗ್ರೆಸ್ಸಿನಲ್ಲಿ ನಡೆದ ಸಂಗತಿಗಳನ್ನು ಮೇಲೆ ವಿವರಿಸಿದೆ. ಮುಂದಿನ ಕಾಂಗ್ರೆಸ್ಸು ನಾಗಪೂರದಲ್ಲಿ ಜರುಗಬೇಕೆಂದು ಗೊತ್ತಾಗಿತ್ತು. ನಾಗಪೂರ ಕಾಂಗ್ರೆಸ್ಸಿಗೆ ಟಿಳಕರನ್ನು ಅಧ್ಯಕ್ಷರನ್ನಾಗಿ ಆರಿಸಬೇಕೆಂದು ರಾಷ್ಟ್ರೀಯ ಪಕ್ಷದವರ ಅಭಿಪ್ರಾಯವಿತ್ತು. ಅದರಂತೆ ಸ್ವಾಗತ ಸಮಿತಿಯಲ್ಲಿ ತಮ್ಮ ಬಹುಮತ ಮಾಡಿಕೊಳ್ಳುವ ಪ್ರಯತ್ನವನ್ನು ರಾಷ್ಟ್ರೀಯ ಪಕ್ಷದವರು ಮಾಡತೊಡಗಿದರು. ಅವರ ಪ್ರಯತ್ನವು ಯಶಸ್ವಿಯಾಗುವಂತೆ ತೋರಹತ್ತಿತು. ನಾಗಪೂರದಲ್ಲಿ ಕಾಂಗ್ರೆಸ್ಸನ್ನು ಆಗಗೊಟ್ಟರೆ ಕಾಂಗ್ರೆಸ್ಸು ಉಗ್ರಗಾಮಿ ರಾಷ್ಟ್ರೀಯರ ಕೈಸೇರುವದೆಂಬ ಭಯದಿಂದ ಮೆಹಥಾ ಮುಂತಾದವರು ೧೯೦೭ರ ಕಾಂಗ್ರೆಸ್ಸು ಸುರತದಲ್ಲಿ ಕೂಡುವಂತೆ ಏರ್ಪಾಟು ಮಾಡಿದರು. ಕಲಕತ್ತೆಯ ಕಾಂಗ್ರೆಸ್ಸಿನಲ್ಲಿ ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಮತ್ತು ಸ್ವರಾಜ್ಯ ಈ ವಿಷಯಗಳನ್ನು ಕುರಿತು ಪಾಸಾದ ಠರಾವುಗಳ ಬದಲು ಅದಕ್ಕೂ ಸೌಮ್ಯವಾದ ಠರಾವುಗಳು ಸುರತದಲ್ಲಿ ತರಲ್ಪಡುವವೆಂದು ಸುದ್ದಿ ಹಬ್ಬಿತ್ತು. ಹಾಗೆ ಆಗಗೊಡದಂತೆ ಪ್ರಯತ್ನ ಮಾಡಲು ಕಾಂಗ್ರೆಸ ಅಧಿವೇಶನಕ್ಕೆ ಒಂದುವಾರ ಮೊದಲೆ ರಾಷ್ಟ್ರೀಯ ಪಕ್ಷದವರು ಸುರತದಲ್ಲಿ ತಳವೂರಿ ವ್ಯಾಖ್ಯಾನ ಸಭೆ ಮುಂತಾದವುಗಳನ್ನು ಏರ್ಪಡಿಸಿ ಜನರಿಗೆ ರಾಷ್ಟ್ರೀಯ ಪಕ್ಷದ ತತ್ವಗಳನ್ನು ತಿಳಿಸಿ ಹೇಳಿದರು. ೧೯೦೭ರ ಡಿಶಂಬರ ೨೬ನೆಯ ತಾರೀಖಿನ ದಿವಸ ಅಧಿವೇಶನಕ್ಕೆ ಪ್ರಾರಂಭವಾಯಿತು. ಸ್ವಾಗತಾಧ್ಯಕ್ಷರಾದ ಮಾಲವೀಯರ ಭಾಷಣವು ಆಯಿತು. ಅಂಬಾಲಾಲ ಸಾರಾಭಾಯಿಯವರು ಬಂಗಾಲದ ಪ್ರಸಿದ್ಧ ಮುಖಂಡರಾದ ಡಾ. ರಾಷಬಿಹಾರಿಘೋಷರವರು ಅಧ್ಯಕ್ಷರಾಗಬೇಕೆಂದು ಸೂಚಿಸಿದರು. ಆ ಸೂಚನೆಗೆ ಅನುಮೋದನವನ್ನು ಕೊಡುವದಕ್ಕಾಗಿ ಸುರೇಂದ್ರನಾಥ ಬಾನರ್ಜಿಯವರು ಏಳಲು

ಜನರಲ್ಲಿ ಕೂಗಾಟವೆದ್ದಿತು. ಹತ್ತು ನಿಮಿಷಗಳವರೆಗೆ ಗೊಂದಲವಾದ ನಂತರ ಮಾಲವೀಯರು ಸಭೆಯ ಕಾರ್ಯವನ್ನು ಮುಂದಿಸಕ್ಕೆ ಮುಂದಿರಿಸಿದರು. ಮತ್ತೆ ಸಭೆಯು ಪ್ರಾರಂಭವಾಗಿ ಸುರೇಂದ್ರನಾಥರ ಭಾಷಣವನ್ನು ಎಲ್ಲರೂ ಶಾಂತ ರೀತಿಯಿಂದ ಕೇಳಿಕೊಂಡರು. ಆದರೆ ಅಧ್ಯಕ್ಷರು ಇನ್ನೂ ಸ್ಥಾನಾಪನ್ನರಾಗುವ ಮೊದಲು ಎರಡೂ ಪಕ್ಷಗಳ ನಡುವೆ ಒಪ್ಪಂದವಾಗುವ ಉದ್ದೇಶದಿಂದ ಸಭೆಯ ಕಾರ್ಯವನ್ನು ತುರ್ತಕ್ಕೆ ನಿಲ್ಲಿಸಬೇಕೆಂದು ಸೂಚನೆಯನ್ನು ಮಾಡಲು ಲೋಕಮಾನ್ಯ ಟಿಳಕರು ಸಭಾ ಪೀಠವನ್ನೇರತೊಡಗಿದರು. ಇಷ್ಟರಲ್ಲಿ ಡಾ. ಘೋಷರು ನಾನು ಕಾಯದೇಶಿರ ಅಧ್ಯಕ್ಷನಿರುವನೆಂದು ಹೇಳಿ ತಮ್ಮ ಭಾಷಣವನ್ನು ಓದುವಷ್ಟರಲ್ಲಿ "ನಿಮ್ಮ ಆಯ್ಕೆಯು ಇನ್ನೂ ಆಗಿಲ್ಲ. ಆ ಸೂಚನೆಗೆ ಉಪಸೂಚನೆಯನ್ನು ತರಲಿಕ್ಕೆಂದು ನಾನು ಮೇಲೆ ಬಂದಿದ್ದೇನೆಂದು ಟಿಳಕರು ಅವರಿಗೆ ಹೇಳಿದರು. ಪ್ರೇಕ್ಷಕರಲ್ಲಿ ಗದ್ದಲವೆದ್ದಿತು." "ಹೌದು ಹೌದು" "ಇಲ್ಲ ಇಲ್ಲ" "ಬರೋಬರಿ" "ಇದು ತಪ್ಪು" "ಕೂತುಕೊಳ್ಳಿರಿ" "ನಡೆಯಿರಿ" "ಕೂಡದು ಅಂತ ಹೇಳುವವರು ನೀವ್ಯಾರು?" "ನಾಚಿಗ್ಗೇಡು" ಮುಂತಾದ ಕೂಗಾಟಗಳಿಂದ ಮಂಟಪವೆಲ್ಲವೂ ತುಂಬಿಹೋಯಿತು. ವೈಕುಂಠ ದೇಸಾಯಿಯೆನ್ನುವವರು ಟಿಳಕರ ಮೇಲೊಗೆಯಬೇಕೆಂದು ಖುರ್ಚಿಯನ್ನೆ ಎತ್ತಿಕೊಂಡರು. ಉಳಿದ ಕೆಲವರು ಅವರ ಮೈಮೇಲೇರಿ ಹೋದರು. ಈ ರೀತಿ ಟಿಳಕರು ಸಂಕಟದಲ್ಲಿ ಸಿಕ್ಕಿದ್ದನ್ನು ನೋಡಿ ಅವರ ಕೆಲವು ಗೆಳೆಯರು ಅವರನ್ನು ರಕ್ಷಿಸಲು ಸಭಾಪೀಠವನ್ನೇರಿದರು. ಯಾರೊ ಒಬ್ಬರು ಕಾಲೊಳಗಿನ ಮಚ್ಛೆಯನ್ನು ತೆಗೆದು ಬಿಸಾಟಿದರು. ಇದು ಮೆಹಥಾ ಮತ್ತು ಸುರೇಂದ್ರನಾಥರಿಗೆ ತಗಲಿ ಟೇಬಲಿನ ಮೇಲೆ ಬಿದ್ದಿತು. ಸಭಾಸ್ಥಾನದಲ್ಲಿ ಕೈಗೆ ಕೈ ಹತ್ತಿತು. ಮಂದಪಕ್ಷದವರೆಲ್ಲರೂ ಹಿಂದಿನ ಬಾಗಿಲದಿಂದ ಹೋಗಿ ಬಿಟ್ಟರು. ಪೋಲೀಸರು ಬಂದರು. ಶ್ರೀನಿವಾಸರಾವ ಕೌಜಲಗಿ, ಅಣ್ಣಾಚಾರ್ಯ ಕಟ್ಟಿ, ಗೋಖಲೆ ದೇಶಪಾಂಡೆ ಮುಂತಾದವರನ್ನು ಹಿಡಿದು ಬಿಟ್ಟುಬಿಟ್ಟರು. ಜನರು ಹೊರಗೆ ಗುಂಪು ಗುಂಪಾಗಿ ಕೂಡಿ ಆದದ್ದೆಲ್ಲ ಒಳಿತಾಗಲಿಲ್ಲೆಂದು ಅನ್ನಹತ್ತಿದರು. ಮುಂದೆ ರಾಜಿಯ ಪ್ರಯತ್ನಗಳಾದವು. ಆದರೆ ಅವೆಲ್ಲವೂ ವಿಫಲವಾದವು. ಎರಡೂ ಪಕ್ಷದ

ವರ ತಮ್ಮ ತಮ್ಮ ಹೇಳಿಕೆಯನ್ನು ಪ್ರಸಿದ್ಧಿಸಿದರು. ಕಲಕತ್ತೆಯಲ್ಲಿ ಯಾದ ಠರಾವುಗಳಲ್ಲಿ ಬದಲು ಮಾಡಬೇಕೆಂದು ಮಂದಪಕ್ಷದವರ ಹೊಂಚು ಇದ್ದುದರಿಂದ ಅಧ್ಯಕ್ಷರ ಆಯ್ಕೆಯ ಸೂಚನೆಗೆ ಉಪಸೂಚನೆಯನ್ನು ತರುವುದು ಅವಶ್ಯವಾಯಿತು ಎಂದು ರಾಷ್ಟ್ರೀಯ ಪಕ್ಷದವರು ಜಾಹೀರ ಪತ್ರಿಯನ್ನು ಹೊರಡಿಸಿದರು. ಯಾವದಾದರೊಂದು ರೀತಿಯಿಂದ ಗೊಂದಲವನ್ನು ಹುಟ್ಟಿಸುವದೆ ರಾಷ್ಟ್ರೀಯ ಪಕ್ಷದವರ ಪ್ರಯತ್ನವಿತ್ತು, ರಾಷ್ಟ್ರೀಯ ಪಕ್ಷದವರು ಮಾಡಿದ್ದೆಲ್ಲ ತಪ್ಪುಯೆಂದು ಮಂದಪಕ್ಷದವರು ಜಾಹೀರ ನಾಮೆಯನ್ನು ಹೊರಡಿಸಿದರು. ೨೫ನೆಯ ತಾರೀಖಿನ ದಿವಸ ಹಿಂದುಸ್ಥಾನದ ಗುರಿಯು ಬ್ರಿಟಿಶ ವಸಹಾತುಗಳಲ್ಲಿಯ ಸ್ವರಾಜ್ಯವೆಂದೂ, ಈ ಗುರಿಯೆಡೆಗೆ ಮೆಲ್ಲಗೆ ಈಗಿನ ರಾಜ್ಯಪದ್ಧತಿಯಲ್ಲಿಯೆ ಸುಧಾರಣೆಯನ್ನು ಮಾಡಿ ರಾಷ್ಟ್ರೀಯ ಐಕ್ಯವನ್ನು ಬೆಳಿಸಿ ಕಾಯದೆಶೀರ ಮಾರ್ಗಗಳಿಂದ ಸಾಗಬೇಕೆಂದೂ ಸಭೆಯ ಕೆಲಸವು ಶಾಂತರೀತಿಯಿಂದ ನಡೆಯಬೇಕೆಂದೂ, ಈ ಮಾತುಗಳಿಗೆ ಒಪ್ಪಿದರೆ ಒಪ್ಪಿಗೆಯಿದ್ದವರು ೨೬ನೆಯ ತಾರೀಖಿನ ದಿವಸ ಕಾಂಗ್ರೆಸ್ಸಿನ ಹಂದರದಲ್ಲಿಯೆ ಕೂಡಬೇಕೆಂದು ರಾಸಬಿಹಾರಿ ಘೋಷ, ಫೆರೋಜಶಹಾಮಹಥಾ, ಸುರೇಂದ್ರನಾಥ ಬಾನರ್ಜಿ, ಗೋಖಲೆ, ವಾಚ್ಛಾ, ಮದನಮೋಹನ ಮಾಲವಿಯ ಮುಂತಾದ ಮುಖಂಡರು ಪತ್ರಿಕೆಯನ್ನು ಹೊರಡಿಸಿದರು. ಸಭೆಗೆ ೯೦೦ ಪ್ರತಿನಿಧಿಗಳು ಬಂದಿದ್ದರು. ರಾಸಬಿಹಾರಿ ಘೋಷರು ಅಧ್ಯಕ್ಷರಾಗಿ ಆರಿಸಲ್ಪಟ್ಟು ಕಾಂಗ್ರೆಸ್ಸಿಗೆ ಒಂದು ಘಟನೆಯನ್ನು ಸಿದ್ಧಪಡಿಸಲು ನೂರು ಜನರ ಸಮಿತಿಯು ಏರ್ಪಡಿಸಲ್ಪಟ್ಟಿತು. ಈ ಸಮಿತಿಯವರು ಎಪ್ರಿಲ ತಿಂಗಳಲ್ಲಿ ಅಲ್ಹಾಬಾದದಲ್ಲಿ ಕೂಡಿ ಕಾಂಗ್ರೆಸ್ಸಿಗಾಗಿ ಒಂದು ಘಟನೆಯನ್ನು ಸಿದ್ಧಪಡಿಸಿದರು. ಕಾಂಗ್ರೆಸ್ಸಿನ ಗುರಿಯು ಮೇಲ್ಕಾಣಿಸಿದ ಪ್ರತಿಜ್ಞಾ ಪತ್ರಿಕೆಯಲ್ಲಿ ಉಲ್ಲೇಖಿಸಿದಂತೆ ಇತ್ತು. ಕಾಂಗ್ರೆಸ್ಸಿನ ಎರಡೂ ಪಕ್ಷಗಳಲ್ಲಿ ಒಕ್ಕಟ್ಟನ್ನುಂಟು ಮಾಡುವ ಪ್ರಯತ್ನಗಳೆಲ್ಲವೂ ನಿಷ್ಫಲವಾದವು. ಈ ಮುಂದಿನ ಏಳು ಅಧಿವೇಶನಗಳಲ್ಲಿ ರಾಷ್ಟ್ರೀಯ ಪಕ್ಷದವರು ಯಾರೂ ಪ್ರತಿನಿಧಿಗಳಾಗಿರಲಿಲ್ಲ. ಆದುದರಿಂದ ಲಖನೌದವರೆಗೆ ಕಾಂಗ್ರೆಸ್ಸಿನ ಅಧಿವೇಶನಗಳು ಕಳೆಗುಂದಿದಂತಾದವು. ಸರಕಾರದ ದಬ್ಬಾಳಿಕೆಯು ಜೋರಾಯಿತು.

(೫೦) **ಸರಕಾರದ ದಬ್ಬಾಳಿಕೆ:—** (೧೯೦೫-೧೯೧೧) ಇದೂವರೆಗೆ

ವಂಗಭಂಗದ ಸಾಮಾನ್ಯ ಸ್ವರೂಪವನ್ನೂ, ಆಗಿನ ವಿವಿಧ ಚಟುವಟಿಕೆಗಳನ್ನೂ, ವಿವರಿಸಿದ್ದಾಯಿತು. ಇನ್ನು ವಂಗಭಂಗದ ಚಳವಳಿಯನ್ನು ಕುಗ್ಗಿಸಲು ಸರಕಾರದವರು ಹೂಡಿದ ದಬ್ಬಾಳಿಕೆಯನ್ನು ಸ್ವಲ್ಪದರಲ್ಲಿ ವಿವರಿಸುವ. ವಂಗಭಂಗದ ಚಳವಳಿಯಲ್ಲಿ ವಿದ್ಯಾರ್ಥಿಗಳು ಮುಂದಾದ್ದರಿಂದ ಅವರ ಚಟುವಟಿಕೆಗಳನ್ನು ನಿಲ್ಲಿಸಲು ಆಳರಸರು ಮುಂದಾದರು. ಜಿಲ್ಹಾ ಮ್ಯಾಜಿಸ್ಟ್ರೇಟರು ಶಾಲೆ ಕಾಲೇಜುಗಳ ಪ್ರಿನ್ಸಿಪಾಲರಿಗೆ "ನಿಮ್ಮ ವಿದ್ಯಾರ್ಥಿಗಳು ಬಹಿಷ್ಕಾರ ಪಿಕೆಟಿಂಗ ಮುಂತಾದ ಚಳವಳಿಯಲ್ಲಿ ಭಾಗವಹಿಸದಂತೆ ನೋಡಿಕೊಳ್ಳಿರಿ; ಇಲ್ಲವಾದರೆ ನಿಮಗೆ ಕೊಡಲ್ಪಡುವ ಗ್ರ್ಯಾಂಟು ನಿಲ್ಲಿಸಲ್ಪಡುವದು, ಯುನಿವ್ಹರ್ಸಿಟಿಯವರು ನಿಮಗೆ ಕೊಡುವ ಮನ್ನಣೆಯನ್ನು ನಿಲ್ಲಿಸುವರು"ಯೆಂಬ ಒಂದು ಸರ್ಕ್ಯೂಲರನ್ನು ಹೊರಡಿಸಿದರು. ಸ್ಟೇಟ್ಸಮನ್‌ದಂತಹ ಪತ್ರಿಕೆಯೂ ಈ ಸರ್ಕ್ಯುಲರನ್ನು ನಿಷೇಧಿಸಿತು. ಪೂರ್ವ ಬಂಗಾಲದ ಅಧಿಕಾರಿಗಳು "ವಂದೇ ಮಾತರಂ" ಈ ಜಯಘೋಷವನ್ನು ಸಾರ್ವಜನಿಕ ಬೀದಿಯಲ್ಲಿಯೂ ಮಾಡಕೂಡದೆಂದು ಒಂದು ಕಟ್ಟಪ್ಪಣೆಯನ್ನು ಹೊರಡಿಸಿದರು. ಸಾರ್ವಜದಿಕ ಸ್ಥಳಗಳಲ್ಲಿ ಸಭೆಗಳು ಕೂಡದೆಂದು ಕಟ್ಟಪ್ಪಣೆಯು ಹೊರಡಿತು. ಕೆಲವೆಡೆಗಳಲ್ಲಿ ಮಿಲಟರಿ ಪೋಲೀಸರನ್ನಿಟ್ಟರು. ಅವರು ಹಿಂದೂ ಸಮಾಜಕ್ಕೆ ಸೇರಿದ ಸನ್ಮಾನ್ಯ ನಾಗರಿಕರನ್ನು ವಿನಃಕಾರಣ ಥಳಿಸಿದರು.

೧೯೦೬ರ ಎಪ್ರೀಲ ೧೪ ನೆಯ ತಾರೀಖಿನ ದಿನ ಬಂಗಾಲ ಪ್ರಾಂತಿಕ ಪರಿಷತ್ತಿನ ಅಧಿವೇಶನವು ಬಾರಿಸಾಲದಲ್ಲಿ ಕೂಡಬೇಂದು ಗೊತ್ತಾಗಿತ್ತು. ಪ್ರತಿನಿಧಿಗಳ ಸ್ವಾಗತವನ್ನು ಮಾಡುವಾಗ "ವಂದೇ ಮಾತಂ" ಜಯಘೋಷವನ್ನು ಮಾಡುವದಿಲ್ಲೆಂದು ಬಾರಿಸಾಲದ ಮುಖಂಡರು ಅಧಿಕಾರಿಗಳಿಗೆ ಮಾತುಕೊಟ್ಟಿದ್ದರು. ಸ್ವಾಗತ ಸಮಾರಂಭವನ್ನುಳಿದು ಪರಿಷತ್ತಿನ ಕಾಲಕ್ಕೆ "ವಂದೇ ಮಾತಂ" ಜಯಘೋಷವನ್ನು ಮಾಡಿಯೆ ತೀರಬೇಕೆಂದು ಪ್ರತಿನಿಧಿಗಳು ಗೊತ್ತುಮಾಡಿದರು. ಪ್ರತಿನಿಧಿಗಳ ಸ್ವಾಗತವಾದನಂತರ ಎರಡುಗಂಟೆಗೆ ಅಧ್ಯಕ್ಷರಾದ ಎ. ರಸೂಲರ ಮೆರವಣಿಗೆಯು ಹೊರಟಿತು. ಮೋತಿಲಾಲ ಘೋಷ, ಭೂಪೇಂದ್ರನಾಥ ಬಸೂ, ಸುರೇಂದ್ರನಾಥ ಬಾನರ್ಜಿ ಇವರೆಲ್ಲರೂ ಮುಂದೆ ಇದ್ದರು. ಮೆರವಣಿಗೆಯು

ಮುಂದೆಹೋದನಂತರ ವಂದೇ ಮಾತರಂ ಸರ್ಕ್ಯುಲರದ ವಿರುದ್ಧ ಪ್ರಚಾರ ಕಾರ್ಯವನ್ನು ಮಾಡುತ್ತಿದ್ದ ತರುಣರು ಮೆರವಣಿಗೆಯಲ್ಲಿ ಬಂದಕೂಡಲೆ ಅವರನ್ನು ಪೋಲೀಸರುಬಂದು ಮುತ್ತಿದರು. ಅವರ ಎದೆಯಮೇಲಿನ ಬ್ಯಾಜುಗಳನ್ನು ಹರಿದುಹಾಕಿದರು. ಎಲ್ಲರನ್ನು ಲಾಠಿಯಿಂದ ಹೊಡೆಯ ಹತ್ತಿದರು. ಚಿತ್ತರಂಜ ಗುಹನೆಂಬುವನನ್ನು ಪೋಲೀಸರು ಲಾಠಿಯಿಂದ ಹೊಡೆದರು. ಆದರೆ ಎಟಿಗೊಮ್ಮೆ ವಂದೇ ಮಾತರಂ ಜಯಘೋಷವನ್ನು ಅವನು ಮಾಡಿದನು. ಸುರೇಂದ್ರನಾಥ ಬಾನರ್ಜಿಯವರನ್ನು ಹಿಡಿದು ಮ್ಯಾಜಿಸ್ಟ್ರೇಟನೆದುರಿಗೆ ಹಾಜರಮಾಡಿದರು. ಮ್ಯಾಜಿಸ್ಟ್ರೇಟರು ಅವರಿಗೆ ಅಲ್ಲಿಂದಲೇ ದಂಡವನ್ನು ವಿಧಿಸಿದರು. ಸುರೇಂದ್ರನಾಥರು ಮತ್ತೆ ಪರಿಷದಿಗೆ ಹೋದರು. ಸಾಯಂಕಾಲದ ಪರಿಷತ್ತಿನ ಅಧಿವೇಶನವು ಮುಗಿದನಂತರ ಪ್ರತಿನಿಧಿಗಳು ಸರಕಾರನಿಷಿದ್ಧವಾದ "ವಂದೇ ಮತರಂ" ಜಯಘೋಷ ವನ್ನು ಮಾಡುತ್ತ ಮನೆಮನೆಗೆ ಹೋದರು. ಮರುದಿನ ಪರಿಷತ್ತಿನ ಕಾರ್ಯಕ್ರಮವು ಪ್ರಾರಂಭವಾದಕೂಡಲೆ ಪೋಲೀಸ ಸುಪರಿಂಟೆಂಡೆಂಟನು ಬಂದು ಪರಿಷತ್ತು ಮುಗಿದನಂತರ ಪ್ರತಿನಿಧಿಗಳು "ವಂದೇ ಮಾತರಂ" ಎಂದು ಜಯಘೋಷವನ್ನು ಮಾಡುವದಿಲ್ಲೆಂದು ವಚನ ಕೊಟ್ಟರೆ ಮಾತ್ರ ಪರಿಷತ್ತಿನ ಕಾರ್ಯವು ನಡೆಯಬೇಕು, ಇಲ್ಲವಾದರೆ ಗಳಿಗೆಯ ಕಲವಿ ನಂತೆ ಪರಿಷತ್ತನ್ನು ಮುರಿಯುವ ಅಪ್ಪಣೆಯನ್ನು ಮ್ಯಾಜಿಸ್ಟ್ರೇಟರು ಮಾಡಿ ರುವರೆಂದು ಹೇಳಿದನು. ಆ ತರಹದ ವಚನವನ್ನು ಕೊಡುದಕ್ಕಿಂತಲೂ ಪರಿಷತ್ತನ್ನೇ ಮುರಿಯುವದು ಒಳ್ಳೆಯದೆಂದು ಭಾವಿಸಿ ಎಲ್ಲ ಪ್ರತಿನಿಧಿಗಳು ತಮ್ಮ ಜಾಗೆಗಳಿಂದೆದ್ದು ವಂದೇ ಮಾತರಂ ಜಯಘೋಷವನ್ನು ಮಾಡುತ್ತ ಮನೆಯಕಡೆಗೆ ಹೊರಟರು. ಅನಂತರ ಇನ್ನೊಂದು ಸ್ಥಳದಲ್ಲಿ ಸಭೆಯಾಗಿ ಸುರೇಂದ್ರನಾಥರೂ ಬಿಪಿನಚಂದ್ರಪಾಲರೂ ಮಾತಾಡಿದರು. ಸರಕಾರದ ಅವಿವೇಕತನದಿಂದ ಹಿಂದುಸ್ಥಾನದಲ್ಲೆಲ್ಲ ಅಸಂತೋಷವು ಉತ್ಪವಾಯಿತು.

೧೯೦೭ ನೆಯ ಇಸ್ವಿಯಲ್ಲಿಯೂ ಸರಕಾರದ ದಬ್ಬಾಳಿಕೆಯು ಆತಂಕವಿ ಲ್ಲದೆ ನಡೆಯಿತು. ಲಾಲಾಲಜಪತರಾಯರನ್ನೂ, ಸರದಾರ ಅಜಿತಸಿಂಗ ರನ್ನೂ, ಹದ್ದುಪಾರುಮಾಡಿದರು. ಸಾರ್ವಜನಿಕ ಸಭೆಗಳನ್ನು ಅಧಿಕಾರಿಗಳ ಅಪ್ಪಣೆಯಿಲ್ಲದೆ ಕೂಡಿಸಕೂಡದೆಂದು ವ್ಹಾಯಿಸರಾಯರು ಆರ್ಡಿನನ್ಸು

ತೆಗೆದರು. ಪಂಜಾಬದಲ್ಲಿಯೂ, ಬಂಗಾಲದಲ್ಲಿಯೂ, ಅನೇಕ ವೃತ್ತಪತ್ರ ಕಾರರಿಗೆ ಶಿಕ್ಷೆಗಳಾದವು. ಕೊನೆಗೆ ಮೇಲ್ಕಾಣಿಸಿದ ಆರ್ಡಿನನ್ಸಿಯಂತೆಯೆ ಸಾರ್ವಜನಿಕ ಸಭೆಗಳ ಕಾಯಿದೆಯು ಪಾಸಾಯಿತು. ಆದರೆ ಈ ತರಹದ ದಬ್ಬಾಳಿಕೆಯಿಂದ ಜನರೇನೂ ಅಂಜಿಹೋಗಲಿಲ್ಲ. ಯುಗಾಂತರದ ಸಂಪಾದಕನಿಗೆ ಶಿಕ್ಷೆಯಾದಾಗ ಐದಾರು ನೂರು ಹೆಂಗಸರು ಕಲಕತ್ತೆಯಲ್ಲಿ ಸಭೆಯನ್ನು ಮಾಡಿ ಆ ಸಂಪಾದಕನ ತಾಯಿಯನ್ನು ಅಭಿನಂದಿಸಿದರು. ಆಕೆಯಾದರೂ "ಬಿಪಿನನ ಆಯುಷ್ಯಕ್ರಮವು ಈ ಶಿಕ್ಷೆಯಿಂದ ಇದೇ ಪ್ರಾರಂಭವಾಗಿದೆ, ಇವನ ಉದಾಹರಣೆಯಿಂದ ದೇಶಕ್ಕೆ ಹಿತವಾಗುವದೆಂದು" ಉತ್ತರವನ್ನಿತ್ತಳು. ಬಾರಿಸಾಲದ ಪರಿಷತ್ತು ಮುರಿದನಂತರ ಅನೇಕ ಸ್ತ್ರೀಯರು "ಗಂಡಸರು ತಮ್ಮ ಹಕ್ಕುಗಳನ್ನು ಕಾಯಲು ಸಮರ್ಥರಾಗುವವರೆಗೆ ಆಭರಣಗಳನ್ನು ಇಟುಕೊಳ್ಳುವದಿಲ್ಲೆಂದು" ಪ್ರತಿಜ್ಞೆಮಾಡಿ ತಮ್ಮ ಮೈಮೇಲಿನ ಆಭರಣಗಳನ್ನು ಬಿಸಾಟಿ ಒಗೆದರು. ಎಳೆಯ ಹುಡುಗರಲ್ಲಿಯೂ ಒಳ್ಳೆ ಜಾಗೃತಿಯಾಗಿತ್ತು. ಚಿಕ್ಕ ಚಿಕ್ಕ ಮಕ್ಕಳಮೇಲೂ ಖಟ್ಲೆಗಳಾಗಿ ಸೆರೆಮನೆಯ ಇಲ್ಲವೆ ಘಟಕಿಯ ಶಿಕ್ಷೆಗಳು ವಿಧಿಸಲ್ಪಟ್ಟಿದ್ದವು. ಯುಗಾಂತರ ಪತ್ರದ ನಾಲ್ಕು ಸಂಪಾದಕರಿಗೆ ಶಿಕ್ಷೆಯಾಯಿತು. ವಂದೇ ಮಾತರಂ ಪತ್ರದ ಸಂಪಾದಕರ ಮೇಲೂ ಖಟ್ಲೆಯಾಗಿ ಆ ಖಟ್ಲೆಯಲ್ಲಿ ಸಾಕ್ಷಿಯನ್ನು ಕೊಡಲು ಅಲ್ಲಗಳೆದುದಕ್ಕೆ ಬಿಪಿನಚಂದ್ರಪಾಲರಿಗೂ ಶಿಕ್ಷೆಯಾಯಿತು. ೧೯೦೮ರ ಡಿಶಂಬರ ತಿಂಗಳಲ್ಲಿ ಅಶ್ವಿನಿಕುಮಾರ ದತ್ತ, ಕೃಷ್ಣಕುಮಾರ ಮಿತ್ರ, ಸತೀಶಚಂದ್ರ ಚತರ್ಜಿ, ಸಚೀಂದ್ರ ಪ್ರಸಾದ ಘೋಸ, ಮತ್ತು ಸುಬೋಧ ಮುಲಿಕ, ಇವರೆಲ್ಲರನ್ನೂ ಹದ್ದುಪಾರು ಮಾಡಿದರು.

ಇತ್ತ ಮುಂಬೈ ಇಲಾಖೆಯಲ್ಲಿಯೂ ಈ ಮೊದಲೆ ದಬ್ಬಾಳಿಕೆಗೆ ಪ್ರಾರಂಭವಾಗಿತ್ತು. ಜೂನ ತಿಂಗಳಲ್ಲಿ ಲೋಕಮಾನ್ಯ ಟಿಳಕರನ್ನು ಹಿಡಿದು ಕೇಸರಿಯಲ್ಲಿ ರಾಜದ್ರೋಹದ ಲೇಖಗಳನ್ನು ಬರೆದರೆಂದು ಅವರ ಮೇಲೆ ಆರೋಪ ಹೊರಿಸಿ ಸರಕಾರದವರು ಅವರ ಮೇಲೆ ಖಟ್ಲೆಯನ್ನು ಮಾಡಿದರು. ಆದರಲ್ಲಿ ಅವರಿಗೆ ಆರು ವರ್ಷ ಶಿಕ್ಷೆಯಾಯಿತು. ಅವರಿಗೆ ಶಿಕ್ಷೆಯಾದ ಸುದ್ದಿಯನ್ನು ಕೇಳಿ ಮುಂಬೈಯಲ್ಲಿ ಕೂಲಿಕಾರರು ಆರೇಳು ದಿನ

ಸಂಪು ಮಾಡಿದರು. ಅವರಿಗೂ ಪೋಲಿಸರಿಗೂ ಒಂದೆಡೆಗೆ ತಿಕ್ಕಾಟವಾಗಿ ಪೋಲಿಸರು ಅವರ ಮೇಲೆ ಗುಂಡು ಹಾರಿಸಿದರು. ಅದೇ ಸಮಯಕ್ಕೆ ಶಿವರಾಮಪಂತ ಪರಾಂಜಪೆ, ವಾಮನ ಮಲ್ಹಾರ ಜೋಶಿ, ವಿಜಾಪೂರಕರ, ಮುಂತಾದವರಿಗೂ ಶಿಕ್ಷೆಗಳಾದವು. ಬಂಗಾಲದಲ್ಲಿ ಅನೇಕ ಕ್ರಾಂತಿಕಾರಕರೊಡನೆ ಅರವಿಂದಘೋಷರನ್ನು ಸೇರಿಸಿ ಸರಕಾರದವರು ಖಟ್ಲೆಯನ್ನು ಮಾಡಿದರು. ಆದರೆ ಅರವಿಂದಘೋಷರು ಮಾತ್ರ ನಿರ್ದೋಷಿಗಳಾಗಿ ಬಿಡಲ್ಪಟ್ಟರು. ಅನಂತರ ತಪಶ್ಚರ್ಯೆಗಾಗಿ ಅವರು ಪಾಂಡಿಚೆರಿಗೆ ಹೋದರು. ಸರಕಾರದ ದಬ್ಬಾಳಿಕೆಯಿಂದ ರಾಷ್ಟ್ರೀಯ ಮುಖಂಡರೆಲ್ಲರೂ ಸೆರೆಮನೆಯನ್ನು ಸೇರಬೇಕಾಯಿತು. ದೇಶದಲ್ಲಿ ಇದುವರೆಗಿದ್ದ ಸಾರ್ವಜನಿಕ ಉತ್ಸಾಹಕ್ಕೆ ಇಳಿತವು ಬಂದಂತಾಯಿತು. ಜನರ ಮನಸ್ಸಿನ ನೋವು ಒಳಗಿಂದೊಳಗೆ ಉರಿಯಹತ್ತಿತು. ಮುಂದೆ ೧೯೧೦ರಲ್ಲಿ ಪ್ರೆಸ್ ಆಕ್ಟ ಪಾಸಾಗಿ ಅನೇಕ ವೃತ್ತಪತ್ರಗಳಿಂದ ಜಾಮೀನ ಹಣವು ತೆಗೆದುಕೊಳ್ಳಲ್ಪಟ್ಟಿತು. ರಾಷ್ಟ್ರೀಯ ವಿದ್ಯಾಲಯಗಳು ಬೇಕಾಯದೇಶೀರ ಸಂಸ್ಥೆಯೆಂದು ಸರಕಾರದವರು ಜಾಹೀರು ಮಾಡಿದ್ದರಿಂದ ಅವೆಲ್ಲ ಬಂದಾಗಿ ಹೋದವು.

(೫೧) **ಕ್ರಾಂತಿಕಾರಕರ ಉದಯ:**— ವಂಗಭಂಗದ ಚಳವಳಿಯ ಕಾಲಕ್ಕೆ ಸರಕಾರಿ ದಬ್ಬಾಳಿಕೆಯಿಂದ ಉದ್ವಿಗ್ನರಾಗಿ ಕೆಲವರು ಕ್ರಾಂತಿಯ ಮಾರ್ಗವನ್ನು ಅನುಸರಿಸಿದರು. ಈ ಕ್ರಾಂತಿಕಾರಕರ ಚಟುವಟಿಕೆಗಳು ರೋಲೆಟ್ ಕಮೀಟಿಯ ರಿಪೋರ್ಟಿನಲ್ಲಿ ವಿಸ್ತೃತವಾಗಿ ವರ್ಣಿಸಲ್ಪಟ್ಟಿವೆ. ಬಂಗಾಲದಲ್ಲಿ ಅನೇಕ ಪೋಲಿಸ ಅಧಿಕಾರಿಗಳೂ, ಮಾಫಿಸಾಕ್ಷಿದಾರರೂ, ಸರಕಾರಕ್ಕೆ ಸಹಾಯವನ್ನು ಮಾಡುವವರೂ, ಬಾಂಬಿನಿಂದಲೂ, ಪಿಸ್ತೂಲಿನಿಂದಲೂ, ಹೊಡೆಯಲ್ಪಟ್ಟರು. ಸರಕಾರಿ ತಿಜೋರಿಗಳನ್ನು ಮುತ್ತಿ ಲಕ್ಷಾವಧಿ ರೂಪಾಯಿಗಳನ್ನು ಕ್ರಾಂತಿಕಾರಕರು ದರೋಡೆ ಮಾಡಿ ಒಯ್ದರು. ಮಹಾರಾಷ್ಟ್ರದಲ್ಲಿಯೂ, ಸಾವರಕರರ ನೇತೃತ್ವದಲ್ಲಿ ಒಂದು ಕ್ರಾಂತಿ ಪಕ್ಷವು ಸಂಘಟಿತವಾಗಿ ನಾಸಿಕದ ಕಲೇಕ್ಟರರಾದ ಜಾಕ್ಸನ್ನರ ಕೊಲೆಯಾಯಿತು. ಲಂಡನ್ನದಲ್ಲಿ ಮದನಲಾಲಡಿಂಗ್ರಾ ಎಂಬವನು ಕರ್ಝನ್ನ ವಾಯಲಿವರನ್ನು ಕೊಂದನು. ತಿನಿವೆಲ್ಲಿಯಲ್ಲಿ ಆಶ ಕಲೆಕ್ಟರರ ಕೊಲೆಯಾಯಿತು. ಕ್ರಾಂತಿಕಾರಕರು ಅನೇಕ ಸಂಸ್ಥೆಗಳನ್ನು ಏರ್ಪಡಿ

ಸಿದರು. ರಾಜದ್ರೋಹಿ ವಾಙ್ಮಯವನ್ನು ಪಸರಿಸಿದರು. ವಿಶೇಷವಾಗಿ ವಿದ್ಯಾರ್ಥಿಗಳಲ್ಲಿ ರಾಜದ್ರೋಹಿ ತತ್ವಗಳನ್ನು ಪಸರಿಸಿದರು. ಕ್ರಾಂತಿಕಾರಕರ ಈ ಚಟುವಟಿಕೆಗಳನ್ನು ಇಲ್ಲಿ ವಿಸ್ತಾರ ಪೂರ್ವಕವಾಗಿ ವಿವರಿಸುವದು ಸಾಧ್ಯವಿಲ್ಲ. ಆಗ ಪ್ರಾರಂಭವಾದ ಕ್ರಾಂತಿಕಾರಕರ ಚಟುವಟಿಕೆಗಳು ಇವೊತ್ತಿನವರೆಗೂ ನಿಂತಿಲ್ಲ. ಕಾಂಗ್ರೆಸ್ಸಿಗೆ ಮಾತ್ರ ಕ್ರಾಂತಿಕಾರಕರ ಹಿಂಸಾ ಪದ್ಧತಿಯು ಸಮ್ಮತವಿದ್ದಿಲ್ಲ. ಈಗಲಾದರೂ ಸಮ್ಮತವಿಲ್ಲ.

(೫೨) **ಮೋರ್ಲೇ ಮಿಂಟೊ ಸುಧಾರಣೆಗಳು**:— ವಂಗಭಂಗದ ಚಳವಳಿಯನ್ನು ಮುರಿಯುವ ಕಾರ್ಯದೊಡನೆ ಸರಕಾರದವರು ಕಾಯದೆ ಕೌನ್ಸಿಲುಗಳಿಗೆ ಹೆಚ್ಚಿನ ಅಧಿಕಾರವನ್ನು ಕೊಡುವ ಕಾರ್ಯವನ್ನು ಮುಂದರಿಸಿದರು. ಹಿಂದುಸ್ಥಾನದ ಜನರು ಬೇಡುತ್ತಿದ್ದ ಹಕ್ಕುಗಳನ್ನು ಕುರಿತು ಲಾರ್ಡ ಮೋರ್ಲೆಯವರು "ಹಿಂದೂ ಜನರು ಚಂದಪ್ಪನನ್ನು ತಂದು ಕೊಡೆಂದು ಕೇಳುತ್ತಲಿರುವರು; ಆಕಾಶದೊಳಗಿನ ಚಂದಪ್ಪನನ್ನು ನಾನು ಅವರಿಗೆ ತಂದು ಕೊಡಲಾರೆನೆ"ಂದು, ಹೇಳಿದರು. ಆದರೆ ಸ್ವಲ್ಪ ಮಟ್ಟಿಗಾದರೂ ಹಕ್ಕುಗಳನ್ನು ಕೊಡದೆ ಹಿಂದೀ ಜನಾಂಗವು ಶಾಂತವಾಗಲಾರದೆಂಬ ಮಾತು ಸ್ಪಷ್ಟವಾಗಿ ತೋರಹತ್ತಿತು. ೧೯೦೫ರಿಂದಲೆ ಸುಧಾರಣೆಯ ಮಾತುಕತೆಗಳಿಗೆ ಪ್ರಾರಂಭವಾಗಿ ೧೯೦೯ರಲ್ಲಿ ಸುಧಾರಣೆಯ ಹೊಸ ಕಾಯದೆಯು ಪಾಸಾಯಿತು. ಆ ಕಾಯದೆಯೊಳಗಿನ ಮುಖ್ಯ ಮಾತುಗಳು ಈ ಕೆಳಗಿನಂತಿದ್ದವು.

(೧) ಕಾಯದೆ ಮಂಡಳದ ಸಭಾಸದರಲ್ಲಿ ಕೆಲವರು ಮುನ್ಸಿಪಾಲ್ಟಿ, ಲೋಕಲಬೋರ್ಡು, ಯುನಿವ್ಹರ್ಸಿಟಿ, ವ್ಯಾಪಾರಿ ಸಂಘಗಳು, ಜಮೀನದಾರರು, ಚಹಾದ ತೋಟಿಗರು ಈ ಮತದಾರ ಸಂಘಗಳಿಂದ ಆರಿಸಲ್ಪಡುತ್ತಿದ್ದರು. ಈ ಘಟನೆಯಂತೆ ಪ್ರಾಂತಿಕ ಕೌನ್ಸಿಲ್ಲುಗಳಲ್ಲಿ ಸರಕಾರೇತರ ಸಭಾಸದರೂ, ಹಿಂದುಸ್ಥಾನ ಸರಕಾರದ ಕೌನ್ಸಿಲ್ಲಿನಲ್ಲಿ (Imperial Legislative Council) ಸರಕಾರೀ ಸಭಾಸದರೂ ಬಹು ಸಂಖ್ಯೆಯುಳ್ಳವರಾದರು. (೨) ಹೊಸ ಘಟನೆಯಂತೆ ಕಾಯದೆ ಮಂಡಳಗಳ ಅಧಿಕಾರಗಳೂ ಬೆಳೆದವು. ಅಂದಾಜು ಪತ್ರಿಕೆಯ ವಿಷಯದಲ್ಲಾಗಲಿ, ಇಲ್ಲವೆ ಪ್ರಜೆಗಳ ಹಿತಕ್ಕೆ ಸಂಬಂಧಿಸಿದ ಯಾವದೆ ಮಾತಿನ ವಿಷಯದಲ್ಲಾಗಲಿ ಸಭಾಸದರು

ಸೂಚನೆಗಳನ್ನು ಮಂಡಿಸಬಹುದಿತ್ತು. ಇಂತಹ ಸೂಚನೆಗಳನ್ನು ಕುರಿತು ಮತಗಣನೆಯಾಗಲು ಅಡ್ಡಿಯಿರಲಿಲ್ಲ. ಯಾವದೊಂದು ಪ್ರಶ್ನೆಗೆ ಸರಕಾರದಿಂದ ಸಮಾಧಾನಕಾರಕವಾದ ಉತ್ತರವು ದೊರೆಯದಿದ್ದರೆ ಇನ್ನೂ ಹೆಚ್ಚಿನ ಪ್ರಶ್ನೆಗಳನ್ನು ಕೇಳಲು ಹೆಚ್ಚಿನ ಅಧಿಕಾರವು ಕೊಡಲ್ಪಟ್ಟಿತು. (೩) ೧೯೦೯ರ ಕಟ್ಟಳೆಯಿಂದ ಪ್ರಾತಿನಿಧಿಕ ತತ್ವವು ಪೂರ್ಣವಾಗಿ ಅಮಲಿನಲ್ಲಿ ಬರದಿದ್ದರೂ ಆ ದಿಕ್ಕಿನಲ್ಲಿ ಒಂದು ಹೆಜ್ಜೆಯನ್ನು ಮುಂದಿಟ್ಟಂತಾಯಿತು.

(೫೩) **ಕಾಂಗ್ರೆಸ್ಸಿನ ಅಜ್ಞಾತವಾಸವು೧೯೦೮–೧೯೧೪:**— ಅಲ್ಲಾಹಾಬಾದಿನಲ್ಲಿ ಗೊತ್ತಾದ ಹೊಸ ಘಟನೆಯಂತೆ ಮದ್ರಾಸಿನಲ್ಲಿ ಕಾಂಗ್ರೆಸ್ಸಿನ ೨೩ನೆಯ ಅಧಿವೇಶನವು ಡಿಶಂಬರ ೨೩ನೆಯ ತಾರೀಖಿನ ದಿನ ಜರುಗಿತು. ಕಾಂಗ್ರೆಸಿಗೆ ೬೨೬ ಪ್ರತಿನಿಧಿಗಳು ಬಂದಿದ್ದರು. ರಾಸಬಿಹಾರಿ ಘೋಷರು ಅಧ್ಯಕ್ಷರಿದ್ದರು. ೨೪ನೆಯ ಅಧಿವೇಶನವು ಲಾಹೋರದಲ್ಲಿ ಕೂಡಿತು. ೨೪೩ ಪ್ರತಿನಿಧಿಗಳು ಬಂದಿದ್ದರು. ಪಂಡಿತ ಮದನಮೋಹನ ಮಾಲವೀಯರು ಅಧ್ಯಕ್ಷರಿದ್ದರು. ೧೯೧೦ರ ಡಿಶಂಬರದಲ್ಲಿ ಸರ ವಿಲಿಯಮ್ ವೆಡರ್ಬನರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ಸಿನ ೨೫ನೆಯ ಅಧಿವೇಶನವು ಅಲ್ಲಾಹಾಬಾದದಲ್ಲಿ ಜರುಗಿತು. ಅಧಿವೇಶನಕ್ಕೆ ೬೩೬ ಪ್ರತಿನಿಧಿಗಳು ಬಂದಿದ್ದರು. ೨೬ನೆಯ ಅಧಿವೇಶನವು ಬಿಶನ್ ನಾರಾಯಣಧಾರರ ಅಧ್ಯಕ್ಷತೆಯಲ್ಲಿ ಕಲಕತ್ತೆಯಲ್ಲಿ ೧೯೧೧ರ ಡಿಶಂಬರ ೨೬ನೆಯ ತಾರೀಖಿನ ದಿನ ಕೂಡಿತು. ಆ ವರ್ಷ ವಂಗ ಭಂಗವು ರದ್ದಾಗಿ ಬಂಗಾಲೀ ಮಾತನಾಡುವ ಎಲ್ಲ ಜನರೂ ಮತ್ತೆ ಬಂಗಾಲದಲ್ಲಿ ಸೇರಿಸಲ್ಪಟ್ಟಿದ್ದರು. ಹೊಸ ಸುಧಾರಣೆಯನ್ನು ಅಮಲಿನಲ್ಲಿ ತರುವದಕ್ಕಾಗಿ ಪ್ರತ್ಯಕ್ಷ ಬಾದಶಹರೆ ಹಿಂದುಸ್ಥಾನಕ್ಕೆ ಬಂದು ದಿಲ್ಲಿಯಲ್ಲಿ ದರಬಾರ ಮಾಡಿ ಹೋದರು. ಆದುದರಿಂದ ಕಾಂಗ್ರೆಸ್ಸಿನ ಮುಖಂಡರಲ್ಲಿ ಸ್ವಲ್ಪ ಉತ್ಸಾಹವು ಕಂಡುಬರುತ್ತಿತ್ತು. ಈ ಅಧಿವೇಶನಕ್ಕೆ ರ್‍ಯಾಮ್ಸೆ ಮ್ಯಾಕ್ಡೊನಾಲ್ಡರು ಅಧ್ಯಕ್ಷಸ್ಥಾನವನ್ನು ವಹಿಸಬೇಕೆಂದು ಮೊದಲು ಗೊತ್ತಾಗಿತ್ತು. ಆದರೆ ಅನಪೇಕ್ಷಿತ ಕಾರಣದಿಂದ ಅವರು ಇಂಗ್ಲೆಂಡಿಗೆ ಹೋಗಬೇಕಾಯಿತು. ೧೯೧೨ರ ಡಿಸೆಂಬರದಲ್ಲಿ ಬಾಂಕೀಪೂರದಲ್ಲಿ ಕಾಂಗ್ರೆಸ್ಸಿನ ೨೭ನೆಯ ಅಧಿವೇಶನವು ಆರ್, ಎನ್. ಮುಧೋಳಕರರ ಅಧ್ಯಕ್ಷತೆಯಲ್ಲಿ ಜರುಗಿತು. ೨೦೭ ಪ್ರತಿನಿಧಿಗಳು ಬಂದಿದ್ದರು.ಮುಂದಿನ ಅಧಿವೇಶನವು

ಕರಾಚಿಯಲ್ಲಿ ಕೂಡಿತು. ಸಯ್ಯದಮಹಮ್ಮದ ಬಹಾದ್ದೂರರು ಅಧ್ಯ ಕ್ಷರೆಂದು ಆರಿಸಲ್ಪಟ್ಟರು. ಸ್ವಾಗತ ಸಮಿತಿಯ ೨೦೧ ಸಭಾಸದರನ್ನು ಹಿಡಿದು ೫೫೦ ಪ್ರತಿನಿಧಿಗಳು ಬಂದಿದ್ದರು.

ಇವೆಲ್ಲ ಅಧಿವೇಶನಗಳಲ್ಲಿ ಕಾಯದೆಕೌನ್ಸಿಲ ಸುಧಾರಣೆಗಳು, ಶಿಕ್ಷಣ, ದಬ್ಬಾಳಿಕೆಯ ನಿಷೇಧ, ಮುಂತಾದ ವಾಡಿಕೆಯ ವಿಷಯಗಳು ಚರ್ಚಿಸಲ್ಪ ಟ್ಟವು. ಈ ಆರು ವರ್ಷಗಳಲ್ಲಿ ರಾಷ್ಟ್ರೀಯ ದೃಷ್ಟಿಯಿಂದ ದೇಶದಲ್ಲೆಲ್ಲ ಸ್ತಬ್ಧತೆಯಿತ್ತು. ಜನರ ನಿಷ್ಠೆಯು ಮಂದಪಕ್ಷದವರಿಗಿಂತಲೂ ರಾಷ್ಟ್ರೀಯ ಪಕ್ಷದವರ ಮೇಲೆಯೆ ಹೆಚ್ಚಾಗಿತ್ತು. ಮಾತಿಗಿಂತಲೂ ಕೃತಿಯ ಅವಶ್ಯಕ ತೆಯೆ ಜನರಿಗೆ ಹೆಚ್ಚು ಅನಿಸುತ್ತಿತ್ತು. ಈ ಮುಂದೆ ಕಾಂಗ್ರೆಸ್ಸಿನ ಹೊಸ ಮುಖಂಡರ ವರ್ಚಸ್ಸು ಕಡಿಮೆಯಾಗಿ ರಾಷ್ಟ್ರೀಯ ಪಕ್ಷದವರ ವರ್ಚಸ್ಸು ಹೆಚ್ಚಾಗುತ್ತ ನಡೆಯಿತು.

## ನಾಲ್ಕನೆಯ ಭಾಗ

### ಹೋಮರೂಲಿನ ಆಂದೋಲನ (೧೯೧೪–೧೯೧೯)

(೫೪) **ಲೋಕಮಾನ್ಯ ಟಿಳಕರ ಬಿಡುಗಡೆ** ೧೯೧೪ರ ಜೂನ ೧೭ನೆಯ ತಾರೀಖಿನ ಮಧ್ಯರಾತ್ರಿ ಲೋಕಮಾನ್ಯರು ಪುಣೆಯಲ್ಲಿ ತಂದು ಬಿಡಲ್ಪಟ್ಟರು. ೨೦ನೆಯ ತಾರೀಖಿನ ದಿನ ಜಾಹೀರ ಸಭೆಯಲ್ಲಿ ಅವರಿಗೆ ಸ್ವಾಗತವು ಜರುಗಿತು. ಆ ಕಾಲಕ್ಕೆ ಅವರು ತಮ್ಮ ಮುಂದಿನ ಕಾರ್ಯಕ್ರಮದ ವಿಷಯಕ್ಕೆ ಈ ಕೆಳಗಿನ ಮಾತುಗಳನ್ನು ಆಡಿದರು: "ನನ್ನನ್ನು ಜನರು ಮರೆತಿಲ್ಲವೆಂಬ ಮಾತು ಇಲ್ಲಿ ಕೂಡಿದ ಜನರ ಸಂದಣಿಯಿಂದ ವ್ಯಕ್ತವಾಗುತ್ತದೆ. ನಾನಾದರೂ ಜನರನ್ನು ಮರೆತಿಲ್ಲ. ಆರು ವರ್ಷಕ್ಕೆ ಮೊದಲು ನಾನು ತಮ್ಮೊಡನೆ ಯಾವ ರೀತಿಯಿಂದ ವರ್ತಿಸಿದ್ದೆನೋ ಅದೇ ರೀತಿಯಿಂದ ಮುಂದಾದರೂ ವರ್ತಿಸುವೆನು. ತಾವು ನನ್ನನ್ನು ಮೊದಲಿನಂತೆಯೆ ಸ್ವೀಕರಿಸಲು ಸಿದ್ಧರಿರುವಿರೆಂಬುದಕ್ಕೆ ಇಲ್ಲಿ ಕೂಡಿದ ಜನಸಮೂಹವೆ ಸಾಕ್ಷಿ."

ಲೋಕಮಾನ್ಯ ಟಿಳಕರನ್ನು ಯಾರೂ ಭೆಟ್ಟಿಯಾಗಬಾರದೆಂದು ಸರಕಾರೀ ಅಧಿಕಾರಿಗಳು ಹುಕುಮನ್ನು ಹೊರಡಿಸಿದರು. ಆದರೆ ಅದು ನಿರರ್ಥಕವಾಯಿತು. ಆ ವರ್ಷ ಗಣೇಶ ಉತ್ಸವದಲ್ಲಿ ಗಣಪತಿಯ ಹೆಸರಿನ ಹೊರತಾಗಿ ಎರಡನೆಯ ಯಾವ ಶಬ್ದದ ಜಯಜಯಕಾರ ಮಾಡಬಾರದೆಂದೂ ರಾಜದ್ರೋಹಕ್ಕಾಗಿ ಶಿಕ್ಷೆಯಾದ ಜನರ ಚಿತ್ರಗಳನ್ನು ಪ್ರದರ್ಶಿಸಬಾರದೆಂದೂ ಪುಣೆಯ ಕಲೆಕ್ಟರರು ನಿಯಮಗಳನ್ನು ಮಾಡಿದರು. ಆಗಸ್ಟ ೪ನೆಯ ತಾರೀಖಿನ ದಿವಸ ಮಹಾಯುದ್ಧವು ಪ್ರಾರಂಭವಾದನಂತರ ಆಗಸ್ಟ ೨೭ ನೆಯ ತಾರೀಖಿನ ದಿನ ಲೋಕಮಾನ್ಯರು ಒಂದು ಜಾಹೀರ ನಾಮೆಯನ್ನು ಹೊರಡಿಸಿದರು. ಅದರಲ್ಲಿ ಅವರು ರಾಜಕೀಯ ಅತ್ಯಾಚಾರಗಳನ್ನು ನಿಷೇಧಿಸಿ ಇಂಗ್ಲಂಡಿಗೆ ಸದ್ಯದ ಪರಿಸ್ಥಿತಿಯಲ್ಲಿ ಸಹಾಯ ಮಾಡುವದೆ ನಮ್ಮ ಕರ್ತವ್ಯವೆಂದು ಹೇಳಿದರು. ಆಯರ್ಲಂಡದ ಹೋಮರೂಲದ

ಪಕ್ಷದಂತೆ ಸದ್ಯದಾಡಳಿತೆಯಲ್ಲಿ ಬದಲು ಮಾಡಿಕೊಳ್ಳುವದೆ ತಮ್ಮ ಗುರಿಯಾಗಿದೆಯೆಂದು ಹೇಳಿದರು. ಈ ಜಾಹೀರನಾಮೆ ಹೊರಟನಂತರ ಲೋಕಮಾನ್ಯರ ಮೇಲಿನ ಸರಕಾರದವರ ವಕ್ರದೃಷ್ಟಿಯು ಸ್ವಲ್ಪ ಕಡಿಮೆಯಾಯಿತು. ಲೋಕಮಾನ್ಯ ಟಿಳಕರ ಬಿಡುಗಡೆಯಾದ ಕೂಡಲೆ ಕಾಂಗ್ರೆಸ್ಸಿನ ಎರಡೂ ಬಣಗಳಲ್ಲಿ ಒಕ್ಕಟ್ಟನ್ನು ಮಾಡುವ ಪ್ರಯತ್ನಕ್ಕೆ ಪ್ರಾರಂಭವಾಯಿತು. ಮುಂದಿನ ಕಾರ್ಯಕ್ರಮವನ್ನು ಕಾಂಗ್ರೆಸ್ಸಿನಲ್ಲಿಯೆ ಸೇರಿ ಹೂಡಬೇಕೆಂದು ಟಿಳಕರ ಇಚ್ಛೆ ಇತ್ತು. ೧೯೧೪ರ ಡಿಸೆಂಬರದಲ್ಲಿ ಕಾಂಗ್ರೆಸ್ಸಿನ ಅಧಿವೇಶವು ಮದ್ರಾಸಿನಲ್ಲಿ ಕೂಡಿದಾಗ ಈ ಪ್ರಶ್ನೆಯನ್ನು ಆನಿ ಬಿಝಾಂಟರು ಮುಂದೆ ತಂದರು. ಆದರೆ ಆಯುತ ಹೊತ್ತಿಗೆ ಗೋಖಲೆಯವರು ಕಾಂಗ್ರೆಸಿನ ಅಧ್ಯಕ್ಷರಿಗೆ ಪತ್ರ ಬರೆದು ಸರಕಾರದವರನ್ನು ಪೂರ್ಣವಾಗಿ ಬಹಿಷ್ಕರಿಸುವದೆ ಟಿಳಕರ ಕಾರ್ಯಕ್ರಮವಿದೆಯೆಂದು ತಿಳಿಸಿದ್ದರಿಂದ ಈ ಪ್ರಶ್ನೆಯು ಅಲ್ಲಿ ನಿಂತು ಹೋಯಿತು. ಕಾಂಗ್ರೆಸ್ಸಿಗೆ ಪ್ರತಿನಿಧಿಗಳನ್ನು ಆರಿಸುವ ಹಕ್ಕನ್ನು ಕೇವಲ ಆಗಿನ ಕಾಂಗ್ರೆಸ್ ಕಮೀಟಿಗಳು ಮತ್ತು ಅವುಗಳಿಗೆ ಸಮ್ಮತವಾದ ಸಂಘಗಳ ಕಡೆಗಿರದೆ ಎಲ್ಲ ಸಾರ್ವಜನಿಕ ಸಂಘಗಳಿಗೂ ಇರತಕ್ಕದ್ದೆಂದು ರಾಷ್ಟ್ರೀಯ ಪಕ್ಷದ ಸೂಚನೆಯಿತ್ತು. ಗೋಖಲೆಯವರು ೧೯೧೫ ರ ಡಿಸೆಂಬರ ತಿಂಗಳಲ್ಲಿ ಮುಂಬಯಿಯಲ್ಲಿ ನೆರವೇರಿದ ಅಧಿವೇಶನದಲ್ಲಿ ರಾಷ್ಟ್ರೀಯ ಪಕ್ಷದ ಸೂಚನೆಯು ಪಾಸುಮಾಡಲ್ಪಟ್ಟು ಆ ಪಕ್ಷದವರಿಗೆ ಕಾಂಗ್ರೆಸ್ಸಿನ ಬಾಗಿಲವು ತೆರದಂತಾಯಿತು. ಹೊಸ ಘಟನೆಯಂತೆ ಲಖನೌದಲ್ಲಿ ೧೯೧೬ ರ ಡಿಸೆಂಬರದಲ್ಲಿ ಜರುಗಿದ ಕಾಂಗ್ರೆಸ್ಸಿನ ಅಧಿವೇಶನಕ್ಕೆ ಲೋಕಮಾನ್ಯರೂ ಅವರನುಯಾಯಿಗಳೂ ಹೋಗಿ ಕೂಡಿದರು. ಲೋಕಮಾನ್ಯರು ಬಿಡುಗಡೆಯಾದಂದಿನಿಂದ ತಮ್ಮ ಪಕ್ಷದ ಸಂಘಟನೆಯನ್ನು ಪ್ರಾರಂಭಿಸಿದ್ದರು. ೧೯೧೫ ರ ಮೇ ೭ ತಾರೀಖಿನ ದಿವಸ ಬ್ಯಾರಿಸ್ಟರ ಬ್ಯಾಪ್ಟಿಸ್ಟಾರವರ ಅಧ್ಯಕ್ಷತೆಯಲ್ಲಿ ಪುಣೆಯ ಕಿರ್ಲೋಸ್ಕರ ಥೇಟರದಲ್ಲಿ ರಾಷ್ಟ್ರೀಯರ ಪ್ರಾಂತಿಕ ಪರಿಷತ್ತು ಕೂಡಿತು. ಆ ಪರಿಷತ್ತಿಗೆ ೯೬೦ ಪ್ರತಿನಿಧಿಗಳೂ ೧೦೦೦ ಪ್ರೇಕ್ಷಕರೂ ಬಂದಿದ್ದರು. ಒಪ್ಪಂದದ ಪ್ರಯತ್ನವನ್ನು ಹೇಗೆ ಮುಂದುವರಿಸಬೇಕೆಂಬುದನ್ನು ವಿಚಾರಿಸಲು ಟಿಳಕ, ಬ್ಯಾಪ್ಟಿಸ್ಟಾ ಮತ್ತು ಬೆಳವಿ ಇವರ ಮಂಡಳವು ನೇಮಿಸಲ್ಪಟ್ಟಿತು. ೧೯೧೫ರ

ಸಪ್ಟಂಬರ ೨೫ ನೆಯ ತಾರೀಖಿನ ದಿವಸ ಬಿಝಾಂಟಮ್ಮಸವರು ತಮ್ಮ ಸ್ವರಾಜ್ಯ ಸಂಘದ ಉದ್ದೇಶ ಪತ್ರಿಕೆಯನ್ನು ಪ್ರಸಿದ್ಧಿಸಿದರು.

**(೫೫) ಮುದ್ರಾಸಿನಲ್ಲಿ ಕಾಂಗ್ರೆಸ್ಸಿನ ೨೯ ನೆಯ ಅಧಿವೇಶನವು(೧೯೧೪):—** ಕಾಂಗ್ರೆಸ್ಸಿನ ೨೯ ನೆಯ ಅಧಿವೇಶನವು ಮುದ್ರಾಸಿನಲ್ಲಿ ೧೯೧೪ ರ ಡಿಸೆಂಬರ ತಿಂಗಳ ೨೮, ೨೯, ೩೦, ತಾರೀಖುಗಳ ದಿನ ನೆರವೇರಿತು. ಅಧಿವೇಶನಕ್ಕೆ ೮೮೬ ಪ್ರತಿನಿಧಿಗಳು ಬಂದಿದ್ದರು. ಭೂಪೇಂದ್ರನಾಥ ಬಸೂರವರು ಅಧ್ಯಕ್ಷರಾಗಿದ್ದರು. ಅಧ್ಯಕ್ಷರ ಮಾತಿನಲ್ಲಿ ವಿಶೇಷ ಹೊಸ ಹುರುಪಿನ ಮಾತುಗಳಿದ್ದಿಲ್ಲ. ಒಂದು ಬದಿಗೆ ದಾಸ್ಯವು ಇನ್ನೊಂದು ಬದಿಗೆ ಸಂಪೂರ್ಣ ಸ್ವಾತಂತ್ರ್ಯವು ಇವೆರಡೂ ತ್ಯಾಜ್ಯವೆಂದು ಅವರು ಹೇಳಿದರು. ಸಾಮ್ರಾಜ್ಯಾಂತರ್ಗತ ಸ್ವರಾಜ್ಯವೆ ಕಾಂಗ್ರೆಸ್ಸಿನ ಗುರಿಯೆಂದು ಹೇಳಿದರು. ಆ ವರ್ಷದ ಅಧಿವೇಶನದಲ್ಲಿ ಮಾಮೂಲಿನಂತೆಯೆ ಠರಾವುಗಳು ಪಾಸಾದವು. ಮುದ್ರಾಸ ಗವ್ಹರ್ನರರು ಅಧಿವೇಶನಕ್ಕೆ ಬಂದ ಕಾಲಕ್ಕೆ ಎಲ್ಲರೂ ಎದ್ದುನಿಂತು ಚಪ್ಪಾಳೆ ಬಾರಿಸಿದರು.

**(೫೬) ಮುಂಬಯಿಯಲ್ಲಿ ೩೦ ನೆಯ ಅಧಿವೇಶನವು:—** ೧೯೧೫ ರ ಡಿಶಂಬರದ ಕೊನೆಯಲ್ಲಿ ಸರ ಸತ್ಯೇಂದ್ರಪ್ರಸನ್ನ ಸಿಂಹರ ಅಧ್ಯಕ್ಷತೆಯಲ್ಲಿ ನೆರವೇರಿತು. ಮುಂಬಯಿಯ ಕಾಂಗ್ರೆಸ್ಸಕ್ಕೆ ೨೨೫೯ ಪ್ರತಿನಿಧಿಗಳು ಬಂದಿದ್ದರು. ಅಧ್ಯಕ್ಷರ ಭಾಷಣವು ಬಹಳ ಮೆತ್ತಗಾಗಿತ್ತು. ನಾವು ಶಾಂತ ರೀತಿಯಿಂದ ದಾರಿಕಾಯುತ್ತ ಕೂಡುವದರಲ್ಲಿಯೆ ಜಾಣತನವಿದೆಯೆಂದು ಅವರು ಹೇಳಿದರು. ಅಧಿವೇಶನದಲ್ಲಿ ಪಾಸಾದ ಠರಾವುಗಳು ಮಾಮೂಲಿನಂತಿದ್ದವು. ಕಾಯದೆ ಕೌನ್ಸಿಲುಗಳ ಸುಧಾರಣೆಯೂ ಬೇಕೆಂದೂ ಸ್ವರಾಜ್ಯದ ಹೆಚ್ಚಿನ ಹಕ್ಕುಗಳು ದೊರೆಯಬೇಕೆಂದೂ ನಿರ್ಣಯವಾಯಿತು. ಈ ವಿಷಯದಲ್ಲಿ ನಿಶ್ಚಿತವಾದ ಯೋಜನೆಯನ್ನು ವಿಚಾರಿಸಲು ಒಂದು ಕಮೀಟಿಯು ನೇಮಿಸಲ್ಪಟ್ಟಿತು. ಮುಸ್ಲಿಂ ಲೀಗಿನ ಕಮೀಟಿಯವರೊಡನೆಯೂ ವಿಚಾರ ವಿನಿಮಯವನ್ನು ಮಾಡಬೇಕೆಂದು ಗೊತ್ತಾಯಿತು. ಈ ಮೊದಲೆ ಹೇಳಿದಂತೆ ರಾಷ್ಟ್ರೀಯ ಪಕ್ಷದವರಿಗೆ ಕಾಂಗ್ರೆಸ್ಸಿನೊಳಕ್ಕೆ ಬರಲು ಅನುಕೂಲತೆಯನ್ನೊದಗಿಸಿಕೊಡುವಂತೆ ಘಟನೆಯಲ್ಲಿ ಮಾರ್ಪಾಟಾಯಿತು.

(೫೭) **೧೯೧೬ ನೆಯ ಇಸ್ವಿಯಲ್ಲಿಯ ಚಟುವಟಿಕೆಗಳು:—** ಕಾಂಗ್ರೆಸ್ಸಿನ ಘಟನೆಯಲ್ಲಿ ರಾಷ್ಟ್ರೀಯ ಪಕ್ಷಕ್ಕೆ ಬೇಕಾದ ಮಾರ್ಪಾಟಾದ ಕೂಡಲೆ ತಾವಿನ್ನು ಕಾಂಗ್ರೆಸ್ಸನ್ನು ಸೇರುವೆವೆಂದು ಲೋಕಮಾನ್ಯ ಟಿಳಕರು ಜಾಹೀರ ಪಡಿಸಿದರು. ೧೯೧೬ ರ ಎಪ್ರಿಲ ತಿಂಗಳ ೨೯ನೆಯ ತಾರೀಖಿನ ದಿವಸ ಮುಂಬಯಿ ಪ್ರಾಂತದ ೧೬ನೆಯ ಪರಿಷತ್ತು ಬೆಳಗಾವಿಯಲ್ಲಿ ನೆರವೇರಿತು. ಮುಂಬೈ ಕಾಂಗ್ರೆಸ್ಸಿನ ಘಟನೆಯಲ್ಲಿ ಮಾಡಲ್ಪಟ್ಟ ಬದಲಾವಣೆಯು ಸಮಾಧಾನಕರವಿರದಿದ್ದರೂ ರಾಷ್ಟ್ರೀಯ ಪಕ್ಷದವರು ಕಾಂಗ್ರೆಸ್ಸಿನಲ್ಲಿ ಸೇರಬೇಕೆಂದು ಮುಖ್ಯ ಠರಾವು ಪಾಸಾಯಿತು. ಪರಿಷತ್ತಿನ ಕಾರ್ಯವು ಮುಗಿದ ನಂತರ ಮೇ ೧ನೆಯ ತಾರೀಖಿನ ದಿನ ಬೆಳಗಾಂವಿಯಲ್ಲಿ ಹೋಮರೂಲ ಲೀಗದ ಸ್ಥಾಪನೆಯಾಯಿತು. ಆ ದಿನ " ಸ್ವರಾಜ್ಯವೆಂದರೇನು " ಈ ವಿಷಯವನ್ನು ಕುರಿತು ಲೋಕಮಾನ್ಯರ ಭಾಷಣವಾಯಿತು. ಸ್ವರಾಜ್ಯದ ವಿಷಯವನ್ನು ವಿವೇಚಿಸುತ್ತ ಮುಂದಿನಂತೆ ಅವರು ಹೇಳಿದರು; "ಯಾವುದಕ್ಕಾಗಿ ಈ ಹೊಸ ಸಂಘವು ಸ್ಥಾಪಿಸಲ್ಪಟ್ಟಿದೆಯೋ ಅದೇ ವಿಷಯವನ್ನು ಕುರಿತು ನಾನು ಎರಡು ಮಾತುಗಳನ್ನು ಹೇಳಬೇಕೆಂದಿದ್ದೇನೆ. ಸ್ವರಾಜ್ಯದ ವಿಷಯಕ್ಕೆ ಕೆಲವರಿಗೆ ಅಜ್ಞಾನವಿರುವದು. ಕೆಲವರಿಗೆ ತಿಳಿದೂ ತಿಳಿದೂ ಅದರ ವಿಪರ್ಯಾಸವನ್ನು ಮಾಡುತ್ತಾರೆ. ಹಲವರಿಗೆ ಮೊದಲಿನಿಂದಲೆ ಈ ಮಾತು ಬೇಡಾಗಿರುತ್ತದೆ. ಈ ಪ್ರಶ್ನೆಯೇನೂ ನನ್ನ ಉದ್ಯೋಗದಿಂದಲೆ ಉತ್ಪನ್ನವಾದದ್ದಲ್ಲ. ಸ್ವರಾಜ್ಯದ ಕಲ್ಪನೆಯು ಬಹಳೇ ಹಳೆಯದಾಗಿದೆ. ದೇಶದಲ್ಲಿ ರಾಜ್ಯವಿದೆ. ಆದರೆ ಅದು " ಸ್ವ " ಅಂದರೆ ನಮ್ಮದಿಲ್ಲವೆಂದು ಈ ಉದ್ಯೋಗವು. ರಾಜ್ಯವು ಎಷ್ಟರ ಮಟ್ಟಿಗೆ ಒಳ್ಳೆಯದು ಎಷ್ಟರ ಮಟ್ಟಿಗೆ ಕೆಟ್ಟದ್ದು ಇದೇನು ಮುಖ್ಯ ಪ್ರಶ್ನೆಯಲ್ಲ. ದೇಶದಲ್ಲಿ ಪರಕೀಯರ ರಾಜ್ಯವಿದೆ. ಈ ಮಾತಿನ ವಿಷಯಕ್ಕೆ ಯಾರಲ್ಲಿಯೂ ಮತಭೇದವಿಲ್ಲ. ಇಂಗ್ಲಂಡದಲ್ಲಿ ಬಾದಶಹನು ಇರುವನು. ಆದರೆ ಅವನು ಬರೇ ಹೆಸರಿನ ಪೂರ್ತೆ ಇರುವನು. ಇಂಗ್ಲಂಡಿನಿಂದ ಸುಶಿಕ್ಷಿತ ಜನರು ಇಲ್ಲಿ ಬಂದು ತಮಗೆ ಒಳಿತಾಗಿ ತೋರಿದಂತೆ ರಾಜ್ಯದ ವ್ಯವಸ್ಥೆ ಮಾಡುವರು. ಸ್ವರಾಜ್ಯದ ಪ್ರಶ್ನೆಯೆಂದರೆ ರಾಜ್ಯಕಾರಭಾರದ ಪ್ರಶ್ನೆಯು. ಇವೊತ್ತಿನ ದಿವಸ ರಾಜ್ಯದಾಡಳಿತೆಯನ್ನು ಮಾಡುವವರ ಬದಲು ಬೇರೆ ಬೇರೆ ಜನರು ಬೇರೆ

ರೀತಿಯಿಂದ ಆಡಳಿತೆಯನ್ನು ಮಾಡಿದರೆ ಒಳಿತೆಂದು ನಮ್ಮ ನಂಬಿಗೆ. ಇಂಗ್ಲಂಡದ ಅರಸನೆಂದರೆ ಕೇವಲ ನಿರ್ಗುಣ ಪರಬ್ರಹ್ಮಸ್ವರೂಪ ನಂತಿರುವನು. ದೊಡ್ಡ ದೊಡ್ಡ ಸಮಾರಂಭಗಳಲ್ಲಿ ದೇವರಂತೆ ಅವನ ಮೆರವಣಿಗೆ ಹೊರಡುವದು. ಆದರೆ ರಾಜ್ಯಕಾರಭಾರವನ್ನು ಮಾಡುವ ಅಧಿಕಾರವು ಬೇರೆ ಅಧಿಕಾರಿಗಳಿಗಿರುವದು. ನಮ್ಮ ದೇಶದಲ್ಲಿ ಸ್ಟೇಟಸೆಕ್ರೇಟರಿಯಿಂದ ಗೌಡನವರೆಗೆ ಅಧಿಕಾರಿಗಳ ಕೈಯಲ್ಲಿ ರಾಜ್ಯಕಾರಭಾರವಿದೆ. ಈ ಅಧಿಕಾರಿಗಳನ್ನು ಬದಲು ಮಾಡಬೇಕೆಂದು ಹೇಳಿದರೆ ರಾಜದ್ರೋಹವಲ್ಲ. ಪರಕೀಯ ಅಧಿಕಾರಿಗಳು ಹೆಮ್ಮೆಯವರಿರುತ್ತಾರೆ. ಪ್ರಜೆಗಳ ದುಃಖದ ಅನುಭವವು ಅವರಿಗಿರುವದುಲ್ಲ. ಆದುದರಿಂದ ಈ ಅಧಿಕಾರಿ ವರ್ಗವನ್ನೇ ಬದಲಾಯಿಸುವದು ಯೋಗ್ಯವಾದ ಮಾರ್ಗವು. ನಾವು ಸ್ವರಾಜ್ಯಕ್ಕೆ ಪಾತ್ರರಿಲ್ಲವೆಂದು ಕೆಲವರು ಹೇಳುತ್ತಾರೆ. ನಾಮುದಾರ ಸಿಂಹ, ಚೌಬಳ, ಇವರು ಎಗ್ಜಿಕೂಟಿವ್ಹ ಕೌನ್ಸಿಲರು, ಇವರೇನೂ ಪಾತ್ರರಿಲ್ಲವೇ? ವಿಲಾಯತಿಯಿಂದ ಇಪ್ಪತ್ತೊಂದು ವರ್ಷದ ಹರೆಯದ ಯುರೋಪಿಯನ್ನನು ಇಲ್ಲಿಗೆ ಬರುವನು. ಬಂದ ಕೂಡಲೆ ಅವನು ಅಸಿಸ್ಟಂಟ ಕಲೆಕ್ಟರನಾಗುವನು. ೬೦ ವರ್ಷದ ಮಾಮಲೇದಾರನು ಅನುಭವಿಕನಾದರೂ ಇವನ ಕೈಯಲ್ಲಿ ದುಡಿಯಬೇಕು. ಇವನೆದುರಿಗೆ ನಿಲ್ಲಬೇಕು. ನಾವು ಪಾತ್ರರಿಲ್ಲದಿದ್ದರೆ ಹಿಂದಿನ ಕಾಲದಲ್ಲಿ ರಾಜ್ಯವನ್ನು ಹೇಗೆ ಸಾಗಿಸುತ್ತಿದ್ದೆವು? ನಿಷ್ಠುರವಾಗಿ ಇಲ್ಲವೆಂದು ಹೇಳಿ ಬಿಡಿ. ನೀವು ನಮ್ಮನ್ನು ಜಾಣರನ್ನಾಗಿ ಮಾಡಲು ಇಲ್ಲಿ ಬಂದಿರುವಿರಿ. ಇನ್ನು ಎಷ್ಟು ದಿವಸಗಳ ವರೆಗೆ ಶಿಕ್ಷಣದ ಕಾರ್ಯಕ್ರಮವನ್ನು ನಡಿಸುವಿರಿ? ಕಂಪನಿಯು ಹೋಯಿತು, ಪಾರ್ಲಮೆಂಟು ಬಂದಿತು. ಆದರೆ ಇನ್ನೂ ಹಿಂದುಸ್ತಾನದ ಆಯ ವ್ಯಯವನ್ನು ಸ್ಟೇಟ ಸೆಕ್ರೇಟರಿಯೆ ಗೊತ್ತುಮಾಡುತ್ತಾನೆ. ರಾಣಿಯ ಜಾಹೀರನಾಮೆಯು ಸುಳ್ಳಾಗಿ ಹೋಯಿತು. ದಾದಾಭಾಯಿಯಂತಹ ಮುಖಂಡರು ನಾವು ಬೇಡುವದನ್ನೆ ಬೇಡಿದರು. ಮುಂದೆ ಕಾಯದೆ ಕೌನ್ಸಿಲುಗಳು ಬಂದವು. ಆದರೆ ನಿಜವಾದ ಅಧಿಕಾರವು ಮಾತ್ರ ಕೈಗೆ ಬರಲಿಲ್ಲ. ಹೋಮರೂಲನ್ನು ಕೊಟ್ಟರೆ ಇಂಗ್ಲಿಷರ ರಾಜ್ಯವೇನು ಮುಳುಗಿ ಹೋಗುವದಿಲ್ಲ. ನಾವು ಯಾವ ಬಾಗಿಲುಗಳಿಂದ ಹೊರಗೆ

ಬೇಕೆನ್ನುವೆವೋ ಅಲ್ಲಿ ಆಳರಸರು ನಿಂತಿರುವರು. ನಾವು ಅವರಿಗೆ ಧಕ್ಕೆ ಕೊಟ್ಟು ಹೊರಗೆ ಹೋಗಬೇಕಾಗಿದೆ. ನಮಗೆ ಅಡ್ಡಬಂದು ಮತ್ತೆ ದೊಡ್ಡ ಪಗಾರಗಳನ್ನು ತೆಗೆದುಕೊಳ್ಳುತ್ತಾರೆ. ಮತ್ತೆ ಮೇಲೆ ಹೇಳುತ್ತಾರೆ. "ನಿಮಗಾಗಿ ನಾವು ಇಂಗ್ಲಂಡದ ಸುಖಕರವಾದ ಹವೆಯನ್ನು ಬಿಟ್ಟು ಇಲ್ಲಿಗೆ ಬಂದೆವು." ಆದರೆ ತಮ್ಮಂದಿರಾ, ನಿಮ್ಮನ್ನು ಇಲ್ಲಿಗೆ ಕರೆದವರಾರು? ಯಶಾಪಯಶಸ್ಸು ಈಶ್ವರನ ಕೈಯಲ್ಲಿದೆ. ಈ ಕಾರ್ಯದಲ್ಲಿ ಯಶಸ್ಸು ನನ್ನ ಕಣ್ಣಿಗೆ ಬೀಳಲಾರದು. ಆದರೆ ಕಾರ್ಯಕ್ಕೆ ತಕ್ಕ ಫಲವು ಬರಲೇಬೇಕು. ಈ ಬುದ್ಧಿಯಿಂದಲೆ ಉದ್ಯೋಗಕ್ಕೆ ಪ್ರವೃತ್ತರಾಗಿರಿ."

ಅಹಮುದನಗರದಲ್ಲಿ ಅದೇ ತಿಂಗಳಲ್ಲಿ ಜರುಗಿದ ಇನ್ನೊಂದು ಸಭೆಯಲ್ಲಿ ಅವರು ಹೀಗೆ ಹೇಳಿದರು. "ನಮ್ಮ ಬೇಡಿಕೆಯಿಂದ ಕೊನೆಗೆ ಯಾರ ಹಾನಿಯು ಆದರೆ ಅಧಿಕಾರಿಗಳದಷ್ಟೆ. ಆದ್ದರಿಂದ ನಮ್ಮ ಪೂರ್ವಜರೆಲ್ಲರೂ ಮೂರ್ಖರೆಂದು ಅವರು ಹೇಳುತ್ತಾರೆ. ನಾನಾ ಫಡಣವೀಸನು ಮೂರ್ಖನು, ಮಲಿಕಾಂಬರನು ಮೂರ್ಖನು, ನಾವಂತೂ ಚಿಕ್ಕಮಕ್ಕಳು. ೧೫೦ ವರ್ಷಗಳ ವರೆಗೆ ರಾಜ್ಯಕಾರಭಾರವನ್ನು ಮಾಡಿ ನಮ್ಮನ್ನು ಜಾಣರನ್ನಾಗಿ ಮಾಡದೆ ಹೋದರೆ ಈ ತಪ್ಪು ಯಾರದು ? ಇಡೀ ಜನತೆಯು ಮೂರ್ಖವಿದೆಯೆಂದು ಹೇಳುವದೆಂದರೆ ಇದರಲ್ಲಿ ಅಧಿಕಾರಿಯ ನಾಲಾಯಖಿಯೆಂದು ಕಂಡುಬರುತ್ತದೆ. ಕೆಲಸಕ್ಕೆ ತಕ್ಕ ಸಂಧಿಯನ್ನೊದಗಿಸಿ ಕೊಡದೆ ನಾಲಾಯಖರೆಂದು ಇವರು ಹೇಳಿದರೆ ಇವರ ಮಾತನ್ನು ಕೇಳುವವರ್ಯಾರು ? ನಾವಾದರೂ ಇನ್ನೂ ಒಳ್ಳೆ ಜೋರಿನಿಂದ ಬೇಡಿಕೆಯನ್ನು ಮಾಡಲೆಬೇಕು. ಬಂದ ಕಷ್ಟವನ್ನು ಸಹಿಸಬೇಕು. ಎಲ್ಲರೂ ಒಂದಾಗಬೇಕು. ನಮ್ಮ ಬೇಡಿಕೆಯಂತೆ ಹಕ್ಕುಗಳು ದೊರೆಯದೆ ನಮಗೆ ಸಂತೋಷವಾಗಲಾರದೆಂದು ಜಗತ್ತಿಗೆ ತೋರಿಸಿಕೊಡಬೇಕು. ನಮ್ಮ ಬೇಡಿಕೆಯು ಪೂರ್ಣವಾಗುವವರೆಗೆ ಚಳವಳಿಯನ್ನು ನಿಲ್ಲಿಸಬೇಡಿರಿ. ನಾವು ಸತ್ತರೂ ನಮ್ಮ ಮಕ್ಕಳು ಚಳವಳಿಯನ್ನು ಮುಂದರಿಸುವರು."

ಮರುದಿನ ಸಭೆಯಲ್ಲಿ ಲೋಕಮಾನ್ಯ ಟಿಳಕರು ಹೀಗೆ ಹೇಳಿದರು. "ಒಂದು ಸ್ವರಾಜ್ಯವಿಲ್ಲದಿದ್ದರೆ ಇನ್ನೊಂದೇನೂ ಇಲ್ಲ. ಎಲ್ಲ ಸುಧಾರಣೆಗಳು ಫಲಪ್ರದವಾಗಬೇಕಾಗಿದ್ದರೆ ಸ್ವರಾಜ್ಯದ ಅಧಿಕಾರಗಳು ಬೇಕು.

ಚಿಲ್ಲರ ಸುಧಾರಣೆಗಳಿಂದ ಸ್ವರಾಜ್ಯವು ದೊರೆಯುವದೆಂದು ನನ್ನ ನಂಬಿಗೆ ಯಾಗಿದ್ದಿಲ್ಲ. ಮುಂದಾದರೂ ಆಗಲಾರದು. ಇಂಗ್ಲಂಡದಲ್ಲಿ ಹೆಸರಿಗೆ ಅರಸನಿದ್ದರೂ ಅಧಿಕಾರಗಳೆಲ್ಲವೂ ಪ್ರಜೆಗಳ ಕೈಯಲ್ಲಿವೆ. ಅದೇ ರೀತಿಯಿಂತೆ ನಮಗಾದರೂ ಬೇಕು. ಈ ನಮ್ಮ ಮಾತಿಗೆ ಅರಸನ ತಕರಾರೆ ಇಲ್ಲ. ನಡುವಿನವರು ಮಾತ್ರ ತಕರಾರು ಮಾಡುತ್ತಾರೆ. ನಡುವಿನವರು ಹೋಗದ ಹೊರ್ತಾಗಿ ನಾವು ಕಸುವುಳ್ಳವರಾಗಲಾರೆವು. ಕೇವಲ ಉಂಡುಟ್ಟು ಸಾಯುವದರಲ್ಲಿ ಪುರುಷಾರ್ಥವೇನೂ ಇಲ್ಲ. ಸ್ವರಾಜ್ಯಸಂಘದ ಸಭಾ ಸದರಾದರೆ ಅದೇನೂ ರಾಜದ್ರೋಹವಲ್ಲ. ನೀವು ವ್ಯಾಪಾರಸ್ಥರು ಗೋರ ಕ್ಷಣಕ್ಕಾಗಿ ಧರ್ಮಾದಾಯವನ್ನು ಬೇರೆ ತೆಗೆದಿಡುತ್ತೀರಿ. ಅದೇರೀತಿ ಯಿಂದ ಧರ್ಮದಾಯದಲ್ಲಿಯ ರಕಮಿನಿಂದ ಸ್ವಲ್ಪ ಹಣವನ್ನು ಈ ಚಳ ವಳಿಗೆ ಯಾಕೆ ಕೊಡಬಾರದು ? ಸ್ವದೇಶಿರೂಪವಾದ ಪೃಥ್ವಿಯು ಗೋಮಾ ತೆಯಂತೆ ಪೂಜ್ಯಳು. ನಮ್ಮ ಮೇಲೆ ಸಂಕಟಗಳು ಬಂದರೂ ಅವನ್ನು ಸಹಿ ಸಲು ನಾವು ಸಿದ್ಧರಿರುವೆವು. ''

ಮೇಲಿನಂತಹ ಮಾತುಗಳನ್ನು ಲೋಕಮಾನ್ಯರು ಅನೇಕ ಸಭೆಗಳಲ್ಲಿ ಹೇಳಿದರು. ಹೋಮರೂಲದ ಚಳವಳಿಯು ಈ ರೀತಿ ಜೋರಿನಿಂದ ನಡೆದ ಹಾಗೆ ಅಧಿಕಾರಿಗಳು ಎಚ್ಚತ್ತು ದಬ್ಬಾಳಿಕೆಯನ್ನು ಪ್ರಾರಂಭಿಸಿದರು. ತಾ. ೨೨ ನೆ ಮೇ ದಿನ ಟಿಳಕರ ಅಧ್ಯಕ್ಷತೆಯಲ್ಲಿ ಬಿಝಾಂಟಮ್ಮನವರ ಪುಣೆ ಯಲ್ಲಿ ವ್ಯಾಖ್ಯಾನವಾಯಿತು. ಅದೇ ದಿನ ಪ್ರೆಸ್ ಆಕ್ಟಿನಂತೆ ನ್ಯೂಇಂಡಿಯಾ ಪತ್ರದಿಂದ ೨೦೦೦ ರೂಪಾಯಿಯ ಜಾಮೀನು ಮದ್ರಾಸ ಸರಕಾರದವರು ಕೇಳಿದರು. ಜಾಮೀನು ತೆಗೆದುಕೊಂಡು ಮೂರು ತಿಂಗಳಲ್ಲಿಯೇ ಅದು ರದ್ದಾಗಿ ೧೦೦೦೦ ರೂಪಾಯಿಯ ಹೊಸ ಜಾಮೀನು ಕೇಳಲ್ಪಟ್ಟಿತು. ಅಗಷ್ಟ ೨೭ ನೆಯ ತಾರೀಖಿನ ದಿವಸ ಬಿಝಾಂಟಮ್ಮನವರು ಹಿಂದುಸ್ತಾ ನದ ಎಲ್ಲ ಪ್ರಾಂತಗಳಲ್ಲಿ ಹೋಮರೂಲ ಲೀಗದ ಶಾಖೆಗಳನ್ನು ತೆಗೆಯಬೇ ಕೆಂದು ತಮ್ಮ ಅನುಯಾಯಿಗಳನ್ನು ಕುರಿತು ಜಾಹೀರನಾಮೆಯನ್ನು ಹೊರಡಿಸಿದರು. ಜಾಮೀನು ರದ್ದು ಮಾಡಿದ ಠರಾವಿನ ವಿರುದ್ಧ ಹಾಯ ಕೋರ್ಟಿನ ಕಡೆಗೆ ಅಪೀಲು ಮಾಡಿದರು. '' ಇದು ಕೆಟ್ಟ ಕಾಯದೆ ಇದೆ.

ಆದರೆ ಇದಕ್ಕೆ ಉಪಾಯವಿಲ್ಲ" ವೆಂದು ನ್ಯಾಯಮೂರ್ತಿಗಳು ಹೇಳಿ ಅಪೀಲನ್ನು ರದ್ದು ಪಡಿಸಿದರು.

ಇತ್ತ ಜುಲೈ ೨೦ನೆಯ ತಾರೀಖಿನ ದಿನ ಲೋಕಮಾನ್ಯರಿಗೆ ೬೦ ವರ್ಷಗಳು ಮುಗಿಯುತ್ತಿದ್ದರಿಂದ ಅವರಿಗೆ ಅವರ ಮಿತ್ರರೂ, ಅನುಯಾಯಿಗಳೂ, ಪುಣೆಯಲ್ಲಿ ಸಭೆ ಸೇರಿಸಿ, ೮೭೩೩೬ ರೂಪಾಯಿಗಳನ್ನೂ ಮಾನಪತ್ರವನ್ನೂ ಸಮರ್ಪಿಸಿದರು. ಮಾನಪತ್ರಕ್ಕೆ ಉತ್ತರವನ್ನು ಕೊಡುವಾಗ ಲೋಕಮಾನ್ಯರು ಕೊನೆಯ ಮಾತಿನಲ್ಲಿ ಹೀಗೆ ಹೇಳಿದರು. "ನನ್ನ ವಿಷಯಕ್ಕೆ ಹೊಗಳಿಕೆಯ ಮಾತುಗಳನ್ನಾಡಿರುವಿರಿ, ಆದರೆ ನಾನು ಮಾಡಿರುವ ಅಲ್ಪ ಕೆಲಸದಿಂದ ನೀವು ತೃಪ್ತರಾಗಬೇಡಿರಿ. ನಿಮ್ಮೆದುರಿನ ರಾಷ್ಟ್ರಕಾರ್ಯವು ಬಹಳ ವ್ಯಾಪಕವಿದೆ, ಬಹಳ ಅಗತ್ಯದ್ದಿದೆ. ತಾವೆಲ್ಲರೂ ನನಗಿಂತ ಹೆಚ್ಚು ನಿಶ್ಚಯದಿಂದ, ಹೆಚ್ಚು ಸ್ಫೂರ್ತಿಯಿಂದ ಮಾಡಬೇಕಾಗುವದು. ನಮ್ಮ ಮಾತೃಭೂಮಿಯು ಈ ಕೆಲಸಕ್ಕೆ ತೊಡಗಿರೆಂದು ನಮ್ಮೆಲ್ಲರನ್ನು ಕರೆಯುತ್ತಲಿದ್ದಾಳೆ. ಆಕೆಯ ಕರೆಯನ್ನು ಆಕೆಯ ಮಕ್ಕಳು ಅವಮನ್ನಿಸುವರೆಂದು ಅನಿಸುವದಿಲ್ಲ. ನನ್ನ ಕೊನೆಯ ಬಿನ್ನಹವಿಷ್ಟೆ. ಮಾತೃಭೂಮಿಯ ಕರೆಯನ್ನು ಕೇಳಿರಿ. ನಾವೆಲ್ಲರೂ ರಾಷ್ಟ್ರದೇವರಾಗೋಣ. ಇಲ್ಲಿ ಏರಾಟಿಕೆಯಿಲ್ಲ. ಮತ್ಸರವಿಲ್ಲ. ಮಾನಾಪಮಾನವಿಲ್ಲ. ಸಂಕಟದ ಭಯವನ್ನು ಹಿಡಿದು ನಮಗೆ ಉಪಯೋಗವಿಲ್ಲ. ಕಾರ್ಯವನ್ನು ನೆರವೇರಿಸುವ ದೇವರು ದೊಡ್ಡವನಿದ್ದಾನೆ. ದೇವರ ದಯೆಯಿಂದ ಈ ಪ್ರೇರಣೆಯು ನಿಮ್ಮೆಲ್ಲರ ಮನಸಿನಲ್ಲಿ ಉಂಟಾಗಿ ನನ್ನ ಕಣ್ಣೆದುರಿಗೆ ಅದರ ಸ್ವಲ್ಪವಾದರೂ ಫಲವು ಕಾಣಲಿ ! ಇಷ್ಟೆ ಪರಮೇಶ್ವರನ ಹತ್ತಿರ ನನ್ನ ಪ್ರಾರ್ಥನೆ ಇದೆ."

ಷಷ್ಟ್ಯಬ್ಧಿಪೂರ್ತಿಯ ಈ ಮಹೋತ್ಸವದ ದಿವಸವೆ ಪುಣೆಯ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟರು ಟಿಳಕರ ಮೇಲೆ ನೋಟಿಸು ಜಾರಿ ಮಾಡಿ ರಾಜದ್ರೋಹದ ಭಾಷಣಗಳನ್ನು ಮಾಡಿದ್ದಕ್ಕಾಗಿ ಟಿಳಕರ ಕಡೆಯಿಂದ ಸ್ವಂತ ರೊಖ ೨೦೦೦೦ ರೂಪಾಯಿಯ ಜಾಮೀನು ಮತ್ತು ೧೦೦೦೦ ರೂಪಾಯಿಯ ಇತರ ಎರಡು ಜಾಮೀನುಗಳನ್ನು ಹೀಗೆ ಸದ್ವರ್ತನದ ಬಗ್ಗೆ ಜಾಮೀನು ಏಕೆ ತೆಗೆದುಕೊಳ್ಳಬಾರದು ಎಂಬ ವಿಷಯಕ್ಕೆ ಕಾರಣವನ್ನು ತೋರಿಸಲು ಹೇಳಿದರು. ಮ್ಯಾಜಿಸ್ಟ್ರೇಟರೆದುರಿಗೆ ವಿಚಾರಣೆಯಾಯಿತು. ಜಾಮೀನು

ತೆಗೆದುಕೊಳ್ಳಬೇಕೆಂದು ಹುಕುಮವು ಆಯಿತು. ಆದರೆ ಆ ಹುಕುಮವು ಹಾಯಕೋರ್ಟಿನಲ್ಲಿ ರದ್ದುಪಡಿಸಲ್ಪಟ್ಟ ಕಾರಣ ಲೋಕಮಾನ್ಯರ ಹೋಮರೂಲದ ಪ್ರಚಾರದ ಕಾರ್ಯಕ್ಕೆ ಇನ್ನಿಷ್ಟು ಕಳೆಯೇರಿದಂತಾಯಿತು. ಈ ಮೊದಲಿನಿಂದಲೆ ಜನರು ಸೈನ್ಯದಲ್ಲಿ ಸೇರಿ ಸೈನಿಕ ಶಿಕ್ಷಣವನ್ನು ಪಡೆಯುವ ಸಂಧಿಯನ್ನು ಕಳೆಯಬಾರದೆಂದು ಟಿಳಕರು ಉಪದೇಶಿಸುತ್ತಲಿದ್ದರು. ಮುಂಬೈಯ ಒಂದೇ ಒಂದು ಸಭೆಯಲ್ಲಿ ೮೦೦ ಜನರು ಸೈನ್ಯವನ್ನು ಸೇರಲು ಸಿದ್ಧರಾದರು. ಆದರೆ ಸರಕಾರದವರಿಂದ ಸಾಕಷ್ಟು ಉತ್ತೇಜನ ದೊರೆಯಲಿಲ್ಲ. ಪಂಜಾಬ ಸರಕಾರದವರು ತಮ್ಮ ಪ್ರಾಂತಕ್ಕೆ ಟಿಳಕರು ಬರಬಾರದೆಂದು ಹುಕುಮನ್ನು ಹೊರಡಿಸಿದರು. ಇತ್ತ ಬಿಝಾಂಟಮ್ಮನವರು ೧೯೧೬ನೆಯ ಇಸ್ವಿಯ ಸಪ್ಟಂಬರ ೧ನೆಯ ತಾರೀಖಿನ ದಿವಸ ತಮ್ಮ ಹೋಮರೂಲ ಲೀಗವನ್ನು ಸ್ಥಾಪಿಸಿದರು. ಟಿಳಕರ ಸಂಘವೂ, ಬಿಝಾಂಟಮ್ಮನವರ ಸಂಘವು ೧೯೧೬-೧೭ರಲ್ಲಿ ಒಳ್ಳೆ ಹುರುಪಿನಿಂದ ಕಾರ್ಯವನ್ನು ಮಾಡಿದವು.

**(೫೮) ಕಾಂಗ್ರೆಸ್ಸಿನ ೩೧ ನೆಯ ಅಧಿವೇಶನವು** (೧೯೧೬):-ಲಖನೌದಲ್ಲಿ ಕಾಂಗ್ರೇಸ್ಸಿನ ೩೧ನೆಯ ಅಧಿವೇಶನವು ಒಳ್ಳೆ ವಿಜೃಂಭಣೆಯಿಂದ ನೆರವೇರಿತು. ಸಭೆಗೆ ಸಾವಿರಾರು ಪ್ರೇಕ್ಷಕರಲ್ಲದೆ ೨೩೦೧ ಪ್ರತಿನಿಧಿಗಳು ಬಂದಿದ್ದರು. ಕಾಂಗ್ರೆಸ್ಸಿನ ಅಧಿವೇಶನವು ನಾಲ್ಕು ದಿವಸಗಳವರೆಗೆ ಜರುಗಿತು. ೧೯೦೭ರಲ್ಲಿ ಕಾಂಗ್ರೆಸ್ಸಿನ ಒಡೆದು ಹೋಗಿದ್ದ ರಾಷ್ಟ್ರೀಯ ಪಕ್ಷವು ಮತ್ತೆ ಕಾಂಗ್ರೆಸ್ಸಿನೊಳಗೆ ಬಂದಿತ್ತು. ಹಿಂದೂ ಮುಸಲ್ಮಾನರು ಒಕ್ಕಟ್ಟಾಗಿ ಸ್ವರಾಜ್ಯದೊಂದು ಸರ್ವಸಮ್ಮತವಾದ ಯೋಜನೆಯನ್ನು ಗೊತ್ತು ಮಾಡಿದ್ದರು. ಹೋಮರೂಲದ ಉದ್ಘೋಷಣೆಯನ್ನು ಹಗಲಿರಳು ಮಾಡುತ್ತಲಿದ್ದ ಬಿಝಾಂಟಮ್ಮನವರು ಅಲ್ಲಿ ಇದ್ದರು. ರಾಷ್ಟ್ರದೊಳಗಿನ ಬಣಗಳು ಮುರಿದು ಭೇದಗಳು ಅಳಿದು ಹೋಗಿ ತನ್ನ ಹಕ್ಕುಗಳಿಗಾಗಿ ರಾಷ್ಟ್ರವು ಒಕ್ಕಟ್ಟಿನಿಂದ ಹೋರಾಡುವ ಸ್ಫೂರ್ತಿದಾಯಕವಾದ ದೃಶ್ಯವು ಈ ಸಭೆಯ ಅಧಿವೇಶನದಲ್ಲಿ ಕಂಡುಬಂದಿತು. ಅಧಿವೇಶನದ ಅಧ್ಯಕ್ಷರಾದ ಅಂಬಿಕಾಚರಣ ಮುಜುಂದಾರರು ಸಮಯಕ್ಕೆ ತಕ್ಕ ಮಾತುಗಳನ್ನಾಡಿದರು. ಎರಡೂ ಬಣಗಳಲ್ಲಿ ಒಕ್ಕಟ್ಟಾದುದನ್ನು ನೋಡಿ ಅವರು ಆನಂದವನ್ನು

ವ್ಯಕ್ತಪಡಿಸಿದರು. "ಸುರತದಲ್ಲಿ ನಮ್ಮಿಂದೊಡೆದು ಹೋದ ಬಾಲ
ಗಂಗಾಧರ ಟಿಳಕ ಮೋತಿಲಾಲ ಘೋಷ ಮತ್ತು ಅನೇಕ ವೀರರನ್ನು
ನಾನು ಅಂತಃಕರಣಪೂರ್ವಕವಾಗಿ ಸ್ವಾಗತಿಸುತ್ತೇನೆ." ಎಂದು ಅಂದರು.
ದೇಶದಲ್ಲಿ ಹೊಸ ಜೀವನವು ಹೇಗೆ ಸಂಚಾರವಾಗುತ್ತದೆಂಬುದನ್ನು
ವಿಶದಪಡಿಸಿದರು. ಆಳಸರಿಗೂ, ಜನತೆಗೂ, ನಡೆದ ಕದನವನ್ನು ವಿವರಿಸಿ
ದರು. ವರ್ತಮಾನ ಪತ್ರಗಳ ಮೇಲಿನ ನಿರ್ಬಂಧಗಳನ್ನು ನಿಷೇಧಿಸಿದರು.
ಪಂಜಾಬ ಮುಂಬೈ ಮತ್ತು ಮಧ್ಯ ಪ್ರಾಂತಗಳಿಗೆ ಬಿಝಾಂಟಮ್ಮನವರು
ಹೋಗಬಾರದೆಂದು ನಿರ್ಬಂಧನೆಯನ್ನು ಖಂಡಿಸಿದರು. ಟಿಳಕರ ವಿರುದ್ಧ
ಸರಕಾರದವರು ಹೂಡಿದ ದಬ್ಬಾಳಿಕೆಯನ್ನು ಅವರು ಕೀಳ್ಗಳೆದರು. ಸೈನಿಕ
ಶಿಕ್ಷಣವು ಪ್ರಾತಿನಿಧಿಕ ರಾಜ್ಯಪದ್ಧತಿಯು ಕೂಡಲೆ ಅಮಲಿನಲ್ಲಿ ಬರಬೇ
ಕೆಂದು ಪ್ರತಿಪಾದಿಸಿದರು. ಹಿಂದಿ ಜನರು ಸ್ವರಾಜ್ಯಕ್ಕೆ ಪೂರ್ಣಪಾತ್ರರಿರು
ವರೆಂದು ವಿವೇಚಿಸಿದರು. ಕೊನೆಗೆ ಪ್ರತಿಯೊಬ್ಬರೂ ಮಾತೃಭೂಮಿಯ
ವಿಷಯದಲ್ಲಿ ತಮ್ಮ ತಮ್ಮ ಕರ್ತವ್ಯವನ್ನು ನೆರವೇರಿಸಬೇಕೆಂದು
ಕೇಳಿಕೊಂಡರು.

ವಾಡಿಕೆಯಂತೆ ಆರ್ಮ್ಸ್ ಆಕ್ಟ ಸೈನಿಕ ಶಿಕ್ಷಣ ಪ್ರೆಸ್ ಆಕ್ಟ ಶಿಕ್ಷಣ
ಮುಂತಾದ ವಿಷಯಗಳನ್ನು ಕುರಿತು ನಿರ್ಣಯಗಳಾದವು. ಆದರೆ ಲಖನೌ
ದಲ್ಲಿ ಪಾಸಾದ ಎಲ್ಲಕ್ಕೂ ಹೆಚ್ಚಿನ ನಿರ್ಣಯವೆಂದರೆ ಸ್ವರಾಜ್ಯದ ಯೋಜನೆ
ಯನ್ನು ಕುರಿತು ಆದದ್ದು. ಆ ಯೋಜನೆಯ ಸಾರಾಂಶವನ್ನು ಇದರೆಡೆ
ಯಲ್ಲಿ ಕೊಟ್ಟಿದ್ದೇವೆ. ಪ್ರತಿಯೊಂದು ಪ್ರಾಂತದ ಕಾಯದೆಮಂಡಲದ
ಲ್ಲಿಯೂ ೪/೫ ದಷ್ಟು ಸಭಾಸದರು ಜನರಿಂದ ಆರಿಸಲ್ಪಟ್ಟವರಿರಬೇಕು. ಈ
ಆರಿಸಲ್ಪಟ್ಟ ಸಭಾಸದರಲ್ಲಿ ಪಂಜಾಬ ಪ್ರಾಂತದಲ್ಲಿ ಅರ್ಧದಷ್ಟು ಸಂಯುಕ್ತ
ಪ್ರಾಂತದಲ್ಲಿ ೧೦೦ಕ್ಕೆ ೩೦ರಷ್ಟು ಬಂಗಾಲದಲ್ಲಿ ೧೦೦ಕ್ಕೆ ೪೦ರಷ್ಟು ಬಿಹಾರ
ದಲ್ಲಿ ೧೦೦ಕ್ಕೆ ೨೫ರಷ್ಟು ಮಧ್ಯಪ್ರಾಂತದಲ್ಲಿ ೧೦೦ಕ್ಕೆ ೧೫ರಷ್ಟು ಮದ್ರಾಸ
ಪ್ರಾಂತದಲ್ಲಿ ೧೦೦ಕ್ಕೆ ೧೫ರಷ್ಟು ಮುಂಬೈ ಪ್ರಾಂತದಲ್ಲಿ ೧/೩ ದಷ್ಟು ಜಾಗೆ
ಗಳು ಮುಸಲ್ಮಾನರಿಗಾಗಿ ಕಾದಿಡಲ್ಪಡಬೇಕು. ಕಾಯದೆ ಕೌನ್ಸಿಲಿನಲ್ಲಿ
ಪಾಸಾದ ಠರಾವುಗಳನ್ನು ಗವ್ಹರ್ನರನು ರದ್ದುಪಡಿಸಬಹುದು. ಆದರೆ
ಅದನ್ನು ಮರುವರ್ಷ ಮತ್ತೆ ಕಾಯದೆ ಕೌನ್ಸಿಲಿನಲ್ಲಿ ಪಾಸು ಮಾಡಿದರೆ

ಆದರಂತೆ ಅಧಿಕಾರಿಗಳು ನಡೆಯಲೇಬೇಕು. ಪ್ರಾಂತದಾಡಳಿತೆಯ ಮುಖ್ಯಸ್ಥನು ಸಾಮಾನ್ಯವಾಗಿ ಸಿವ್ಹಿಲ್ ಸರ್ವ್ಹಿಸಿಗೆ ಸೇರಿದ ಗವ್ಹರ್ನರನಿರಬೇಕು. ಅವನ ಕಾರ್ಯಕಾರೀ ಮಂಡಳದಲ್ಲಿ ಅರ್ಧದಷ್ಟಾದರೂ ಹಿಂದಿ ಜನರಿರಬೇಕು. ಹಿಂದುಸ್ಥಾನ ಸರಕಾರದ ಘಟನೆಯಾದರೂ ಮೇಲಿನಂತೆಯೆ ಇರಬೇಕು. ಸೆಕ್ರೇಟರಿ ಆಫ್ ಸ್ಟೇಟಿನ ಕೌನ್ಸಿಲು ರದ್ದುಪಡಿಸಲ್ಪಡಬೇಕು. ಸೈನ್ಯದಲ್ಲಿಯ ದೊಡ್ಡ ಹುದ್ದೆಗಳು ಹಿಂದೀ ಜನರಿಗೂ ಸಿಗುವಂತೆ ಮಾಡಬೇಕು. ಈ ಯೋಜನೆಗೆ ಆ ಕಾಲದ ಹಿಂದೂ ಮುಸಲ್ಮಾನ ರಾಷ್ಟ್ರೀಯ ಮಂದಪಕ್ಷ ಇವೆಲ್ಲ ಗುಂಪುಗಳ ಸಮ್ಮತಿಯಿದ್ದುದರಿಂದ ಈ ನಿರ್ಣಯವು ಬಳ್ಳೆ ಮಹತ್ವದ್ದಾಗಿರುತ್ತದೆ. ಈ ನಿರ್ಣಯವನ್ನು ಕುರಿತು ಮಾತನಾಡುವಾಗ ಲೋಕಮಾನ್ಯರು ಹೀಗೆ ಹೇಳಿದರು. "ನಾನು ಇಲ್ಲಿ ಭಾಷಣ ಮಾಡಲು ನಿಂತ ಕೂಡಲೆ ನನಗೆ ಬಳ್ಳೆ ಸನ್ಮಾನವನ್ನು ಮಾಡಿದಿರಿ. ನಾನು ಯಾವ ತತ್ವಗಳಿಗಾಗಿ ಹೋರಾಡುತ್ತಿರುವೆನೊ ಆ ತತ್ವಗಳ ಸನ್ಮಾನವೆಂದು ತಿಳಿಯುತ್ತೇನೆ. ಆ ತತ್ವಗಳೆ ಈ ಠರಾವಿನಲ್ಲಿ ಅಡಕವಾಗಿವೆ. ಸ್ವರಾಜ್ಯದ ಈ ಠರಾವಿನ ಮೊದಲನೆಯ ಕೂಗು ಹಿಂದುಸ್ಥಾನದ ಪಿತಾಮಹರಾದ ದಾದಾಭಾಯಿ ನವರೋಜಿಯವರ ಮಾತಿನಲ್ಲಿ ಹುಗಳಿಯ ದಂಡೆಯ ಮೇಲೆ ಮೊದಲು ಕೇಳಬಂದಿತು. ಈ ಕೂಗನ್ನು ಮುಂದುವರಿಸಬೇಕೊ ಮಂದಮಾಡಬೇಕೊ ಎಂಬದರ ವಿಷಯಕ್ಕೆ ಮತಭೇದವೆದ್ದಿತ್ತು. ಅವೆಲ್ಲ ಮತಭೇದಗಳು ಅಳಿದು ಹೋಗಿವೆ. ಹಿಂದೂಮುಸಲ್ಮಾನರಲ್ಲಿಯೂ ಒಕ್ಕಟ್ಟಾಗಿದೆ. ಕಾಂಗ್ರೆಸ್ಸಿನ ಇಗಿನೆಯ ಶುಭದಾಯಕವಾದ ಅಧಿವೇಶನದ ಅತ್ಯಂತ ಶುಭಸೂಚಕದಿನವಿದು. ನಾವು ಮುಸಲ್ಮಾನ ಬಂಧುಗಳಿಗೆ ಬಹಳ ಸವಲತ್ತುಗಳನ್ನು ಕೊಟ್ಟಿವೆಯೆಂದು ಕೆಲವು ಹಿಂದೂ ಬಂಧುಗಳಂದರು. ಅದು ತಪ್ಪು. ಹಕ್ಕುಗಳು ಬಂದರೆ ಯಾವುದೆ ಸಮಯಕ್ಕಾದರೂ ಬರಲಿ! ಆಳರಸರ ಕೈಯಿಂದಾದರೂ ಈ ಹಕ್ಕುಗಳು ಮೊದಲು ಬರಲಿ. ಮೂರನೆಯವರೊಡನೆ ಹೋರಾಡುವಾಗ ನಾವು ಒಕ್ಕಟ್ಟಿನಿಂದಿರಬೇಕು. ಇದೊಂದು ಮಹತ್ವದ ಮಾತು. ನಾನಿನ್ನುಮುಂದೆ ಆರ್ಮ್ಸ್ ಆಕ್ಟ ಸರಕಾರೀ ನೌಕರಿ ಮುಂತಾದ ಇಪ್ಪತ್ತೆಂಟು ಠರಾವುಗಳನ್ನು ಚರ್ಚಿಸುವ ಕಾರಣವಿಲ್ಲ. ಸ್ವರಾಜ್ಯದ ಒಂದೇ ಒಂದು ಠರಾವಿನಲ್ಲಿ ಅವು ಅಡಕವಾಗಿವೆ. ಕಾಂಗ್ರೆಸ್ಸಿನ

ವಿಚಾರದ ಕಾರ್ಯವು ಮುಗಿದಂತಾಗಿದೆ. ಇನ್ನು ಕೃತಿಯ ಸಮಯವು ಒದಗಿದೆ. ಸ್ವರಾಜ್ಯವೆಂದರೆ ಸ್ವರ್ಗದಿಂದ ಬೀಳುವ ವಿಷಯವಲ್ಲ. ಕಾರ್ಯಕ್ಕೆ ಉದ್ಯುಕ್ತರಾಗಿರಿ. ಕೆಲಸವನ್ನು ತಪ್ಪಿಸಬೇಡಿರಿ'' ಎಂದು ಹೇಳಿದರು.

(೫೯) **೧೯೧೭ ರಲ್ಲಿಯ ಚಟುವಟಿಕೆಗಳು:**— ೧೯೧೭ ರಲ್ಲಿಯೂ ಕಾಂಗ್ರೆಸ್ಸಿನಲ್ಲಿ ಪಾಸಾದ ಸ್ವರಾಜ್ಯದ ಬೇಡಿಕೆಯನ್ನೇ ಟಿಳಕ ಮತ್ತು ಬಿಝೂಂಟರು ಮುಂದುವರಿಸಿದರು. ಜಾನೇವಾರಿ ತಿಂಗಳಲ್ಲಿ ಕಲಕತ್ತಾ, ನಾಗಪೂರ, ಯವತಮಾಳ, ಅಕೋಲಾ, ಮುಂತಾದ ಸ್ಥಳಗಳಲ್ಲಿ ಹೋಮರೂಲಿನ ವಿಷಯಕ್ಕೆ ಟಿಳಕರು ವ್ಯಾಖ್ಯಾನಗಳನ್ನು ಕೊಟ್ಟು ಎಪ್ರೀಲ ತಿಂಗಳ ೧೨ ನೆಯ ತಾರೀಖಿನ ದಿವಸ ಚಿಕ್ಕೋಡಿಯಲ್ಲಿ ಕೂಡಿದ ಬೆಳಗಾಂವಿಯ ಜಿಲ್ಹಾ ಸಭೆಗೆ ಅವರು ಹೋಗಿದ್ದರು. ಚಿಕ್ಕೋಡಿಯಲ್ಲಿ ೨-೩ ಭಾಷಣಗಳಾದವು. ನಿಪ್ಪಾಣಿಯಲ್ಲಿಯೂ ಭಾಷಣವಾಯಿತು. ಇತ್ತ ಬಿಝೂಂಟಮ್ಮನವರೂ ವರ್ತಮಾನಪತ್ರ ಮುಖಾಂತರವಾಗಿ ಭಾಷಣಗಳ ಒಳ್ಳೆ ಜೋರಿನಿಂದ ಹೋಮರೂಲದ ಪ್ರಚಾರವನ್ನು ನಾಗಿಸಿದ್ದರು. ಮದ್ರಾಸ ಗವ್ಹರ್ನರರಾದ ಲಾರ್ಡ ಪೆಂಟ್ಲೆಂಡರು ಅವಿವೇಕದ ಮಾತುಗಳನ್ನಾಡಿದರು. ಸರ ಸುಬ್ರಮ್ಹಣ್ಯ ಅಯ್ಯರವರು "ನಾನು ಹಾಯಕೋರ್ಟಿನ ಜಜ್ಜ ನಿದ್ದೆ. ಆದರೆ ನಾನು ಹೋಮರೂಲದ ಚಳವಳಿಗೆ ಸಹಾಯವನ್ನು ಮಾಡುವೆನು; ಪೆಂಟ್ಲೆಂಡ ಸಾಹೇಬರು ನನಗೆ ಬೇಕಾದ ಶಿಕ್ಷೆಯನ್ನು ವಿಧಿಸಬೇಕು.'' ಮದ್ರಾಸ ಸರಕಾರದವರು ದಬ್ಬಾಳಿಕೆಯನ್ನು ಇನ್ನೂ ಹೆಚ್ಚು ಮಾಡಿದರು. ನ್ಯೂ ಇಂಡಿಯಾ ಮತ್ತು ಕಾಮನ್‌ವೀಲ ಎರಡೂ ಪತ್ರಗಳಲ್ಲಿ ಬರೆದ ಬರಹಗಳಿಗಾಗಿ ೨೦೦೦೦ ರೂಪಾಯಿಯ ಜಾಮೀನ ರಕಮು ಸರಕಾರಕ್ಕೆ ಜಮಾ ಮಾಡಲ್ಪಟ್ಟಿತು. ಜೂನ ೧೫ ನೆಯ ತಾರೀಖಿನ ದಿನ ಬಿಝೂಂಟ, ಅರುಂಡೇಲ ಮತ್ತು ವಾಡಿಯಾ ಇವರನ್ನು ಸರಕಾರದವರು ನಜರಕೈದು ಮಾಡಿದರು. ಇದರಿಂದ ಹೋಮರೂಲ ಚಳವಳಿಗೆ ಒಳ್ಳೆ ಕಳೆಯೇರಿದಂತಾಯಿತು. ಅಲ್ಹಾಬಾದದ ಮಂದ ಪಕ್ಷದ ಮುಂದಾಳುಗಳಾದ ಚಿಂತಾಮಣಿಯವರು ಹೋಮರೂಲಿಗೆ ಬಂದು ಕೂಡಿದರು. ಬಿಝೂಂಟರ ಬಂಧನದ ನಿಷೇಧಕ್ಕಾಗಿ ಕಾಯದೆಭಂಗವನ್ನು ಕೈಕೊಳ್ಳಬೇಕೆಂದು ಚರ್ಚೆಯಾಯಿತು. ಆದರೆ ಅನೇಕ ಕಾರಣಗಳಿಂದ ಆ ಚರ್ಚೆ ಅಲ್ಲೇ ನಿಂತು

ಹೋಯಿತು. ೧೯೧೭ರ ಆಗಸ್ಟ ೨೦ ನೆಯ ತಾರೀಖಿನ ದಿನ ಭಾರತ ಮಂತ್ರಿಗಳಾದ ಮಾಂಟೆಗ್ಯೂ ಇವರು "ಹಿಂದುಸ್ಥಾನಕ್ಕೆ ಹೊಣೆಗಾರಿಕೆಯ ಆಡಳಿತೆಯ ಅಧಿಕಾರವನ್ನು ಕೊಟ್ಟು ಸಾಮ್ರಾಜ್ಯದಲ್ಲಿ ಪಾಲುಗಾರರಾಗುವಂತೆ ಮಾಡುವದು ಬ್ರಿಟಿಶ ಸರಕಾರದ ಧೋರಣವಿದ್ದು ಮೆಲ್ಲ ಮೆಲ್ಲನೆ ಈ ಸುಧಾರಣೆಯು ಯೋಜನೆಯು ಅಮಲಿನಲ್ಲಿ ಬರುವದೆಂದು ಜಾಹೀರ ಮಾಡಿದರು. ಬಿಝಾಂಟಮ್ಮಾನವರ ಬಿಡುಗಡೆಯು ೧೭ನೆಯ ಸಪ್ಟಂಬರ ದಿನವಾಯಿತು. ಸ್ವರಾಜ್ಯದ ಯೋಜನೆಗೆ ಲಕ್ಷಾವಧಿ ಜನರ ಸಹಿಗಳಾಗಿ ಅದು ಸರಕಾರಕ್ಕೆ ಕಳಿಸಲ್ಪಟ್ಟಿತು. ಕಲಕತ್ತೆಯಲ್ಲಿ ಕೂಡಿದ ರಾಷ್ಟ್ರೀಯ ಅಧಿವೇಶನಕ್ಕೆ ಬಿಝಾಂಟಮ್ಮಾನವರೆ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಅದೇ ಸುಮಾರಿಗೆ ಮಹಾತ್ಮಾಗಾಂಧಿಯವರು ಚಂಪಾರಣ್ಯದಲ್ಲಿ ರೈತರ ಪರವಾಗಿ ಸತ್ಯಾಗ್ರಹವನ್ನು ಹೂಡಿ ಯಶಸ್ಸನ್ನು ಸಂಪಾದಿಸಿದರು.

**(೭೦) ಕಲಕತ್ತೆಯಲ್ಲಿ ೩೨ ನೆಯ ಅಧಿವೇಶನವು** (೧೯೧೭):—
ಈ ಅಧಿವೇಶನಕ್ಕೆ ೪೯೬೭ ಪ್ರತಿನಿಧಿಗಳೂ ೫೦೦೦ ಪ್ರೇಕ್ಷಕರೂ ಬಂದಿದ್ದರು. ಅಧ್ಯಕ್ಷರಾದ ಬಿಝಾಂಟಮ್ಮಾನವರು ವಿಸ್ತೃತವಾದ ಭಾಷಣವನ್ನು ಮಾಡಿ ಸರಕಾರದವರ ವಚನಭಂಗವನ್ನು ವಿವರಿಸಿ ಪ್ರಜೆಗಳು ಸ್ವರಾಜ್ಯಕ್ಕೆ ಹೇಗೆ ಪಾತ್ರರೆಂಬುದನ್ನು ತೋರಿಸಿದರು. ಸಭೆಯಲ್ಲಿಯಾದ ನಿರ್ಣಯಗಳಲ್ಲಿ ಎಲ್ಲಕ್ಕೂ ಮಹತ್ವದ ನಿರ್ಣಯಗಳು ಎರಡು. ಅತ್ಯಾಚಾರಗಳನ್ನು ತಡೆದು ಹಿಡಿಯುವದಕ್ಕಾಗಿ ಯಾವ ಉಪಾಯಗಳನ್ನು ಯೋಜಿಸಬೇಕೆಂಬದನ್ನು ವಿಚಾರ ಮಾಡಲು ಇಂಗ್ಲಂಡದಲ್ಲಿ ನ್ಯಾಯಾಧಿಶರಿದ್ದ ರೌಲೆಟ್‌ರ ಅಧ್ಯಕ್ಷತೆಯಲ್ಲಿ ಡಿಸೆಂಬರ ೧೦ನೆ ತಾರೀಖಿನ ದಿನ ಸರಕಾರದವರು ಒಂದು ಕಮಿಟಿಯನ್ನು ನೇಮಿಸಿದ ಮಾತನ್ನು ಕಾಂಗ್ರೆಸದವರು ನಿಷೇಧಿಸಿದರು. ಸ್ಟೇಟ ಸೆಕ್ರೆಟರಿಯವರು ಹೊರಡಿಸಿದ ಜಾಹೀರನಾಮೆಯನ್ನು ಅಭಿನಂದಿಸಿ ಕಾಂಗ್ರೆಸ್ಸಿನ ಯೋಜನೆಯನ್ನು ಕೂಡಲೆ ಅಮಲಿನಲ್ಲಿ ತರಬೇಕೆಂದು ಇನ್ನೊಂದು ಠರಾವು ಪಾಸುಮಾಡಲ್ಪಟ್ಟಿತು. ಕಲಕತ್ತೆಯ ಅಧಿವೇಶನವಲ್ಲಿಯೆ ರಾಷ್ಟ್ರಧ್ವಜವು ಏನಿರಬೇಕೆಂಬದು ವಿಚಾರವಾಗಿ ಒಂದು ಕಮೀಟಿಯು ನೇಮಿಸಲ್ಪಟ್ಟಿತು. ಆದರೆ ಹೋಮರೂಲ ಲೀಗದವರು ಆ ಮೊದಲೆ ಒಂದು ಧ್ವಜವನ್ನು ಕಲ್ಪಿಸಿಕೊಂಡಿದ್ದರು. ಅದೇ ಪ್ರಚಾರದಲ್ಲಿ ಬಂದಿತು.

(೬೧) **ಸುಧಾರಣೆಗಳ ವಿಚಾರ:—** ಭಾರತ ಮಂತ್ರಿಗಳಾದ ಮಾಂಟೆಗ್ಯೂ ಇವರು ೧೯೧೭ ರ ನೊವ್ಹೆಂಬರದಲ್ಲಿ ಹಿಂದುಸ್ತಾನಕ್ಕೆ ಬಂದರು. ಹಿಂದುಸ್ತಾನದ ಮುಖಂಡರನ್ನು ಭೆಟ್ಟಿಯಾದರು. ಟಿಳಕರ ಹೋಮರೂಲ ಲೀಗದ ಪರವಾಗಿ ಟಿಳಕ, ಖಾಪರ್ಡೆ, ಕರಂದೀಕರ, ಬೆಳವಿ, ಗಂಗಾಧರರಾವ ದೇಶಪಾಂಡೆ, ಡಾ. ಮುಂಜೆ ಮುಂತಾದವರು ನೊವ್ಹೆಂಬರ ೨೬ನೆಯ ತಾರೀಖಿನ ದಿವಸ ದಿಲ್ಲಿಯಲ್ಲಿ ಮಾಂಟೆಗ್ಯುರವರನ್ನು ಭೆಟ್ಟಿಯಾದರು. ಕಾಂಗ್ರೆಸ್ಸಿನ ಪರವಾಗಿ ಸುರೇಂದ್ರನಾಥ ಬಾನರ್ಜಿಯವರು ಕಾಂಗ್ರೆಸ್ಸಿನ ಬೇಡಿಕೆಗಳನ್ನು ಮಂಡಿಸಿದರು. ೨೯ನೆಯ ತಾರೀಖಿನ ದಿವಸ ಮಾಂಟೆಗ್ಯುರವರು ಕಲಕತ್ತೆಗೆ ಹೋದರು. ಅಲ್ಲಿ ಕೆಲಸವನ್ನು ತೀರಿಸಿಕೊಂಡು ಮುಂಬೈಗೆ ಡಿಸೆಂಬರ ೨೨ನೇ ತಾರೀಖಿಗೆ ಬಂದರು. ಅಲ್ಲಿ ಮುಂಬೈ ಕೌನ್ಸಿಲ ಸಭಾಸದರೂ, **ಅಂಜುಮಾನ** ಇಸ್ಲಾಂ, ಡೆಕ್ಕನಸಭೆಯ ಇನಾಮುದಾರವರ್ಗ, ಹಿಂದೀ ಕ್ರಿಸ್ತಿ ಮಂಡಳ, ರೈತ ಅಸೋಶಿಯೇಶನ್, ಕಾಮುದಾರ ಹಿತವರ್ಧಕಸಭೆ, ಲಿಂಗಾಯತಸಭೆ, ಮುಂತಾದ ಬೇರೆ ಬೇರೆ ಸಮಾಜಗಳ ಶಿಷ್ಟ ಮಂಡಳಗಳು ಮಾಂಟೆಗ್ಯುರವರನ್ನು ಭೆಟ್ಟಿಯಾದವು. ಒಟ್ಟಿನಲ್ಲಿ ೧೧೦ ಶಿಷ್ಟ ಮಂಡಲಗಳೂ, ೩೩೦ ಸದ್ಗೃಹಸ್ಥರೂ, ಮಾಂಟೆಗೂರವರನ್ನು ಭೆಟ್ಟಿಯಾದರು. ೧೧೦ ಶಿಷ್ಟಮಂಡಲಗಳಲ್ಲಿ ಕೇವಲ ೨೪ ಅರ್ಜಿಗಳಲ್ಲಿ ಮಾತ್ರ ಕಾಂಗ್ರೆಸ್ ಮುಸ್ಲಿಂ ಲೀಗದ ವಿರೋಧವು ಪ್ರದರ್ಶಿಸಲ್ಪಟ್ಟಿತ್ತು.

೧೯೧೮ ನೆಯ ಇಸ್ವಿಯ ಫೇಬ್ರುವರಿ ೫ ರಿಂದ ೨೦ ರ ವರೆಗೆ ಲೋಕಮಾನ್ಯರು ವರ್ಹಾಡ ಮಧ್ಯಪ್ರಾಂತದಲ್ಲಿ ದೊಡ್ಡ ಪ್ರಚಾರ ಪ್ರವಾಸವನ್ನು ಮಾಡಿದರು. ಪ್ರತಿಯೊಂದು ಜಾಗೆಯಲ್ಲಿಯೂ ಸ್ವರಾಜ್ಯದ ಕಾರ್ಯಕ್ಕಾಗಿ ಜನರು ಮುಕ್ತಹಸ್ತದಿಂದ ದಾನಮಾಡಿದರು. ಹೋಮರೂಲ ಲೀಗಿನ ಮುಖಾಂತರವಾಗಿ ಟಿಳಕ ಕೇಳಕರ ಪಾಲ ಮುಂತಾದವರ ಶಿಷ್ಟ ಮಂಡಳವು ಕೊಲಂಬೊದವರೆಗೆ ಹೋಗಿ ವ್ಹಾಯಿಸರಾಯರು ಮುಂದೆ ಇಂಗ್ಲೆಂಡಿಗೆ ಹೋಗಲು ಬಿಡದ್ದರಿಂದ ಶಿಷ್ಟಮಂಡಳವು ತಿರುಗಿಬಂದಿತು. ಎಪ್ರಿಲ ೨೭ನೆಯ ತಾರೀಖಿನ ದಿವಸ ದಿಲ್ಲಿಯಲ್ಲಿ ವ್ಹಾಯಿಸರಾಯರು ಯುದ್ಧಪರಿಷದನ್ನು ಸೇರಿಸಿದರು. ಆದರೆ ಅದಕ್ಕೆ ಟಿಳಕರನ್ನು ಕರೆದಿದ್ದಿಲ್ಲ. ತಾರೀಖ ೧೦ನೆಯ ಜೂನ ದಿವಸ ಲಾರ್ಡ ವಿಲಿಂಗಡನ್ನರು ಮುಂಬೈ

ಯಲ್ಲಿಯೂ ಒಂದು ಪರಿಷದನ್ನು ಸೇರಿಸಿದರು. ಆ ಪರಿಷತ್ತಿಗೆ ಟಿಳಕರನ್ನು ಕರೆಸಿದ್ದರು. ಆಸರೆ ಪರಿಷತ್ತಿನಲ್ಲಿ ಟಿಳಕರಿಗೆ ಸ್ವರಾಜ್ಯದ ವಿಷಯಕ್ಕೆ ಮಾತನಾಡಲು ಅನುವು ಕೊಡದ್ದರಿಂದ ಟಿಳಕ ಜಮುನಾದಾಸ ದ್ವಾರಕಾದಾಸ ಬಸ್ಮುಸಜಿ ಹಾರ್ನಿಮನ್ನ ಮತ್ತು ಕೇಳಕರ ಇವರೆಲ್ಲರೂ ಸಭೆಯನ್ನು ಬಿಟ್ಟು ಹೊರಕ್ಕೆ ಬಂದರು. ಜುಲೈ ೮ನೆಯ ತಾರೀಖಿನ ದಿನಸ ಮಾಂಟಿಗೊ ಜೇಮ್ಸ್‌ಫೋರ್ಡ್‌ರ ವರದಿಯು ಹೊರಬಿದ್ದಿತು. ಬಿಝಾಂಟರವರು, ಟಿಳಕರು ಆ ವರದಿಯಲ್ಲಿಯ ಸೂಚನೆಗಳು ತ್ಯಾಜ್ಯವಿವೆಯೆಂದು ಜಾಹೀರು ಪಡಿಸಿಸಿದರು. ಜುಲೈ ೩೧ನೆಯ ತಾರೀಖಿನ ದಿವಸ ಲೋಕಮಾನ್ಯರ ಭಾಷಣದಿಂದ ಲಷ್ಕರ ಭರತಿಯ ಕೆಲಸಕ್ಕೆ ಟಿಳಕರ ಭಾಷಣಗಳು ಆತಂಕವನ್ನುಂಟು ಮಾಡುವಂತಹುಗಳಿದ್ದದರಿಂದ ಅವರು ಜಿಲ್ಹಾ ಮ್ಯಾಜಿಸ್ಟ್ರೇಟರ ಮತ್ತು ಮುಂಬೈ ಪೋಲಿಸ ಕಮಿಶನರ ಪರವಾನಗೆಯ ಹೊರ್ತು ಟಿಳಕರು ಭಾಷಣವನ್ನು ಮಾಡಬಾರದೆಂದು ಮುಂಬೈ ಸರಕಾರದವರು ಅಪ್ಪಣೆಯನ್ನು ಹೊರಡಿಸಿದರು.

(೬೨) **ಮುಂಬಯಿಯ ಸ್ಪೆಶಲ ಕಾಂಗ್ರೆಸ್ಸು** (೧೯೧೮):- ಆಗಷ್ಟ ೨೮ನೆಯ ತಾರೀಖಿನ ದಿವಸ ಮುಂಬೈಯಲ್ಲಿ ಸರ ಹಸನ ಇಮಾಮರ ಅಧ್ಯಕ್ಷತೆಯಲ್ಲಿ ಕಾಂಗ್ರೆಸಿನ ಸ್ಪೆಶಲ್ ಅಧಿವೇಶನವು ಕೂಡಿತು. ಹಳೆಯ ಮುಖಂಡರಾದ ದಿನ್‌ಶಾವಾಚ್ಛಾ ಸುರೇಂದ್ರನಾಥ ಬಾನರ್ಜಿ ಭೋಪೇಂದ್ರನಾಥ ಬಸೂ ಅಂಬಿಕಾಚರಣ ಮುಜುಂದಾರ ಮುಂತಾದವರು ಕಾಂಗ್ರೆಸ್ಸಿನಿಂದ ದೂರ ಉಳಿದರು. ನಾಲ್ಕು ದಿನಗಳವರೆಗೆ ಚರ್ಚೆಯಾಗಿ ಕಾಂಗ್ರೆಸ್ಸಿನವರು ಕಾಂಗ್ರೆಸ್ ಮುಸ್ಲಿಂಲೀಗದ ಯೋಜನೆಗೆ ತಮ್ಮ ಬೆಂಬಲಕೊಟ್ಟು ಸಾಮ್ರಾಜ್ಯಾಂತರ್ಗತ ಸ್ವರಾಜ್ಯದ ಹೊರ್ತಾಗಿ ಹಿಂದಿ ಜನರ ಯೋಗ್ಯವಾದ ಆಕಾಂಕ್ಷೆಗಳು ತೃಪ್ತವಾಗಲಾರವೆಂದು ನಿರ್ಣಯವನ್ನು ಪಾಸು ಮಾಡಿದರು. ಪ್ರಾಂತಗಳಲ್ಲಿಯೂ, ಹಿಂದುಸ್ತಾನ ಸರಕಾರದಲ್ಲಿಯೂ ಕೂಡಿಯೆ ಸುಧಾರಣೆಯಾಗಬೇಕು. ಕಾಂಗ್ರೆಸದವರು ತಮ್ಮ ಕಾರ್ಯವನ್ನು ಮುಂದುವರಿಸುವದಕ್ಕಾಗಿ ಒಂದು ಶಿಷ್ಟಮಂಡಳವನ್ನು ಇಂಗ್ಲೆಂಡಿಗೆ ಕಳಿಸಬೇಕೆಂದು ಗೊತ್ತಾಯಿತು.

(೬೩) **ಕಾಂಗ್ರೆಸ್ಸಿನ ೩೩ನೆಯ ಅಧಿವೇಶನವು** (೧೯೧೮):— ೧೯೧೮ನೆಯ ಇಸ್ವಿಯ ಡಿಶಂಬರದಲ್ಲಿ ದಿಲ್ಲಿಯಲ್ಲಿ ಪಂಡಿತ ಮದನ ಮೋಹನ ಮಾಲವೀಯರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ಸಿನ ೩೩ನೆಯ ಅಧಿವೇಶನವು ಜರುಗಿತು. ಈ ಅಧಿವೇಶನದಲ್ಲಿಯೂ ಸ್ಪೇಶಲ್ ಕಾಂಗ್ರೆಸ್ಸಿನ ನಿರ್ಣಯವೇ ಪಾಸಾಯಿತು. ಮಾಂಟೆಗೊ ಚೇಮ್ಸ್ಫೋರ್ಡರ ಸುಧಾರಣೆಗಳು ಅಸ ಮಾಧಾನಕಾರಕ ಮತ್ತು ನಿರಾಶಾಜನಕವಾಗಿದೆಯೆಂದು ಸ್ವರಾಜ್ಯದ ಪೂರ್ಣ ಹಕ್ಕುಗಳು ೧೫ ವರ್ಷಗಳಲ್ಲಿ ದೊರೆಯಬೇಕೆಂದು ಪ್ರಾಂತಗಳ ಕಾರಭಾರವು ಪೂರ್ಣವಾಗಿ ಜನರ ಪ್ರತಿನಿಧಿಗಳಿಗೊಪ್ಪಿಸಲ್ಪಡಬೇಕೆಂದು ಠರಾವಿನಲ್ಲಿ ಉಲ್ಲೇಖವಾಗಿತ್ತು. ನಾಮದಾರ ಶಾಸ್ತ್ರಿಯವರು ಈ ಕಾಂಗ್ರೆಸ್ಸಿಗೆ ಬಂದಿದ್ದರು. ಆದರೆ ಮಂದಪಕ್ಷದ ಇನ್ನಾವ ಮುಖಂಡರೂ ಈ ಅಧಿವೇಶನಕ್ಕೆ ಬಂದಿರಲಿಲ್ಲ. ಇದರನಂತರ ಮಂದಪಕ್ಷದವರು ಲಿಬರಲ್ ಪಾರ್ಟಿಯಂದರೆ ಉದಾರ ಮತವಾದಿಪಕ್ಷವೆಂಬ ಹೆಸರಿನಿಂದ ವರ್ಷ ಕ್ಕೊಮ್ಮೆ ಬೇರೆ ಪರಿಷತ್ತುಗಳನ್ನು ಕೂಡ್ರಿಸಹತ್ತಿದರು. ಕಾಂಗ್ರೆಸ್ಸಿನಲ್ಲಿ ಅವರ ವರ್ಚಸ್ಸು ಪೂರ್ಣವಾಗಿ ನಷ್ಟವಾದಂತಾಯಿತು.

(೬೪) **ಇಂಗ್ಲಂಡದಲ್ಲಿ ಶಿಷ್ಟಮಂಡಳದ ಪ್ರಚಾರಕಾರ್ಯವು** (೧೯೧೮):— ಮೊಂಟೆಗೊ ಚೇಮ್ಸ್ಫೋರ್ಡ ಇವರ ರಿಪೋರ್ಟು ಪ್ರಸಿದ್ಧ ವಾದನಂತರ ಆ ರಿಪೋರ್ಟಿನೊಳಗೆ ಅಡಕವಾದ ಸೂಚನೆಗಳನ್ನು ವಿಚಾರ ಮಾಡುವದಕ್ಕಾಗಿ ಜಾಯಿಂಟ ಪಾರ್ಲಿಮೆಂಟರಿ ಕಮೀಟಿಯು ಏರ್ಪಡಿ ಸಲ್ಪಟ್ಟಿತು. ವಿಲಾಯತಿಯಲ್ಲಿಯ ಪ್ರಚಾರ ಕಾರ್ಯವು ಮೊದಲಿನಿಂದಲೂ ಸಾಗುತ್ತ ಬಂದಿತ್ತೆಂಬದು ವಾಚಕರಿಗೆ ಗೊತ್ತಿದೆ. ಜಾನ ಬ್ರಾಯಿಟ, ವಿಲಿಯಮ್ ಡಿಗ್ಬಿ, ಫಾಸೇಟ ಮುಂತಾದವರು ಪಾರ್ಲಿಮೆಂಟಿನಲ್ಲಿ ತಮ್ಮ ತಮ್ಮ ಪರಿಯಿಂದ ಹೋರಾಡಹತ್ತಿದರು. ದಾದಾಭಾಯಿ ನೌರೋಜಿ ಯವರು ಇಂಗ್ಲಂಡದಲ್ಲಿ ಅನೇಕ ವರ್ಷಗಳವರೆಗೆ, ಇಂಗ್ಲಡದಲ್ಲಿಯೆ ಇದ್ದು ಹಿಂದುಸ್ತಾನದ ಪರವಾಗಿ ಚಳವಳಿಯನ್ನು ಮಾಡಿದರು. ಹ್ಯೂಮ ವೆಡರ್ನ ಬರ್ಗ, ಹೆನ್ರಿಕಾಟನ್, ಇವರಾದರೂ, ಹಿಂದೀಜನರ ಪರವಾಗಿ ನಡೆದ ಪ್ರಚಾರ ಕಾರ್ಯಕ್ಕೆ ಸಹಾಯವನ್ನು ಮಾಡಿದರು. ಹಿಂದುಸ್ತಾ ನದ ಹಿತಸಂರಕ್ಷಣೆಗಾಗಿ ಇಂಡಿಯಾ ಪಾರ್ಲಿಮೆಂಟರಿ ಕಮಿಟಿ, ಮತ್ತು

ಬ್ರಿಟಿಶ ಕಾಂಗ್ರೆಸ್ ಕಮಿಟಿ ಇವೆರಡೂ ಸ್ಥಾಪಿಸಲ್ಪಟ್ಟವು. ಆದರೆ ಇಂಗ್ಲಂಡದಲ್ಲಿಯ ಪ್ರಚಾರ ಕಾರ್ಯವನ್ನು ಹಿಂದೀಜನರೆ ಕೈಕೊಳ್ಳುವದು ಅವಶ್ಯವಾದುದರಿಂದ ಮೊದಲಿಗೆ ದಾದಾಭಾಯಿಯವರು, ಹಿಂದುಗಡೆ ಗೋಖಲೆಯವರು ಈ ಕಾರ್ಯವನ್ನು ವ್ಯವಸ್ಥಿತವಾಗಿ ಮಾಡಿದರು.

ಮೊದಲು ಮೊದಲು ಇಂಗ್ಲಂಡದಲ್ಲಿಯ ಪ್ರಚಾರ ಕಾರ್ಯಕ್ಕೆ ಅವಶ್ಯವಾದ ಧನಸಹಾಯವನ್ನು ಹ್ಯೂಮ ವೆಡರ್ನ ಬರ್ನರೇ ಮಾಡಿದರು. ಮುಂದೆ ೧೮೯೩ರಲ್ಲಿ ಬ್ರಿಟಿಶ ಕಮಿಟಿ ಮತ್ತು ಇಂಡಿಯಾ ವರ್ತಮಾನಪತ್ರ ಕಾಂಗ್ರೆಸ್ಸಿನವರು ವರ್ಷಂಡಕ್ಕೆ ೬೦ ಸಾವಿರ ರೂಪಾಯಿಗಳನ್ನು ಕೊಡಬೇಕೆಂದು ನಿರ್ಣಯವಾಯಿತು. ೧೮೯೦-೧೯೦೩ರ ವರೆಗೆ ವರ್ಷಕ್ಕೆ ೨-೩ ಸಾವಿರ ಪೌಂಡಿನಂತೆ ಹಿಂದುಸ್ಥಾನದಿಂದ ಇಂಗ್ಲಂಡಕ್ಕೆ ಕಾಂಗ್ರೆಸ ಕಾರ್ಯಕ್ಕಾಗಿ ಕಳಿಸಲ್ಪಟ್ಟವು. ಈ ರೀತಿ ೧೯೧೭ರ ವರೆಗೆ ಸಾಧ್ಯವಾದಷ್ಟು ಮಟ್ಟಿಗೆ ಹಿಂದುಸ್ಥಾನದಿಂದ ಪ್ರಚಾರ ಕಾರ್ಯಕ್ಕಾಗಿ ಹಣವು ಹೋಗುತ್ತಲಿತ್ತು. ೧೯೧೯ರಲ್ಲಿ ಲೋಕಮಾನ್ಯರು ಇಂಗ್ಲಂಡಿಗೆ ಹೋದಾಗ ಬ್ರಿಟಿಶ ಕಮಿಟಿಯು ಮಂದಪಕ್ಷದ ಮತಧೋರಣವನ್ನೇ ಸ್ವೀಕರಿಸುತ್ತಿರುವದು ಅವರಿಗೆ ಕಂಡು ಬಂದಿತು. ಆದುದರಿಂದ ಪ್ರಯಾಸಪಟ್ಟು ಬ್ರಿಟಿಶ ಕಾಂಗ್ರೆಸ ಕಮಿಟಿಯು ಕಾಂಗ್ರೆಸ್ಸಿನ ಧೋರಣವನ್ನು ಅನುಸರಿಸುವಂತೆ ಲೋಕಮಾನ್ಯರು ವ್ಯವಸ್ಥೆಯನ್ನು ಮಾಡಿದರು. ಮುಂದೆ ೧೯೨೦ರಲ್ಲಿ ನಾಗಪೂರ ಕಾಂಗ್ರೆಸ್ಸಿನ ಠರಾವಿನಂತೆ ಬ್ರಿಟಿಶ ಕಮಿಟಿಯೂ, ಇಂಡಿಯಾದ ವರ್ತಮಾನ ಪತ್ರವೂ ನಿಲ್ಲಿಸಲ್ಪಟ್ಟವು.

೧೯೧೯ರ ಕಾಂಗ್ರೆಸ ಶಿಷ್ಟಮಂಡಳದವರೂ, ಮಂದಪಕ್ಷದ ಶಿಷ್ಟಮಂಡಳದವರೂ, ಹೋಮರೂಲ ಶಿಷ್ಟಮಂಡಳದವರೂ, ಉಳಿದವರೂ. ಮಾಡಿದ ಕಾರ್ಯ ವೃತ್ತಾಂತವನ್ನು ವಿಸ್ತೃತವಾಗಿ ಇಲ್ಲಿಹೇಳುವದು ಸಾಧ್ಯವೂ ಇಲ್ಲ-ಅವಶ್ಯವೂ ಇಲ್ಲ. ಎಲ್ಲರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಜಾಯಿಂಟ ಕಮಿಟಿಯದುರಿಗೆ ಮಂಡಿಸಿದರು. ಲೋಕಮಾನ್ಯ ತಿಳಕರು ಕಾಂಗ್ರೆಸ್ಸಿನ ಪರವಾಗಿ ಶಾಂತತಾ ಪರಿಷತ್ತಿನ ಅಧ್ಯಕ್ಷರಾದ ಜಾರ್ಜ ಕ್ಲೆಮಿಂಕೊ ಇವರಿಗೆ ಹಿಂದುಸ್ಥಾನದ ಪರವಾಗಿ ಒಂದು ಅರ್ಜಿಯನ್ನು ಹಾಜರಪಡಿಸಿದರು. ಆದರೆ ಅದರ ಉಪಯೋಗವೇನೂ ವಿಶೇಷ

ವಾಗಲಿಲ್ಲ. ೧೯೧೯ರಲ್ಲಿ ಹಿಂದುಸ್ಥಾನದ ಹೊಸ ಸುಧಾರಣೆಯ ಸೂಚನೆಗಳು ಪಾರ್ಲಿಮೆಂಟಿನಲ್ಲಿ ಮಂಜೂರಾದವು.

(೬೫) ೧೯೧೯ರ **ಗವ್ಹರ್ನಮೆಂಟ ಆಫ್ ಇಂಡಿಯಾ ಆಕ್ಟ:—** ಈ ಕಟ್ಟಳೆಯಂತೆ ಹಿಂದುಸ್ಥಾನದ ರಾಜ್ಯ ಘಟನೆಯಲ್ಲಿ ಅನೇಕ ಮಹತ್ವದ ಬದಲಾವಣೆಗಳಾದವು. ಎಲ್ಲ ಕಾಯದೆಮಂಡಲಗಳಲ್ಲಿಯೂ, ಜನರಿಂದ ಆರಿಸಲ್ಪಟ್ಟ ಪ್ರತಿನಿಧಿಗಳ ಬಹುಮತವಾಯಿತು. ಪ್ರಾಂತಗಳಲ್ಲಿ ಲೋಕ ಪ್ರತಿನಿಧಿಗಳ ವಿಶ್ವಾಸಕ್ಕೆ ಪಾತ್ರರಿದ್ದ ಮಂತ್ರಿಗಳ ವಶಕ್ಕೆ ರಾಜ್ಯದಾಡಳಿತೆಯ ಕೆಲವು ಭಾಗಗಳನ್ನು ಒಪ್ಪಿಸಬೇಕೆಂದು ಗೊತ್ತಾಯಿತು. ಕಾಯದೆ ಮಂಡಲಗಳ ಮತದಾರ ಸಂಘಗಳೂ ವಿಸ್ತೃತವಾದವು.

ಈ ಕಟ್ಟಳೆಯು ಅಮಲಿನಲ್ಲಿ ಬಂದ ಹತ್ತು ವರ್ಷಗಳನಂತರ ಒಂದು ಕಮಿಶನ್ನು ನೇಮಿಸಿ ಈ ಘಟನೆಯಲ್ಲಿಯಾದ ಬದಲಾವಣೆಗಳನ್ನು ಮಾಡಬೇಕೆಂಬುದನ್ನು ಕುರಿತು ವಿಚಾರಮಾಡಬೇಕೆಂದು ಗೊತ್ತಾಯಿತು. ೧೯೧೯ರ ಕಟ್ಟಳೆಯಂತೆ ಲೋಕಸಭೆಯ ಅಧಿಕಾರ ಮರ್ಯಾದೆಯು ವಿಸ್ತೃತವಾದರೂ ಗವ್ಹರ್ನರಜನರಲ, ಗವ್ಹರ್ನರ, ಮತ್ತು ಅವರ ಕೈಕೆಳಗಿನ ಅಧಿಕಾರಿಗಳ ಅಧಿಕಾರದಲ್ಲಿ ಹೆಚ್ಚುಕಡಿಮೆಯಾಗಲಿಲ್ಲ. ಲೋಕಸಭೆಯವರು ಪಾಸುಮಾಡಿದ ಯಾವ ಕಟ್ಟಳೆಯನ್ನೂ ಗವ್ಹರ್ನರಜನರಲನೂ, ಗವ್ಹರ್ನರನೂ, ಬದಿಗಿರಿಸಬಹುದು. ಅವಶ್ಯವಿದ್ದಾಗ ೬ ತಿಂಗಳ ಅವಧಿಯ ಆರ್ಡಿನನ್ಸು ಹೊರಡಿಸುವ ಅಧಿಕಾರವೂ, ಲೋಕಸಭೆಯ ಮತವೇನಿದ್ದರೂ ಹಿಂದುಸ್ಥಾನದ ಆಯವ್ಯಯವನ್ನು ತನ್ನ ಮನಸ್ಸಿಗೆ ತೋರಿದಂತೆ.ಮಾಡುವ ಅಧಿಕಾರವೂ ಗವ್ಹರ್ನರಜನರಲನಿಗೆ ಉಳಿಯಿತು. ಪ್ರಾಂತದ ಎಲ್ಲ ಕಾರಭಾರದ ಕೊನೆಯ ಅಧಿಕಾರಿಯು ಗವ್ಹರ್ನರನೇ ಉಳಿದನು. ಅನಿವಾರ್ಯ ಪ್ರಸಂಗ ಬಂದಾಗ ಮಂತ್ರಿಗಳನ್ನು ತೆಗೆದು ಬಿಟ್ಟುಕೊಟ್ಟ ವಿಷಯಗಳ ಆಡಳಿತೆಯನ್ನು ಗವ್ಹರ್ನರನೇ ಮಾಡಬೇಕೆಂದು ನಿರ್ದೇಶಿಸಲ್ಪಟ್ಟಿತು. ಅಲ್ಲದೆ ಅಶಾಂತಿಯುಂಟಾದಾಗ ಎಲ್ಲ.ಅಧಿಕಾರಿಗಳ ಅಧಿಕಾರಗಳನ್ನು ಬದಿಗಿರಿಸಿ ರಾಜ್ಯದ ಯಾವದೊಂದು ಭಾಗವನ್ನು ಸೈನ್ಯದ ವಶಕ್ಕೆ ಕೊಡುವ ಅಧಿಕಾರವೂ ಗವ್ಹರ್ನರ ಜನರಲ್ಲನ ಕೈಯಲ್ಲಿತ್ತು. ಆದರೆ ರಾಜ್ಯದಾಡಳಿತೆಯ ಸ್ವಲ್ಪ ಭಾಗವಾದರೂ ಲೋಕಮತದ ಅಂಕೆಯಲ್ಲಿ ಬಂದು ಲೋಕಸಭೆಯ

ಪ್ರಭಾವವು ಬೆಳೆಯಹತ್ತಾಯಿತು. ಹೊಸ ಸುಧಾರಣೆಗಳು ಅಮಲಿನಲ್ಲಿ ಬರಲು ಅನುಕೂಲವಾದ ವಾತಾವರಣವು ಉತ್ಪನ್ನವಾಗಬೇಕೆಂದು ರಾಜಕೀಯ ಕೈದಿಗಳ ಬಿಡುಗಡೆ ಮಾಡಬೇಕೆಂದು ಬಾದಶಹರ ಆಜ್ಞೆಯಪ್ರಕಾರ ಹಿಂದುಸ್ಥಾನ ಸರಕಾರದವರು ಮಹಮದಅಲ್ಲಿ, ಶೌಕತಅಲ್ಲಿ, ರಾಮಭುಜ ದತ್ತ ಚೌಧರಿ, ಡಾ. ಸತ್ಯಪಾಲ, ಡಾ. ಕಿಚಲು, ಮುಂತಾದವರನ್ನು ಬಿಟ್ಟು ಬಿಟ್ಟರು. ಪಂಜಾಬದ ದಂಡಿನಾಳ್ಗೆಯಲ್ಲಿ ಶಿಕ್ಷೆ ಹೊಂದಿದ ಬಹುತರ ಎಲ್ಲ ಕೈದಿಗಳನ್ನು ಇದೇ ಸಮಯಕ್ಕೆ ಬಿಟ್ಟುಬಿಟ್ಟರು.

**(೬೬) ಅಮೃತಸರ ಕಾಂಗ್ರೆಸ** (೧೯೧೯):— ೧೯೧೯ರ ಡಿಸೆಂಬರ ತಿಂಗಳಲ್ಲಿ ಕಾಂಗ್ರೆಸ್ಸಿನ ೩೪ನೆಯ ಅಧಿವೇಶನವು ಪಂಡಿತ ಮೋತಿಲಾಲ ನೆಹ್ರುರವರ ಅಧ್ಯಕ್ಷತೆಯಲ್ಲಿ ನೆರವೇರಿತು. ಪಂಡಿತ ಮೋತಿಲಾಲರು ಪಂಜಾಬದಲ್ಲಿ ೧೯೦೫ರಿಂದ ನಡೆದ ದಬ್ಬಾಳಿಕೆಯನ್ನೂ ಯುದ್ಧದ ಕಾಲದಲ್ಲಿ ರಕ್ರೂಟಭರತಿಗಾಗಿ ನಡೆಯಿಸಿದ ಅನಾಚಾರಗಳನ್ನೂ ರೌಲೇಟ ಬಿಲ್ಲನ್ನೂ ಅಮೃತಸರ, ಲಾಹೋರ, ಕಾಸೂರ, ಗುಜರಾಣವಾಲಾ, ಮುಂತಾದ ಸ್ಥಳಗಳಲ್ಲಿ ನಡೆದ ಅತ್ಯಾಚಾರಗಳನ್ನೂ ವರ್ಣಿಸಿ ಇದಕ್ಕೆಲ್ಲ ಮಾಯಿಕಲ್ ಒಡ್‌ವಾಯರರೂ ಲಾರ್ಡ ಚೇಮ್ಸ್‌ಫೋರ್ಡರರೂ ಹೊಣೆಗಾರರಿರುವ ರೆಂದು ಹೇಳಿದರು. ಹೊಸ ಸುಧಾರಣೆಗಳು ಹೇಗೆ ಅಸಮಾಧಾನಕಾರಕ ವಾಗಿವೆ ಎಂಬುದನ್ನು ವಿಶದವಾಗಿ ತಿಳಿಸಿ ಹೇಳಿದರು. ಸುಧಾರಣೆಗಳು ಬಂದರೂ ಸೈನ್ಯದಲ್ಲಿಯೂ, ನೌಕಾವಿಭಾಗದಲ್ಲಿಯೂ, ಜನರಿಗೆ ಯಾವ ತರಹದ ಹಕ್ಕುಗಳು ದೊರೆಯಲಿಲ್ಲವೆಂದು ಹೇಳಿದರು. ಖಿಲಾಫತದ ಪಶ್ನೆ ಯನ್ನು ಚನ್ನಾಗಿ ವಿವರಿಸಿದರು.

ಅಮೃತಸರ ಕಾಂಗ್ರೆಸ್ಸಿನಲ್ಲಿ ಹೊಸ ಸುಧಾರಣೆಗಳ ವಿಷಯಕ್ಕೆ ಚರ್ಚೆ ಯಾಗಿ ಹಿಂದುಸ್ಥಾನವು ಸಂಪೂರ್ಣ ಸ್ವರಾಜ್ಯಕ್ಕೆ ಪಾತ್ರವಿದೆಯೆಂದೂ ಹೊಸ ಸುಧಾರಣೆಗಳ ಕಾಯದೆಯು ಅಪೂರ್ಣವು, ಅಸಮಾಧಾನಕಾ ರಕವು, ನಿರಾಶಾಜನಕವು ಇರುವವೆಂದೂ ಹಿಂದುಸ್ಥಾನದಲ್ಲಿ ಪಾರ್ಲ ಮೆಂಟಿನವರು ಪೂರ್ಣ ಹೊಣೆಗಾರಿಕೆಯ ರಾಜ್ಯವನ್ನು ಸ್ಥಾಪಿಸಬೇಕೆಂದೂ ಅಂತಹ ಸ್ವರಾಜ್ಯವನ್ನು ದೊರಕಿಸಲು ಹೊಸ ಸುಧಾರಣೆಗಳನ್ನು ಜನರು ಉಪಯೋಗಿಸಬೇಕೆಂದೂ ಠರಾವು ಪಾಸಾಯಿತು. ಅಮೃತಸರದ ಅಧಿವೇ

ಶನದಲ್ಲಿ ಒಟ್ಟಿಗೆ ೪೧ ಠರಾವುಗಳು ಪಾಸಾದವು. ಪಂಜಾಬದಲ್ಲಿಯೂ ಗುಜರಾಥದಲ್ಲಿಯೂ ಜನರು ಮಾಡಿದ ಅತ್ಯಾಚಾರಗಳು ನಿಷೇಧಿಸಲ್ಪಟ್ಟವು. ಜನರಲ್ ಡಾಯರನನ್ನೂ ಮಾಕೆಲ್ ಒಡ್‌ವಾಯರರನ್ನೂ ನೌಕರಿಯಿಂದ ತೆಗೆಯಬೇಕೆಂದು ಕಾಂಗ್ರೆಸ್ಸಿನ ಅಭಿಪ್ರಾಯವು ವ್ಯಕ್ತಪಡಿಸಲ್ಪಟ್ಟಿತು. ಸರಕಾರದ ದಂಡಿನಾಳ್ಗೆಯ ಮೂಲಕ ಗವರ್ನರ ಜನರಲರ ಕಾರ್ಯಕಾರಿ ಮಂಡಳದ ಸಭಾಸದತ್ವವನ್ನು ಬಿಟ್ಟ ಶಂಕರನ್ನಾಯರರನ್ನು ಅಭಿನಂದಿಸುವ ಠರಾವು ಪಾಸಾಯಿತು. ಪಂಜಾಬದಲ್ಲಿ ಕೊಲ್ಲಲ್ಪಟ್ಟ ಇಂಗ್ಲಿಷ ಮತ್ತು ಹಿಂದಿ ಜನರ ಕುಟುಂಬಗಳಿಗೆ ಸಹಾನುಭೂತಿಯು ತೋರಿಸಲ್ಪಟ್ಟಿತು. ಬಾದಶಹರ ಇಚ್ಛೆಯಂತೆ ಎಲ್ಲ ರಾಜಕೀಯ ಕೈದಿಗಳನ್ನು ಬಿಡಬೇಕೆಂದು ಬೇಡಿಕೊಳ್ಳುವ ಠರಾವೂ ಪಾಸಾಯಿತು. ಲಾರ್ಡ ಚೇಮ್ಸಫೊರ್ಡರು ವಿಶ್ವಾಸಕ್ಕೆ ಎರವಾದದ್ದರಿಂದ ಅವರನ್ನು ತಿರುಗಿ ಕರಿಸಿಕೊಳ್ಳಬೇಕೆಂದು ಕೇಳಿಕೊಳ್ಳುವ ಠರಾವೂ ಪಾಸಾಯಿತು. ಖಿಲಾಫತದ ವಿಷಯದಲ್ಲಿ ಹಿಂದೀ ಮುಸಲ್ಮಾನರ ಭಾವನೆಗಳನ್ನು ನೋಯಿಸದಂತೆ ನಿರ್ಣಯಗಳನ್ನು ಮಾಡಬೇಕೆಂದು ಕಾಂಗ್ರೆಸ್ಸು ಸೂಚಿಸಿತು. ಸ್ವದೇಶಿ, ಪರರಾಷ್ಟ್ರದಲ್ಲಿ ಪ್ರಚಾರಕಾರ್ಯ, ಜನತೆಯ ಮೂಲಭೂತ ಹಕ್ಕುಗಳು ಮುಂತಾದ ವಿಷಯಗಳನ್ನು ಕುರಿತು ಯೋಗ್ಯವಾದ ಠರಾವುಗಳಾದವು. ಕಾಂಗ್ರೆಸ್ಸಿನ ಅಧಿವೇಶನವು ಮುಗಿದನಂತರ ಮಹಾತ್ಮಾಗಾಂಧಿಕೀ ಜಯ, ಮಾಲವೀಯಕೀಜಯ, ಟಿಳಕ ಮಹಾರಾಜಕೀಜಯ, ಮುಂತಾದ ಜಯಘೋಷಗಳನ್ನು ಜನರು ಕೂಗಿದರು. ಅಮೃತಸರದ ಅಧಿವೇಶನದಲ್ಲಿ ಸವರಾಷ್ಟ್ರದ ನವಚೈತನ್ಯವು ಉಕ್ಕಿ ಬರುವುದನ್ನು ನೋಡಬಹುದಿತ್ತು.

(೬೭) **ರೋಲೇಟ ಬಿಲ್ಲುಗಳು**:– ಸಶಸ್ತ್ರ ಕ್ರಾಂತಿಕಾರಕರ ಅತ್ಯಾಚಾರಗಳನ್ನು ತಡೆದು ಹಿಡಿಯಲು ಯಾವ ಉಪಾಯಗಳನ್ನು ಯೋಜಿಸಬೇಕೆಂದು ವಿಚಾರಿಸಲು ರೋಲೆಟ್‌ರ ಅಧ್ಯಕ್ಷತೆಯಲ್ಲಿ ಒಂದು ಕಮಿಟಿಯು ನೇಮಿಸಲ್ಪಟ್ಟು ಆ ಕಮಿಟಿಯ ಸೂಚನೆಯಂತೆ ೧೯೧೯ನೆಯ ಇಸ್ವಿಯ ಫೆಭ್ರುವರಿ ತಿಂಗಳಲ್ಲಿ ಎರಡು ಬಿಲ್ಲುಗಳನ್ನು ಹಿಂದುಸ್ತಾನ ಸರಕಾರದ ಗೃಹಮಂತ್ರಿಗಳಾದ ಸರ ವಿಲಿಯಮ್ ವಿನ್ಸೆಂಟ ಇವರು ಹಿಂದುಸ್ತಾನದ ಕಾಯದೆಮಂಡಳದ ಎದುರಿಗೆ ಮಂಡಿಸಿದರು. ಕ್ರಾಂತಿಕಾರಕ ಗುನ್ಹೆಗಳನ್ನು

ಮೂರು ಹಾಯ-ಕೋರ್ಟ ಜಜ್ಜರು ಆದಷ್ಟು ತೀವ್ರವಾಗಿ ವಿಚಾರಿಸುವ ಅಧಿಕಾರವೂ ಸರಕಾರದ ವಿರುದ್ಧ ಗುನ್ಹೆಗಳನ್ನು ಮಾಡುವಂತಹ ಚಟುವಟಿಕೆಗಳಲ್ಲಿ ತೊಡಗಿದ ಜನರನ್ನು ಯಾವದೊಂದು ನಿರ್ಬಂಧಕ್ಕೊಳಮಾಡುವ ಅಧಿಕಾರವೂ ಗುನ್ಹೆಗಳನ್ನು ಮಾಡಿರುವರೆಂಬ ಸಂಶಯದಿಂದ ಜನರನ್ನು ಬಂಧನಗಳನ್ನಿಡುವ ಅಧಿಕಾರಗಳೂ ಈ ಮೊದಲೆ ಬಂಧನದಲ್ಲಿರುವ ಜನರನ್ನು ಮುಂದಾದರೂ ಬಂಧನದಲ್ಲಿಡುವ ಅಧಿಕಾರಗಳೂ ಸರಕಾರಕ್ಕೆ ಕೊಡಲ್ಪಟ್ಟವು. ಎರಡನೆಯ ಬಿಲ್ಲಿನಿಂದಲೂ ಪ್ರಚಲಿತ ಫೌಜದಾರೀ ಕಾಯದೆಯಲ್ಲಿ ಹೊಸ ಬದಲಾವಣೆಗಳನ್ನು ಮಾಡಬೇಕೆಂದಿದ್ದರು. ಯಾವನ ಹತ್ತರ ರಾಜದ್ರೋಹಿಪತ್ರಕವು ದೊರೆಯುವದೋ ಅವನು ಈ ಬಿಲ್ಲಿನಂತೆ ಶಿಕ್ಷೆಗೊಳಗಾಗುತ್ತಿದ್ದನು. ಇದೆತರದ ಹೆಚ್ಚಿನ ದಬ್ಬಾಳಿಕೆಯ ಮಾತುಗಳು ಇವೆರೆಡೂ ಬಿಲ್ಲುಗಳಲ್ಲಿ ಅಡಕವಾಗಿದ್ದವು. ಇವೆರಡೂ ಬಿಲ್ಲುಗಳು ಮಂಜೂರಾದರೆ ತಾವು ಸರಕಾರದ ವಿರುದ್ಧವಾಗಿ ಸತ್ಯಾಗ್ರಹವನ್ನು ಪ್ರಾರಂಭಿಸುವರೆಂದು ಮಹಾತ್ಮಾಗಾಂಧಿಯವರು ಈ ಮೊದಲೆ ಜಾಹೀರ ಪಡಿಸಿದ್ದರು.

**(೩೮) ಸತ್ಯಾಗ್ರಹದ ತತ್ವವು:—** ಪಂಜಾಬದಲ್ಲಾದ ಅತ್ಯಾಚಾರಗಳ ವಿಚಾರಣೆಯನ್ನು ಮಾಡಲು ಕಾಂಗ್ರೆಸಿನವರು ನೇಮಿಸಿದ ಸಮಿತಿಗೆ ಸತ್ಯಾಗ್ರಹದ ಮೂಲತತ್ವಗಳನ್ನು ವಿವೇಚಿಸುವ ನಿವೇದನವನ್ನು ಮಹಾತ್ಮಾಗಾಂಧಿಯವರು ಕೊಟ್ಟರು. ಅವರ ಶಬ್ದಗಳಲ್ಲಿಯೆ ಸತ್ಯಾಗ್ರಹದ ಸ್ವರೂಪವರ್ಣನೆಯನ್ನು ಈ ಕೆಳಗೆ ಕೊಟ್ಟಿದೆ.

"ಸತ್ಯಾಗ್ರಹವೆಂದರೆ, ಸತ್ಯವನ್ನು ಗಟ್ಟಿಯಾಗಿ ಹಿಡಿಯುವದು; ಸತ್ಯಾಗ್ರಹವೆಂದರೆ ಪ್ರತಿಪಕ್ಷಿಯ ಮನಸ್ಸು ಒಲಿಸುವದು, ಆದುದರಿಂದ ಅದರಲ್ಲಿ ಶಾರೀರಕ ಅತ್ಯಾಚಾರದ ಸಮಾವೇಶವಾಗಲಾರದು... ಸತ್ಯಾಗ್ರಹವೆಂದರೆ ಪರರನ್ನು ಹಿಂಸಿಸದೆ ತಾನೆ ಕಷ್ಟಗಳನ್ನನುಭವಿಸಿ ಸತ್ಯದ ರಕ್ಷಣೆಯನ್ನು ಮಾಡುವದು."

"ಯಾವ ಸಂಕಟವನ್ನೂ ಲೆಕ್ಕಿಸದೆ ಸಾಕ್ರೆಟಿಸನು ತನಗೆ ಸತ್ಯವೆಂದು ತೋರಿದ ಮಾತನ್ನೆ ಅಥೆನ್ಸದ ಯುವಕರಿಗೆ ಉಪದೇಶಿಸಿದನು, ಅದಕ್ಕಾಗಿ ಧೈರ್ಯದಿಂದ ಮರಣವನ್ನೂ ಎದುರಿಸಿದನು. ಅವನು ಸತ್ಯಾಗ್ರಹಿಯು. ಪ್ರಲ್ಹಾದನು ತನ್ನ ತಂದೆಯ ಆಜ್ಞೆಗಳು ತನ್ನ ಸದಸದ್ವಿವೇಕ ಬುದ್ಧಿಗೆ

ವಿರುದ್ಧವಾದವುಗಳೆಂದು ಅವನ್ನು ಉಲ್ಲಂಘಿಸಿದನು; ಬಂದ ಕಷ್ಟಗಳನ್ನೂ ಯಾತನೆಗಳನ್ನೂ ಆನಂದದಿಂದ ಸಹಿಸಿದನು. ಪ್ರಲ್ಹಾದನೂ ಸತ್ಯಾಗ್ರಹಿಯು....ಕುಟುಂಬದಲ್ಲಿ ಒಬ್ಬನಿಗೆ ನೋವಾದರೆ ಅವನು ಉಳಿದ ಆಪ್ತರ ಮೇಲೆ ರೇಗಿಗೇಳದೆ ಅದನ್ನು ಶಾಂತತೆಯಿಂದ ಸಹಿಸಿಕೊಳ್ಳುವನು; ಉಳಿದ ಎಲ್ಲ ಮಾತುಗಳಲ್ಲಿ ಕುಟುಂಬದವರೊಡನೆ ಒಮ್ಮನಸಿನಿಂದ ಅವನು ವರ್ತಿಸುವನು. ಈ ತರದ ಆಚರಣೆಯಿಂದ ಕುಟುಂಬದ ಶಾಂತಿಯು ಬೆಳೆಯುತ್ತದೆ: ಸುಧಾರಿಸಿದ ದೇಶಗಳಲ್ಲೆಲ್ಲ ಈ ವಾತ್ಸಲ್ಯದ ತತ್ವವೆ ತನ್ನ ಪ್ರಭಾವವನ್ನು ತೋರಿಸುತ್ತದೆ. ''

'' ಕುಟುಂಬಗಳಿಗೆ ಅನ್ವಯಿಸುವ ಈ ತತ್ವವು ರಾಷ್ಟ್ರಗಳಿಗೂ ಅನ್ವಯಿಸುವದು. ಕುಟುಂಬದ ಈ ತತ್ವದ ಸ್ವೀಕಾರ ಮಾಡದಿದ್ದರೆ ರಾಷ್ಟ್ರಗಳು ಒಂದಾಗಲಾರವು, ಬೇರೆ ಬೇರೆ ರಾಷ್ಟ್ರಗಳ ಚಟುವಟಿಕೆಗಳಿಂದ ಜಗತ್ತಿನ ಸುಖವೂ ಸಾಧಿಸಲಾರದು.

'' ಪ್ರೇಮದ ಈ ತತ್ವವೆಂದರೆಯೆ ಸತ್ಯದ ತತ್ವವು. ಸತ್ಯವಿರದೆ ಪ್ರೇಮವಿಲ್ಲ. . ನಿಜವಾದ ಪ್ರೇಮದಲ್ಲಿ ಪಕ್ಷಪಾತವಿಲ್ಲ. ಸತ್ಯಾಗ್ರಹವೆಂದರೆ ಒಂದು ನಾಣ್ಯವೆಂದು ತಿಳಿದುಕೊಂಡರೆ ಅದರ ಒಂದು ಬದಿಗೆ ಪ್ರೇಮ ಮತ್ತು ಇನ್ನೊಂದು ಬದಿಗೆ ಸತ್ಯವಿರುವದು. ಆ ನಾಣ್ಯವು ಎಲ್ಲ ಕಡೆಗೂ ನಡೆಯುವದು; ಅದರ ಬೆಲೆಯನ್ನು ಕಟ್ಟುವದು ಸಾಹಾಧ್ಯವಿಲ್ಲ. ''

'' ಸತ್ಯಾಗ್ರಹಿಗೆ ಪರಾಜಯವೆಂಬುದಿಲ್ಲ; ದಣಿಯದೆ ಅವನು ಸತ್ಯಕ್ಕಾಗಿಯೆ ಹೋರಾಡುತ್ತಾನೆ. ಆ ಹೋರಾಟದಲ್ಲಿ ಮರಣವೊದಗಿದರೆ ಅದೆ ಅವನಿಗೆ ಮುಕ್ತಿ; ಸೆರೆಮನೆಯೆ ಸ್ವಾತಂತ್ರ್ಯದ ಮಹಾದ್ವಾರ. ''

'' ಈ ತರದ ಸತ್ಯಾಗ್ರಹವನ್ನು ಕೇವಲ ಸ್ವಲ್ಪೆ ಜನರು ಆಚರಿಸಬಲ್ಲರು ಎಂದು ಕೆಲವರ ಆಕ್ಷೇಪಣೆ; ನನ್ನ ಅನುಭವದಂತೆ ಈ ಆಕ್ಷೇಪಣೆಯು ಸರಿಯಾದುದಲ್ಲ. ಒಮ್ಮೆ ಸತ್ಯಾಗ್ರಹದ ತತ್ವವು ತಿಳಿಯಿತೆಂದರೆ ಅದರ ಆಚರಣೆಯು ತೀರ ಸುಲಭವಿದೆ. ''

'' ರಾಜಕೀಯ ಕ್ಷೇತ್ರದಲ್ಲಿ ಅನ್ಯಾಯದ ಕಾಯದೆಗಳಿಗೆ ವಿರೋಧವನ್ನು ಮಾಡುವದೆ ಜನತೆಯ ಪರವಾಗಿ ಹೋರಾಟವು. ಅರ್ಜಿ ಮುಂತಾದವುಗಳಿಂದ ಆ ಕಾಯದೆಗಳು ಅನ್ಯಾಯಕರವಾಗಿವೆ ಎಂಬ ಮಾತಿನ ಮನವರಿಕೆ

ಯನ್ನು ಪ್ರತಿಪಕ್ಷಿಗಳಿಗೆ ಮಾಡಿಕೊಡುವದಾಗದಿದ್ದರೆ, ಆ ಕಾಯದೆಯನ್ನು ಮುರಿದು ಅದರಿಂದ ಬರುವ ಕಷ್ಟಗಳನ್ನು ಸಹಿಸುವದೆ ಒಂದೇ ಒಂದು ಉಪಾಯವಾಗಿದೆ. ಆದುದರಿಂದ ರಾಜಕೀಯ ಕ್ಷೇತ್ರದಲ್ಲಿ ಸತ್ಯಾಗ್ರಹವು ಸವಿನಯ ಕಾಯದೆ ಭಂಗದ ಸ್ವರೂಪವನ್ನು ತಾಳುತ್ತದೆ.

"ಸಾಮಾನ್ಯ ಗುನ್ಹೆಗಾರನು ಕಳ್ಳತನದಿಂದ ಅಪರಾಧವನ್ನು ಮಾಡುವನು, ಅದಕ್ಕಾಗಿ ಬರುವ ಪ್ರಾಯಶ್ಚಿತ್ತವನ್ನು ತಪ್ಪಿಸಲೆತ್ನಿಸುವನು. ಆದರೆ ಸತ್ಯಾಗ್ರಹಿಯ ಮಾತು ಹಾಗಲ್ಲ. . . ಅವನಿಗೆ ಅಯೋಗ್ಯವೆಂದು ತೋರುವ ಕಾಯದೆಗಳನ್ನು ಅವನು ಮುರಿಯುತ್ತಾನೆ, ಬಂದ ಶಿಕ್ಷೆಯನ್ನು ಆನಂದದಿಂದ ಅನುಭವಿಸುತ್ತಾನೆ. ....ನನ್ನ ಅಭಿಪ್ರಾಯದಂತೆ ಸತ್ಯಾಗ್ರಹದ ಈ ಸುಂದರ ತತ್ವವನ್ನು ಬಾಲಕರಿಗೆ ಕೂಡ ಉಪದೇಶಿಸಬಹುದು. ನಾನೆ ಅದನ್ನು ಸಾವುಥ ಆಫ್ರಿಕೆಯಲ್ಲಿ ಸಾವಿರಾರು ಗಂಡಸರಿಗೂ ಹೆಂಗಸರಿಗೂ ಉಪದೇಶಿಸಿರುವೆನು; ಅದರ ಪರಿಣಾಮಗಳಾದರೂ ಒಳ್ಳೆಯವಾಗಿವೆ."

**(೯೬) ಸತ್ಯಾಗ್ರಹದ ಕಾರ್ಯಕ್ರಮವು:**—ಸತ್ಯಾಗ್ರಹದ ಕಾರ್ಯಕ್ರಮವು ತೀರ ಸುಲಭವಿತ್ತು. ರೋಲೆಟ್ ಕಾಯದೆಗೆ ವ್ಹಾಯಿಸರಾಯರ ಮನ್ನಣೆ ದೊರೆತನಂತರ ಮುಂದಿನ ರವಿವಾರ ಉಪವಾಸವನ್ನು ಮಾಡಬೇಕೆಂದೂ, ಆದಿನ ಹರತಾಳವನ್ನಾಚರಿಸಬೇಕೆಂದೂ, ಪ್ರತಿಯೊಂದು ಕಡೆಗೆ ಸಭೆಗಳನ್ನು ಸೇರಿಸಿ ರೋಲೆಟ ಬಿಲ್ಲುಗಳನ್ನು ತಿರುಗಿ ತಕ್ಕೊಳ್ಳಬೇಕೆಂದೂ ಸರಕಾರಕ್ಕೆ ಕೇಳಿಕೊಳ್ಳಬೇಕೆಂದು ಮಹಾತ್ಮರು ಜಾಹೀರ ಪಡಿಸಿದರು. ಈ ಮೊದಲೆ ಮುಂಬಯಿಯಲ್ಲಿ ಒಂದು ಸತ್ಯಾಗ್ರ ಕಮಿಟಿಯು ಏರ್ಪಡಿಸಲ್ಪಟ್ಟಿತ್ತು. ಸತ್ಯಾಗ್ರಹಿಗಳಿಗಾಗಿ ಒಂದು ಪ್ರತಿಜ್ಞಾಪತ್ರಿಕೆಯೂ ಮಾರ್ಚ ೧೮ ತಾರೀಖಿನ ದಿನ ಪ್ರಸಿದ್ಧಿಸಲ್ಪಟ್ಟಿತ್ತು.

ಮೊದಲಿನ ಕಾರ್ಯಕ್ರಮದಂತೆ ಮಾರ್ಚ ೩೦ ತಾರೀಖಿನ ದಿನವೆ ಹರತಾಳವೂ ಉಪವಾಸವೂ ಆಚರಿಸಲ್ಪಡಬೇಕೆಂದು ಗೊತ್ತಾಗಿತ್ತು. ಅದರಂತೆ ದಿಲ್ಲಿಯಲ್ಲಿ ಹರತಾಳವೂ ಉಪವಾಸವೂ ಮೆರವಣಿಗೆಯೂ ಆಯಿತು. ಸ್ಟೇಶನದ ಹತ್ತರ ಜನರಿಗೂ ಪೋಲೀಸರಿಗೂ ತಿಕ್ಕಾಟವಾಗಿ ಪೋಲೀಸರು ಜನರ ಮೇಲೆ ಗುಂಡು ಹಾರಿಸಿದರು. ೫ ಜನರು ಸತ್ತರು. ಅನೇಕರು ಗಾಯಹೊಂದಿದರು. ಎಪ್ರಿಲ ೬ನೆಯ ತಾರೀಖಿನ ದಿನವು ಅಖಂಡ

ದೇಶದಲ್ಲೆಲ್ಲ ಒಳ್ಳೆ ವಿಜೃಂಭಣೆಯಿಂದ ನೆರವೇರಿಸಲ್ಪಟ್ಟಿತು. ಎಲ್ಲ ಕಡೆಗೂ ಹರತಾಳವೂ, ಮೆರವಣಿಗೆಯೂ ಸಭೆಯೂ ಶಾಂತ ರೀತಿಯಿಂದ ನೆರವೇರಿತು. ಹಿಂದುಮುಸಲ್ಮಾನರೂ ಒಳ್ಳೆ ಒಕ್ಕಟ್ಟಿನಿಂದ ಕಾರ್ಯಕ್ಕೆ ಉದ್ಯುಕ್ತರಾಗಿದ್ದರು. ದಿಲ್ಲಿಯ ಸಂಗತಿಗಳನ್ನು ತಿಳಿದು ಪಂಜಾಬಕ್ಕೆ ಹೋಗಬೇಕೆಂದು ಮಹಾತ್ಮರು ಮುಂಬಯಿಯಿಂದ ಹೊರಟರು. ಆದರೆ ಅವರು ಪಂಜಾಬ ಪ್ರಾಂತವನ್ನು ಸೇರಿದೊಡನೆ ಅವರನ್ನು ತರುಬಿ ಮರುಳಿ ಮುಂಬಯಿಗೆ ಹೋಗುವ ಗಾಡಿಯಲ್ಲಿ ಕೂಡಿಸಿದರು. ಅವರನ್ನು ಸರಕಾರದವರು ಸೆರೆ ಹಿಡಿದರೆಂದು ತಿಳಿದು ಅಹಮ್ಮದಾಬಾದಿನಲ್ಲಿಯೂ ವಿರಮಗಾಮಿನಲ್ಲಿಯೂ ಜನರು ಅತ್ಯಾಚಾರಗಳನ್ನು ಮಾಡಿದರು. ಪಂಜಾಬದಲ್ಲಿಯೂ ಜನರು ಅತ್ಯಾಚಾರಗಳನ್ನು ಮಾಡಿದರು. ಸರಕಾರದವರು ದಂಡಿನಾಳ್ಕೆಯನ್ನು ಸಾರಿದರು. ಅದರ ವಿವರವು ಸ್ವಲ್ಪದರಲ್ಲಿ ಈ ಕೆಳಗೆ ಕೊಡಲಾಗಿದೆ.

**(೭೦) ಪಂಜಾಬದಲ್ಲಿಯ ಅನಾಹುತಗಳು:- ಅಮೃತಸರದಲ್ಲಿ** ಮಾರ್ಚ ೩೦ನೆಯ ತಾರೀಖಿನ ದಿನದ ಸಭೆಗೆ ೩೦-೩೫ ಸಾವಿರ ಜನರು ಸೇರಿದ್ದರು. ರೋಲೇಟ ಬಿಲ್ಲಿನ ನಿಷೇಧವು ಮಾಡಲಾಯಿತು. ಸಭೆಯ ಕಾರ್ಯವು ಶಾಂತತೆಯಿಂದ ನೆರವೇರಿತು. ೧೦ನೆಯ ತಾರಿಖೀನ ದಿನ ಡಾ. ಕಿಚಲೂ ಮತ್ತು ಡಾ. ಸತ್ಯಪಾಲ ಇವರಿಬ್ಬರನ್ನೂ ಅಧಿಕಾರಿಗಳು ಹಿಡಿದು ಯಾವುದೊ ಅಜ್ಞಾತ ಸ್ಥಳಕ್ಕೆ ಕಳಿಸಿಬಿಟ್ಟರು. ಈ ಸುದ್ದಿಯು ತಿಳಿದ ಕೂಡಲೆ ಸಾವಿರಾರು ಜನರು ಕೂಡಿ ಅವರಿಬ್ಬರನ್ನು ಬಿಡಿಸಬೇಕೆಂದು ಪ್ರಾರ್ಥನೆಯನ್ನು ಮಾಡಿಕೊಳ್ಳಲು ಅಮೃತಸರದ ಡೆಪುಟಿ ಕಮೀಶನರರ ಮನೆಯ ಕಡೆಗೆ ಸಾಗಿದರು. ನಡುದಾರಿಯಲ್ಲಿ ಸೈನಿಕರು ತರುಬಿದರೂ ಅವರು ಹಾಗೆಯೆ ಮುಂದೆ ಸಾಗಿದರು. ಸೈನಿಕರು ಗುಂಡು ಹಾರಿಸಿದರು. ಸತ್ತವರನ್ನೂ ಗಾಯ ಹೊಂದಿದವರನ್ನೂ ಹೊತ್ತುಕೊಂಡು ಜನರು ಹಿಂದಿರಿಗಿದರು. ರೇಲ್ವೆಯಾರ್ಡಿನ ಹತ್ತರ ಸೈನಿಕರಿಗೂ ಜನರಿಗೂ ಮತ್ತೊಂದು ಝಟಾಪಟಿಯಾಯಿತು. ಸೈನಿಕರು ಮತ್ತೆ ಗುಂಡು ಹಾಕಿದರು. ೨೦ ಜನರು ಸತ್ತರು, ಅನೇಕರು ಗಾಯಹೊಂದಿದರು. ಕೆಲವರು ಆಸ್ಪತ್ರಿಯಲ್ಲಿಯ ಮಿಸೆಸ್ ಈಸಡೆನಳೆಂಬವಳ ಮೇಲೆ ಏರಿಹೋದರು. ತಲೆತಿರುಗಿದ ಆ ಜನಸಂಪಣಿಯು ಅಲ್ಲಿಯ ಲೆಕ್ಕಿಗನಾದ ಸ್ಕಾಟನೆಂಬುವವನನ್ನು ಕೊಂದುಬಿಟ್ಟಿತು.

ರೇಲ್ವೆ ಗುಡಶೆಡಿಗೆ ಕೆಲವರು ಹೋಗಿ ರಾಬಿನಸನನೆಂಬ ಗಾರ್ಡನನ್ನು ಕೊಂದರು. ಅನಂತರ ಜನರು ಅಲಾಯನ್ಸ ಬ್ಯಾಂಕಿಗೆ ಹೋಗಿ ಮುತ್ತಿದರು. ಮ್ಯಾನೇಜರರಾದ ಟಾಮಸನರು ಪಿಸ್ತೂಲು ಹಾರಿಸಿದರು. ಅವರನ್ನು ಕೊಂದು ಅಲ್ಲಿಯ ಖುರ್ಚಿ ಮೇಜುಗಳೊಡನೆಯೆ ಅವರನ್ನು ಸುಟ್ಟುಬಿಟ್ಟರು. ಸಾರ್ಜಂಟ ರೋಲಾಂಡನೆಂಬುವನನ್ನು ಕೊಂದರು. ಟೌನಹಾಲ, ಪೋಸ್ಟ ಆಫೀಸು ಮಿಶನ ಹಾಲ ಇವೆಲ್ಲ ಕಟ್ಟಡಗಳನ್ನು ಜನರು ಸುಟ್ಟುಬಿಟ್ಟರು. ಸಾಯಕಲಿನ ಮೇಲೆ ಹೋಗುತ್ತಿರುವ ಶೆರವುಡ ಎಂಬ ಯುರೋಪಿಯನ ಹೆಣ್ಣುಮಗಳನ್ನು ಕ್ರೂರತನದಿಂದ ಥಳಿಸಿದರು. ಆದರೆ ಒಬ್ಬ ಹಿಂದೀ ಶಿಷ್ಯನ ಸಹಾಯದಿಂದ ಅವರು ಹಾಗೂ ಹೀಗೂ ಪಾರಾದರು. ಇದೆಲ್ಲ ಗರ್ಹ್ಯವಾದ ಹತ್ಯಾಕಾಂಡವನ್ನು ಜನರು ಸಾಯಂಕಾಲ ೫ಗಂಟೆಯ ಒಳಗಾಗಿಯೆ ಮುಗಿಸಿದರು. ರಾತ್ರಿ ೧೧ಗಂಟೆಗೆ ಲಾಹೋರದಿಂದ ದಂಡು ಬಂದಿತು. ಅಮೃತಸರ ಪಟ್ಟಣವು ೧೧ ತಾರೀಖಿನ ದಿನ ಸೈನ್ಯದ ವಶಕ್ಕೆ ಕೊಡಲ್ಪಟ್ಟಿತು. ಆದಿನ ಸಾವಿರಾರು ಜನರು ಮುನ್ನಾದಿನ ಗುಂಡಿಸೇಟಿನಿಂದ ಸತ್ತ ಜನರನ್ನು ಮೆರವಣಿಗೆಯಿಂದ ಸ್ಮಶಾನಕ್ಕೆ ಒಯ್ದು ದಫನ ವಿಧಿಯನ್ನು ನೆರವೇರಿಸಿದರು. ೧೨ ತಾರೀಖಿನ ದಿನ ಜನರಲ ಡಾಯರನೂ ಸೈನ್ಯದೊಂದಿಗೆ ಬಂದು ತಳವೂರಿದನು. ೧೩ ತಾರೀಖಿನ ದಿನ ಮುಂಜಾನೆ ಜನರಲ ಡಾಯರರು ಕೆಲ ಸೈನಿಕರೊಂದಿಗೆ ಊರೊಳಗೆ ಬಂದು " ಊರಿನ ಒಳಗಾಗಲಿ ಹೊರಗಾಗಲಿ ಯಾವದೆ ಮೆರವಣಿಗೆಯನ್ನು ಹೊರಡಿಸಕೂಡದು. ನಾಲ್ಕು ಜನರಿಗಿಂತ ಹೆಚ್ಚು ಜನರ ಗುಂಪು ಒಂದೆಡೆಗೆ ಸೇರಿದರೆ ಅವಶ್ಯವಾದರೆ ಅವರನ್ನು ಗುಂಡುಗಳನ್ನು ಹಾರಿಸಿ ಚದರಿಸಲಾಗುವದು. " ಎಂದು ಜಾಹೀರನಾಮೆಯನ್ನು ಬೀದಿಗಳಲ್ಲಿ ಅಡ್ಡಾಡಿ ಓದಿಸಿ ಜಾಹೀರಪಡಿಸಿದರು.

ಅದೇ ದಿನ ಸಾಯಂಕಾಲ ೪ ಗಂಟೆಗೆ ಜಾಲಿಯಾನವಾಲಾ ಬಾಗದಲ್ಲಿ ಸಭೆಯಿದೆಯೆಂದು ಒಬ್ಬ ಹುಡುಗನು ಜಾಹೀರ ಪಡಿಸಿದನು. ವೈಶಾಖಿ ಜಾತ್ರೆಯ ಮೂಲಕ ಸುತ್ತಲಿನ ಹಳ್ಳಿಗಳಿಂದ ಸಾವಿರಾರು ಜನರು ಅಮೃತಸರಕ್ಕೆ ಬಂದಿದ್ದರು. ಜಾಲಿಯಾನವಾಲಾ ಬಾಗನೆಂದರೆ ತೋಟವಲ್ಲ. ಧಾರವಾಡದ ಚತುರ್ದಾಸ ಬೈಲಿನಂತೆ ನಾಲ್ಕು ಕಡೆಗೂ ಕಟ್ಟಡಗಳ ಸಾಲುಗಳಿದ್ದು ನಡುವೆ ಬರಿ ಜಾಗೆಯಿದೆ. ಅದಕ್ಕೆ ಹೋಗಲು ಒಂದೇ ಒಂದು ಸಣ್ಣ

ನಾರಿಯಿದೆ. ಆ ಜಾಗೆಯಲ್ಲಿಯಿರುವ ಚಿಕ್ಕ ಗುಡಿಯಹತ್ತರ ೨೦ ಸಾವಿರ ದಷ್ಟು ಜನರು ಕೂಡಿದ್ದರು. ಅವರೆಲ್ಲರೂ ಸಭೆಗಾಗಿ ಕೂಡಿದವರಲ್ಲ. ಹಬ್ಬದ ಮೋಜಿಗಾಗಿ ಗಂಡಸರೂ, ಹೆಂಗಸರೂ, ಚಿಕ್ಕ ಮಕ್ಕಳೂ ಕೂಡಿದ್ದರು. ಯಾರೋ ನಡುವೆ ನಿಂತು ಮಾತನಾಡುತ್ತಿದ್ದನು.

ಜಾಲಿಯಾನವಾಲಾ-ಬಾಗಿನಲ್ಲಿ ನಾಲ್ಕುವರೆ ಗಂಟೆಗೆ ಸಭೆಯಾಗುವದೆಂದು ಜನರಲ ಡಾಯರನಿಗೆ ತಿಳಿದಿತ್ತು. ಅವನು ಜೊತೆಗೆ ಸಶಸ್ತ್ರರಾದ ೨೫ ಗುರ್ಖಾ ಶಿಪಾಯರನ್ನೂ, ೨೫ ಸೀಖ ಶಿಪಾಯರನ್ನೂ, ಜಕತಾರಿಗಳಿಂದ ಸನ್ನದ್ಧರಾದ ೪೦ ಗುರ್ಖಾ ಶಿಪಾಯರನ್ನು ತೆಗೆದುಕೊಂಡು ಜಾಲಿಯಾನವಾಲಾ ಬಾಗಿಗೆ ಹೋದನು. ದೈವಯೋಗದಿಂದ ಚಿಲಕತ್ತಿನ ಮೋಟಾರುಗಳು ಒಳಗೆ ಹೋಗಲಿಲ್ಲ. ಡಾಯರನು ಒಳಗೆ ಹೋದ ಕೂಡಲೆ ಎಡಕ್ಕೆ ೨೫ ಶಿಪಾಯರನ್ನೂ ಬಲಕ್ಕೆ ೨೫ ಶಿಪಾಯರನ್ನೂ ನಿಲ್ಲಿಸಿದನು. ಆನಂತರದ ಸಂಗತಿಗಳನ್ನು ಡಾಯರನ ಮಾತಿನಲ್ಲಿಯೆ ಹೇಳುವೆವು:

" ನಾನು ಜಾಲಿಯಾನವಾಲಾ ಬಾಗಿಗೆ ಹೋದ ಕೂಡಲೆ ೩೦ ಮಿನಿಟನೊಳಗಾಗಿಯೆ ಗುಂಡು ಹಾರಿಸಲು ಪ್ರಾರಂಭಿಸಿದೆನು. ಆ ಸಮಯಕ್ಕೆ ಅಲ್ಲಿ ಸಭೆಯು ನಡೆದಿತ್ತು. ನಡುವೆ ಯಾರೊ ಒಬ್ಬನು ಮಾತನಾಡುತ್ತಿದ್ದನು. ಅವನು ತನ್ನ ಕೈಗಳನ್ನು ಅಲ್ಲಾಡಿಸುತ್ತಿದ್ದನು. ಅವನು ಆ ಸ್ಥಳದ ಮಧ್ಯದಲ್ಲಿದ್ದನು. ನಾನು ಗುಂಡು ಹಾರಿಸುವ ಮೊದಲು ಜನರು ಚದರಬೇಕೆಂದು ಮತ್ತೆ ಹೇಳಬೇಕೆಂದು ನನಗೆ ಅನಿಸಲಿಲ್ಲ. ನನ್ನ ಹುಕುಮನ್ನು ಇವರು ಮುರಿದಿದ್ದರು. ಸೈನಿಕ ಕಾಯದೆಯನ್ನು ಭಂಗಿಸಿದ್ದರು. ಆದುದರಿಂದ ಕೂಡಲೆ ಇವನ ಮೇಲೆ ಗುಂಡು ಹಾರಿಸಬೇಕೆಂದು ನನಗೆ ತೋರಿತು. ನಾನು ಗುಂಡು ಹಾರಿಸಲು ಪ್ರಾರಂಭಿಸಿದ ಕೂಡಲೆ ಜನರು ಅತ್ತಿತ್ತ ಚದರುತ್ತಿದ್ದರು. ಜನರು ನನ್ನನ್ನೂ ನನ್ನ ಸೈನಿಕರನ್ನೂ ಇದುರಿಸಲು ಪ್ರಯತ್ನಿಬಹುದೆಂದು ನನಗೆ ತೋರಿತು; ಇದೇನು ಕೇವಲ ಅಮೃತಸರದ ಪ್ರಶ್ನೆಯಲ್ಲವೆಂದೂ ವಿಸ್ತೃತವಾಗಿ ಪಸರಿಸಿದ ಅಂದೋಲನವೆ ಇದಾಗಿದೆಯೆಂದೂ ನನಗೆ ಅನಿಸಿತು. ಯಾವ ಅಧಿಕಾರಿಯನ್ನು ಕೇಳಬೇಕೆಂದರೆ ಯಾರೂ ಇರಲಿಲ್ಲ. ಮತ್ತೆ ಯಾರನ್ನೂ ಕೇಳುವದಕ್ಕೆ ತಡೆಯುವದು ಉಚಿತವೆಂದು ನನಗೆ ಅನಿಸಲಿಲ್ಲ. ಸೈನಿಕರ ದೃಷ್ಟಿಯಿಂದ ಕೂಡಲೆ ಗುಂಡು ಹಾರಿಸುವದೆ

ಉಚಿತವೆಂದು ನನಗೆ ಅನಿಸಿತು. ನಾನು ಗುಂಡು ಹಾರಿಸದೆ ಆ ಗುಂಪು ಚದರಬಹುದಿತ್ತು. ಆದರೂ ಗುಂಪನ್ನು ಚದರಿಸುವದಕ್ಕಾಗಿಯೆ ನಾನು ಗುಂಡು ಹಾರಿಸಿದೆ. ಒಟ್ಟಿಗೆ ೧೬೫೦ ಏಟುಗಳಾದ ನಂತರ ನಾನು ಗುಂಡಿ ನೇಟನ್ನು ನಿಲ್ಲಿಸಿದೆ; ನಡುನಡುವೆ ಗುಂಡಿನೇಟನ್ನು ನಿಲ್ಲಿಸಿ, ಜನರು ದಟ್ಟವಾಗಿರುವಲ್ಲಿಯೆ ಗುಂಡು ಹಾರಿಸಲು ಹೇಳಿದೆ; ಜನಸಂದಣಿಯು ಅಲ್ಲಿ ಕೂಡಿದ್ದಕ್ಕಾಗಿ ತಕ್ಕ ಪ್ರಾಯಶ್ಚಿತ್ತವು ದೊರೆಯಲೆಂದೇ ನಾನು ಹೀಗೆ ಮಾಡಿದೆನು.'' ಜಾಲಿಯಾನವಾಲಾಬಾಗಿನಲ್ಲಿಯ ದೃಶ್ಯವನ್ನು ಅಟ್ಟದ ಮೇಲೆ ನಿಂತು ನೋಡಿದ ಲಾಲಾ ಗಿರಿಧರಲಾಲರು ಹೀಗೆ ಹೇಳಿದರು. ''ನೂರಾರು ಜನರು ನಿಂತ ಸ್ಥಳದಲ್ಲಿಯೆ ಸತ್ತುದ್ದನ್ನು ನೋಡಿದೆನು. ಜನರು ಕೆಲವು ಚಿಕ್ಕ ಬಾಗಿಲುಗಳೊಳಗಿಂದ ಓಡಿಹೋಗುತ್ತಿದ್ದರು; ಆ ಸ್ಥಳಗಳಲ್ಲಿಯೆ ಎಲ್ಲಕ್ಕೂ ಹೆಚ್ಚು ಗುಂಡಿನ ಹೊಡೆತವಾಯಿತು; ಹೊರಗೆ ಹೋಗಲು ನಾಲ್ಕೈದೆ ಚಿಕ್ಕ ಜಾಗೆಗಳಿದ್ದವು. ಅಲ್ಲಿ ಗುಂಡಿನ ಮಳೆಯೆ ಆದಂತಾಯಿತು. ಕೆಲವರು ಓಡುವವರ ಕಾಲ್ಕೆಳಗೆ ಸಿಕ್ಕು ಸತ್ತು ಹೋದರು. ನೆತ್ತರವಂತೂ ತೆರಪಿಲ್ಲದೆ ಹರಿಯುತ್ತಿತ್ತು. ನೆಲದ ಮೇಲೆ ಬಿದ್ದವರ ಮೇಲೆ ಕೂಡ ಗುಂಡು ಹಾರಿಸಿದರು... ಆನಂತರ ನಾನು ಹೋಗಿ ನೀರು ಕೊಟ್ಟೆ. ಸಾಧ್ಯವಿದ್ದಂತೆ ನೆರವಾದೆ... ಕೆಲವೆಡೆಗಳಲ್ಲಿಯಂತೂ ಜನರು ಗುಂಪು ಗುಂಪಾಗಿಯೆ ಓಡಿಹೋಗುತ್ತಿರುವಾಗ ದಾರಿಯಲ್ಲಿಯೆ ಸತ್ತುಬಿದ್ದರು. ಅಂತೂ ಅಮೃತಸರದ ಜನರು ವೈಶಾಖಿ ಜಾತ್ರೆಯನ್ನು ಜರುಗಿಸಿದುದು ಈ ತರದಿಂದ!''

೧೪ನೆಯ ತಾರೀಖಿನ ದಿನ ಎಲ್ಲ ಕಡೆಗೂ ಶಾಂತತೆಯಿತ್ತು. ೧೫ ತಾರೀಖಿನ ದಿನ ದಂಡಿನಾಳ್ಗೆಯು ಪ್ರಾರಂಭವಾಯಿತು. ೯ನೆಯ ಜೂನದ ವರೆಗೆ ಅದು ಅಮಲಿನಲ್ಲಿತ್ತು. ಸೈನ್ಯದಾಳ್ಗೆಯಲ್ಲಿ ಅನೇಕ ತರದ ತೊಂದರೆಗಳನ್ನು ಜನರು ಸಹಿಸಬೇಕಾಯಿತು. ಅವುಗಳಲ್ಲಿ ಕೆಲವನ್ನು ಮಾತ್ರ ಈ ಕೆಳಗೆ ಕೊಟ್ಟಿದೆ.

ಶೆರವುಡ ಎಂಬ ಹೆಣ್ಣುಮಗಳ ಮೈಮೇಲೆ ಅಮೃತಸರದ ಒಂದು ಓಣಿಯಲ್ಲಿ ಜನರು ಏರಿ ಹೋದ ಸಂಗತಿಯನ್ನು ಮೇಲೆ ಕಾಣಿಸಿದೆ. ಆ ಓಣಿಯೊಳಗಿಂದ ಹೋಗುವವರೆಲ್ಲರು ಹೊಟ್ಟೆ ಹೊಸೆದು ಹೋಗಬೇಕೆಂದು

ಒಂದು ಹುಕುಮವು ಹೊರಡಿಸಲ್ಪಟ್ಟಿತು. ಒಟ್ಟಿಗೆ ಆ ಓಣಿಯೊಳಗಿಂದ ೫೦ ಜನರು ಹೊಟ್ಟೆ ಹೊಸೆದು ಹೋಗಬೇಕಾಯಿತು.

ಪ್ರತಿಯೊಬ್ಬನು ಇಂಗ್ಲಿಷ ಅಧಿಕಾರಿಗಳಿಗೆ ಎದ್ದು ನಿಂತು ಸಲಾಮವು ಮಾಡಬೇಕೆಂದು ಇನ್ನೊಂದು ಹುಕುಂ ಹೊರಡಿಸಲ್ಪಟ್ಟಿತ್ತು. ಈ ಹುಕುಂ ಮನ್ನಿಸದಿದ್ದವರಿಗೆ ಘಟಕಿ ಶಿಕ್ಷೆಯಾಗುತ್ತಿತ್ತು. ಎಷ್ಟೋ ಜನರಿಗೆ ಘಟಕಿ ಶಿಕ್ಷೆಯಾಯಿತು. ಕೆಲವು ವಕೀಲರು ಸ್ಪೆಶಲ ಕಾನಸ್ಟೇಬಲರಾಗಿ ದುಡಿಯಬೇಕೆಂದೂ ಹುಕುಮವು ಹೊರಟಿತು. ಒಟ್ಟಿನಲ್ಲಿ ೯೩ ವಕೀಲರು ಈ ರೀತಿ ಸ್ಪೆಶಲ ಕಾನಸ್ಟೇಬಲರಾಗಬೇಕಾಯಿತು.

ಏಪ್ರಿಲ ೧೨ನೆಯ ತಾರೀಖಿನಿಂದಲೆ ಅನೇಕರನ್ನು ಸಂಶಯದಿಂದ ಹಿಡಿಯಹತ್ತಿದರು. ೬೨ ವರ್ಷದ ಮುದಕರೂ ಸೀನಿಯರ ಅಸಿಸ್ಟಂಟ ಸರ್ಜನರೂ ಆದ ಡಾ. ಕೇದಾರನಾಥರನ್ನು ಹಿಡಿದು ತೊಂದರೆ ಕೊಟ್ಟು ವಾರದ ನಂತರ ಬಿಟ್ಟುಬಿಟ್ಟರು.

**ಲಾಹೋರಿ**ನಲ್ಲಿಯೂ ದಂಡಿನಾಳ್ಗೆಯು ಸಾರಲ್ಪಟ್ಟಿತ್ತು. ಅಲ್ಲಿಯ ವ್ಯವಸ್ಥೆಯನ್ನು ಕರ್ನಲ ಜಾನಸನರು ನೋಡುತ್ತಿದ್ದರು. ಒಟ್ಟಿಗೆ ೨೭೭ ಜನರ ವಿಚಾರಣೆಯಾಗಿ ೨೦೧ ಜನರಿಗೆ ಶಿಕ್ಷೆಯಾಯಿತು. ಸಮರಿ ಕೋರ್ಟಿನವರು ೬೬ ಜನರಿಗೆ ಕೂಡಿ ೮೦೦ ಘಟಕಿಗಳನ್ನು ಕೊಡಬೇಕೆಂದು ಶಿಕ್ಷೆಯನ್ನು ವಿಧಿಸಿದರು. ದಂಡಿನಾಳ್ಗೆಯ ನೋಟೀಸುಗಳನ್ನು ಸಂಶಯ ಬಂದ ಮನೆಗೆ ಅಂಟಿಸಿ ಅವುಗಳನ್ನು ೨೪ ತಾಸು ಕಾಯಬೇಕೆಂದು ವಿಧಿಸಲ್ಪಟ್ಟಿತು. ಸನಾತನ ಧರ್ಮ ಕಾಲೇಜ ಮೇಲಿನ ನೋಟೀಸು ಹರಿದು ಹೋದದ್ದರಿಂದ ೫೦೦ ವಿದ್ಯಾರ್ಥಿಗಳನ್ನೂ, ಎಲ್ಲ ಪ್ರಿನ್ಸಿಪಾಲರನ್ನೂ ಪ್ರೊಫೆಸರರನ್ನೂ ಕೈದು ಮಾಡಿ ಪ್ರಿನ್ಸಿಪಾಲನಿಂದ ಆ ಮುಂದೆ ನೋಟೀಸುಗಳು ಒಳ್ಳೆ ರೀತಿಯಿಂದ ಕಾಯಲ್ಪಡುವವೆಂದು ವಚನ ತೆಗೆದುಕೊಂಡು ಕರ್ನಲ ಜಾನಸನನು ಬಿಟ್ಟನು. ದಯಾನಂದ ಅಂಗ್ಲೊ ವ್ಹರ್ನ್ಯಾಕ್ಯುಲರ ಕಾಲೇಜ, ದಯಾಳಸಿಂಗ ಕಾಲೇಜ, ಮತ್ತು ಮೇಡಿಕಲ್ ಕಾಲೇಜಿನ ವಿದ್ಯಾರ್ಥಿಗಳು ದಿನಾಲು ಮುಂಜಾನೆ ೭, ೧೧, ಸಾಯಂಕಾಲ ೩ ಮತ್ತು ೭॥ ಗಂಟೆಗೆ ಒಂದು ಅಂದರೆ ೧೭ ಮೈಲು

ದಿನಾಲು ನಡೆದು ಬಂದು ಹಾಜರಿ ಕೊಟ್ಟು ಹೋಗಬೇಕೆಂದು ಅಪ್ಪಣೆ ಯನ್ನು ವಿಧಿಸಿದನು. ಏನೂ ಕಾರಣವಿಲ್ಲದಲೆ ಅನೇಕ ವಿದ್ಯಾರ್ಥಿಗಳನ್ನು ಕಾಲೇಜುಗಳಿಂದ ಹೊರಗೆ ತೆಗೆಯಿಸಿದನು. ಇದೂ ಅಲ್ಲದೆ ಅನೇಕ ಜನರಿಗೆ ಅನೇಕ ರೀತಿಯಿಂದ ತೊಂದರೆಯನ್ನು ಕೊಟ್ಟನು.

**ಕಾಸೂರು** ಲಾಹೋರ ಜಿಲ್ಹೆಯಲ್ಲಿಯ ೨೪ ಸಾವಿರ ವಸತಿಯ ವ್ಯಾಪಾರ ಪಟ್ಟಣವು. ಗಾಂಧಿಯವರನ್ನೂ, ಸತ್ಯಪಾಲ ಮತ್ತು ಕಿಚಲೂ ಅವರನ್ನೂ ಹಿಡಿದ ಸುದ್ದಿಯು ಅಲ್ಲಿಗೆ ಏಪ್ರಿಲ ೧೧ನೆಯ ತಾರೀಖಿಗೆ ಮುಟ್ಟಿತು ಆ ದಿನ ಹರತಾಳವಾಯಿತು. ಮರುದಿನ ಜನರಲ್ಲಿ ಕ್ಷೋಭವು ಉಂಟಾಗಿ ಜನರು ರೇಲ್ವೆ ಸ್ಟೇಶನ್ನಿಗೆ ಹೋಗಿ ಇಬ್ಬರು ಯುರೋಪಿಯನ್ ಸೈನಿಕರನ್ನು ಕೊಂದರು. ಅನಂತರ ರೆವ್ಹೆನ್ಯೂ ಆಫಿಸಿಗಳಿಗೆ ಹೋಗಿ ಅವನ್ನು ಸುಟ್ಟು ಬಿಟ್ಟರು. ೧೬ನೆಯ ತಾರೀಖಿನ ದಿನ ದಂಡಿನ ಆಳ್ವಿಯು ಸಾರಲ್ಪಟ್ಟಿತು. ಕರ್ನಲ್ ಮ್ಯಾಕ್ರೆ ಮತ್ತು ಕ್ಯಾಪ್ಟನ್ ಡೌಟನ್ನರು ಮೇಲಾಳ್ವಿಯನ್ನು ಮಾಡುತ್ತಿದ್ದರು. ಒಟ್ಟಿನಲ್ಲಿ ೧೭೨ ಜನರು ಹಿಡಿಯಲ್ಪಟ್ಟರು. ಅವರಲ್ಲಿ ೫೧ ಮಂದಿಗೆ ಶಿಕ್ಷೆಯಾಯಿತು. ಮೆ ೧ನೆಯ ತಾರೀಖಿನ ದಿನದ ಕಾಸೂರಿನ ಎಲ್ಲ ಗಂಡಸರನ್ನೂ ರೇಲ್ವೆ ಸ್ಟೇಶನ್ನಿಗೆ ಕರೆದು ಎರಡು ಗಂಟೆಯವರೆಗೆ ಬಿಸಿಲಿನಲ್ಲಿ ಕೂಡ್ರಿಸಿ ಅನಂತರ ಹಾಗೆಯೆ ಬಿಟ್ಟುಬಿಟ್ಟರು. ಕಾಸೂರಿನ ೪೦ ಜನರಿಗೆ ೭೧೦ ಛಟಕಿಗಳು ಹೊಡೆಯಲ್ಪಟ್ಟವು. ಛಟಕಿಗಳನ್ನು ಹೊಡೆಯುವದಕ್ಕಾಗಿ ಸ್ಟೇಶನ್ನಿನ ಪ್ಲ್ಯಾಟಫಾರ್ಮಿನ ಮೇಲೆಯೆ ಕಂಬವನ್ನು ಕಟ್ಟಿದ್ದರು. ಸಾಹೇಬರಿಗೆ ಸಲಾಮು ಹೊಡೆಯದೆಯಿದ್ದವರಿಗೆ ಮೂಗು ನೆಲಕ್ಕೆ ತಿಕ್ಕೆಂದು ಹುಕುಮು ಮಾಡುತ್ತಿದ್ದರು. ಸಾರ್ವಜನಿಕ ಜಾಗೆಯಲ್ಲಿ ಫಾಸಿ ಕಂಬಗಳನ್ನು ನಿಲ್ಲಿಸಿದ್ದರು.

**ಗುಜರಾಣವಾಲಾ** ಎಂಬ ಪಟ್ಟಣದಲ್ಲಿ ೧೨ನೆಯ ತಾರೀಖಿನ ವರೆಗೆ ಏನೂ ಗೊಂದಲವಿದ್ದಿಲ್ಲ. ಲಾಹೋರ ಮತ್ತು ಅಮೃತಸರದ ಸುದ್ದಿಯನ್ನು ಕೇಳಿ ೧೩ನೆಯ ತಾರೀಖಿನ ದಿನ ಹರತಾಳವಾಯಿತು. ೧೪ನೆಯ ತಾರೀಖಿನ ದಿನ ಅಮೃತಸರದಿಂದ ಬಂದವರು ಜಾಲಿಯಾನವಾಲಾಬಾಗಿನ ಸುದ್ದಿಯನ್ನು ಹೇಳಿದರು. ಜನರ ಗುಂಪಿನ ಮೇಲೆ ಪೋಲಿಸರು ಗುಂಡು ಹಾಕಿದರು. ಜನರು ತಲೆತಿರುಗಿ ಚರ್ಚ, ಪೋಷ್ಟ ಆಫೀಸ, ಕೋರ್ಟು ಕಚೇರಿ,

ರೇಲ್ವೆ ಸ್ಟೇಶನಗಳನ್ನು ಸುಟ್ಟರು. ಅದೇ ದಿನ ಮಧ್ಯಾಹ್ನ ೩ ಗಂಟೆಯ ಸುಮಾರಿಗೆ ಕೆಲವು ವಿಮಾನಗಳು ಬಂದು ಜನರ ಮೇಲೆ ವಿಮಾನಿನಿಂದ ಬಾಂಬುಗಳನ್ನು ಒಗೆದರು. ವಿಮಾನಿನೊಳಗಿದ್ದ ಮಶೀನಗನ್ನಿನೊಳಗಿಂದಲೆ ಜನರ ಮೇಲೆ ಗುಂಡು ಹಾಕಿದರು. ಒಟ್ಟಿಗೆ ೧೨ ಜನರು ಸತ್ತರು, ೨೪ ಜನರಿಗೆ ಗಾಯವಾಯಿತು. ಪಂಜಾಬದಲ್ಲಿಯ ವಜೀರಾಬಾದ, ನಿಜಾಮಾಬಾದ, ಅಕಾಲಗಡ, ರಾಮನಗರ, ಹಫೀಝಾಬಾದ, ಸಾಂಗ್ಲಾಹಿಲ್ ಮುಂತಾದ ಸ್ಥಳಗಳಲ್ಲಿಯೂ ದಂಡಿನಾಳ್ಗೆಯ ಅನಾಹುತಗಳಾದವು. ಚಿಕ್ಕ ಬಾಲಕರಿಗೂ ಕರಿನೀರಿನ ಶಿಕ್ಷೆಗಳಾದವು. ಪಂಜಾಬದಲ್ಲಿ ನಾಂದ ದಂಡಿನಾಳ್ಗೆಯಲ್ಲಿ ಒಟ್ಟಿನಲ್ಲಿ ೧೦೮ ಜನರಿಗೆ ಗಲ್ಲಿನ ಶಿಕ್ಷೆಯಾಯಿತು.

ದಂಡಿನಾಳ್ಗೆಯಲ್ಲಿಯ ಶಿಕ್ಷಾಸತ್ರದ ಕಲ್ಪನೆಯು ಲಾಲಾಲಜಪತರಾಯರ ಭಾಷಣದೊಳಗಿನ ಈ ಮುಂದಿನ ಅವತರಣಿಕೆಯಿಂದ ಗೊತ್ತಾಗುವದು. "ಕಾಸೂರಿನಲ್ಲಿ ಎರಡು ಯುರೋಪಿಯನ್ನರನ್ನು ಕೊಂದುದಕ್ಕಾಗಿ ೧೧ ಜನರಿಗೆ ಗಲ್ಲಿನ ಶಿಕ್ಷೆ, ೩ ಜನರಿಗೆ ಕರಿನೀರಿನ ಶಿಕ್ಷೆಯಾಯಿತು. ಲಾಹೋರಿನಲ್ಲಿ ಒಬ್ಬನು ಪೋಲಿಸನನ್ನುದ್ದೇಶಿಸಿ "ತುಂ ಹಮಾರಾ ಭಾಯಿ ಹಮಾರೆ ಹಿ ಸಾತ ಶಾಯಿದ ಹೋ" ಎಂದು ಕೂಗಿದ್ದಕ್ಕೆ ಕರಿನೀರಿನ ಶಿಕ್ಷೆಯಾಯಿತು. ಗುಜರಾಣವಾಲಾದಲ್ಲಿ ಪಟವಾರ್ಖಾನ ಇಮಾರತಿಯನ್ನು ಸುಟ್ಟುದಕ್ಕಾಗಿ ಮೂವರಿಗೆ ಗಲ್ಲಿನ ಶಿಕ್ಷೆ, ಅನೇಕರಿಗೆ ಕರಿನೀರಿನ ಶಿಕ್ಷೆಯಾಯಿತು. ಹಫೀಸಾಬಾದಿನಲ್ಲಿ ಲೆಫ್ಟಿನೆಂಟ ಟಾಟಮ್‌ರ ಮೇಲೇರಿ ಹೋದುದಕ್ಕಾಗಿ ನಾಲ್ಕು ಜನರಿಗೆ ಗಲ್ಲಿನ ಶಿಕ್ಷೆ, ೧೫ ಜನರಿಗೆ ಕರಿನೀರಿನ ಶಿಕ್ಷೆಯಾಯಿತು. ನಿಜಾಮಾಬಾದಿನಲ್ಲಿ ಯಾವ ಕೊಲೆಯೂ ಸಂಭವಿಸದಿದ್ದರೂ ನಾಲ್ಕು ಜನರಿಗೆ ಗಲ್ಲಿನ ಶಿಕ್ಷೆ ೮ ಜನರಿಗೆ ಕರಿನೀರಿನ ಶಿಕ್ಷೆ, ನಾಲ್ವರಿಗೆ ೫ರಿಂದ ೧೦ ವರ್ಷಗಳವರೆಗೆ ಶಿಕ್ಷೆ, ಇನ್ನೂ ನಾಲ್ವರಿಗೆ ೨೦ ಫಟಕಿಗಳು ಹೀಗೆ ಶಿಕ್ಷೆಗಳು ವಿಧಿಸಲ್ಪಟ್ಟವು. ಶೆರವುಡ್ ಎಂಬ ಯುರೋಪಿಯನ್ನ ಹೆಣ್ಣುಮಗಳ ಮೇಲೆ ಏರಿಹೋದಕ್ಕಾಗಿ ೭ ಜನರಿಗೆ ಗಲ್ಲಿನ ಶಿಕ್ಷೆ ೮ ಜನರಿಗೆ ಕರಿನೀರಿನ ಶಿಕ್ಷೆಯಾಯಿತು. ನ್ಯಾಶನಲ್ ಬ್ಯಾಂಕಿನಲ್ಲಿ ಆದ ಕೊಲೆಗಾಗಿ ೨೦ ಜನರಿಗೆ ಗಲ್ಲಿನ ಶಿಕ್ಷೆಯಾಯಿತು. ಮಿಸೆಸ್ ಇಸ್ಟೆನ್ ಇವರನ್ನು ಹೊಡೆಯುವ ಪ್ರಯತ್ನ

ಮಾಡಿದ್ದಕ್ಕಾಗಿ ೬ ಜನರಿಗೆ ಗಲ್ಲಿನ ಶಿಕ್ಷೆ ೭ ಜನರಿಗೆ ಕರಿನೀರಿನ ಶಿಕ್ಷೆಯಾಯಿತು. ಈ ರೀತಿ ದಂಡಿನ ಆಳ್ಗೆಯು ಕಾಲಕ್ಕೆ ಕಠೋರ ಶಿಕ್ಷೆಗಳಾದವು. ಎರಡು ತಿಂಗಳ ನಂತರ ದಂಡಿನಾಳ್ಗೆಯು ನಿಂತಿತು. ಮುಂದೆ ಮಾಯಕಲ್ ಒಡ್‌ವಾಯರರು ಸೇವಾನಿವೃತ್ತರಾಗಿ ಅವರ ಜಾಗೆಯಲ್ಲಿ ಎಡ್ವರ್ಡ ಮ್ಯಾಕ್ಲಾಗನ್ನರು ಬಂದನಂತರ ಇವೆಲ್ಲ ಶಿಕ್ಷೆಗಳು ಕಡಿಮೆ ಮಾಡಲ್ಪಟ್ಟವು. ೧೮ ಜನರು ಗಲ್ಲಿಗೇರಿಸಲ್ಪಟ್ಟರು. ಶಿಕ್ಷೆ ಹೊಂದಿದವರಲ್ಲಿ ೩೮ ಜನರನ್ನು ಸೆರೆಯಲ್ಲಿಟ್ಟು ೧೯೧೯ರ ಡಿಶೆಂಬರದ ಕೊನೆಯ ಸುಮಾರಕ್ಕೆ ಬಿಟ್ಟುಬಿಟ್ಟರು.

ಪಂಜಾಬದಲ್ಲಿ ನಡೆದ ದಂಡಿನ ಆಳ್ಗೆಯ ವಿಚಾರವನ್ನು ಮಾಡುವದಕ್ಕಾಗಿ ಸರಕಾರದವರು ಲಾರ್ಡಹಂಟರರ ಅಧ್ಯಕ್ಷತೆಯಲ್ಲಿ ಒಂದು ಕಮೀಟಿಯನ್ನು ನೇಮಿಸಿದರು. ಆದರೆ ಆ ಕಮೀಟಿಯ ವಿಚಾರವು ಅಸಮಾಧಾನಕಾರಕವಾದುದರಿಂದ ಕಾಂಗ್ರೆಸ್ಸಿನವರು, ಮಹಾತ್ಮಾಗಾಂಧಿ, ಸಿ. ಆರ್. ದಾಸ, ಬ್ಯಾರಿಸ್ಟರ ಮುಕುಂದರಾವ ಜಯಕರ, ಅಬ್ಬಾಸ್ತಯಬ್ಜಿ, ಪಂಡಿತ ಮದನಮೋಹನ ಮಾಲವೀಯಾ, ಸಂತಾನಮ್, ಮುಂತಾದವರನ್ನೊಳಗೊಂಡ ಕಮೀಟಿಯನ್ನು ನೇಮಿಸಿದರು. ಈ ಕಮೀಟಿಯ ಕಾರ್ಯವು ೧೭ನೆಯ ನೊವ್ಹೆಂಬರ ೧೯೧೯ನೆಯ ದಿನ ಪ್ರಾರಂಭವಾಯಿತು.

ಈ ಮೊದಲೆ ಜುಲೈ ೨೧ನೆಯ ತಾರೀಖಿನ ದಿನ ಮಹಾತ್ಮಾಗಾಂಧಿಯವರು ಸತ್ಯಾಗ್ರಹ ಚಳವಳಿಯನ್ನು ತುರ್ತಕ್ಕೆ ನಿಲ್ಲಿಸಿದೆವೆಂದು ಜಾಹೀರಪಡಿಸಿದರು. ಪಂಜಾಬದಲ್ಲಿ ದಂಡಿನಾಳ್ಗೆಯನ್ನು ಸಾರಿದ್ದರಿಂದ ವ್ಹಾಯಿಸರಾಯರ ಕಾರ್ಯಕಾರಿ ಮಂಡಲದ ಸಭಾಸದರಾದ ಸರ ಶಂಕರನ ನಾಯರರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟರು:

# ಐದನೆಯ ಭಾಗ

**ಅಸಹಕಾರದ ಆಂದೋಲನವು (೧೯೨೦-೧೯೨೨)**

(೭೨) **ಖಿಲಾಫತ ಪ್ರಕರಣವು:**—೧೯೨೦ನೆಯ ಇಸ್ವಿಯ ಪ್ರಾರಂಭಕ್ಕೆ ಮುಸಲ್ಮಾನ ಸಮಾಜದಲ್ಲಿ ಅಲ್ಲೋಲಕಲ್ಲೋಲವನ್ನು ಮಾಡಿಬಿಟ್ಟ ಪ್ರಶ್ನೆಯೆಂದರೆ ಖಿಲಾಫತ ಪ್ರಕರ್ಣವು. ಖಲೀಫನೆಂದರೆ ಮುಸಲ್ಮಾನರ ಧರ್ಮಗುರು. ತುರ್ಕಸ್ತಾನದ ಸುಲ್ತಾನನೇ ಮುಸಲ್ಮಾನರ ಖಲೀಫನಾಗಿದ್ದನು. ಖಲೀಫನು ತನ್ನ ಧಾರ್ಮಿಕ ಕರ್ತವ್ಯವನ್ನು ಯೋಗ್ಯರೀತಿಯಿಂದ ಮಾಡಬೇಕಾದರೆ ಅವನಿಗೆ ಇಂತಿಷ್ಟು ರಾಜ್ಯವು ಇರಲೇಬೇಕೆಂದು ಧಾರ್ಮಿಕ ನಿರ್ಬಂಧನೆಯಿತ್ತು. ಮಹಾಯುದ್ಧದ ಪೂರ್ವದ ತುರ್ಕಸ್ತಾನದ ರಾಜ್ಯ ವಿಸ್ತಾರದಲ್ಲಿ ಯಾವದೆ ರೀತಿಯಿಂದ ಕಡಿಮೆಯಾಗಬಾರದೆಂದು ಮುಸಲ್ಮಾನರ ಆಗ್ರಹವಿತ್ತು. ಅದು ಅಲ್ಲದೆ ಝುಾಝುರುತ್‌ಉಲ್ ಆರಬೆ ಅಂದರೆ ಟೈಗ್ರಿಸ್ ಮತ್ತು ಯುಫ್ರೆಟಿಸ್ ನದಿಗಳ ವರೆಗಿನ ಹೆಜ್ಜಾಜ, ಎಮಿನ್‌ನೆಜ್ ಸಿರಿಯಾ ಪ್ಯಾಲಿಸಟಾಯನ್ ಮೇಸೋಪೊಟಿಮಿಯಾ ಇವೆಲ್ಲವುಗಳನ್ನೊಳಗೊಂಡ ಅರಬಸ್ತಾನವು ಮುಸಲ್ಮಾನೀ ಆಡಳಿತೆಯ ವಶಕ್ಕೇ ಇರಬೇಕೆಂದು ಮುಸಲ್ಮಾನರ ಧಾರ್ಮಿಕ ಅರ್ಪಣೆಯಿತ್ತು. ಇದೂ ಅಲ್ಲದೆ ಮಕ್ಕಾ ಮದಿನಾ ಮತ್ತು ಜರುಸಲೇಮ 'ಸಜಾಫ, ಕರ್ಬಲಾ, ಕಝುಮೆ' ಸಮರಾ ಮತ್ತು ಬಗದಾದ ಇವೆಲ್ಲ ಧರ್ಮಸ್ಥಳಗಳು ಮುಸಲ್ಮಾನೀ ರಾಜ್ಯದ ಆಡಳಿತೆಯಲ್ಲಿಯೆ ಇರಬೇಕೆಂದು ಅವರ ಬೇಡಿಕೆಯಿತ್ತು. ಬ್ರಿಟಿಶ ಮುಖ್ಯ ಪ್ರಧಾನರಾದ ಲಾಯಿಡ ಜಾರ್ಜರು ೧೯೧೮ರಲ್ಲಿ "ಏಶಿಯಾ ಮೈನರ ಮತ್ತು ಥ್ರೇಸ ಇವೆರಡೂ ಸಂಪನ್ನ ಪ್ರಾಂತಗಳಲ್ಲಿ ಮುಖ್ಯವಾಗಿ ತುರ್ಕಿ ಜನರೇ ಇರುವರು. ಅವನ್ನು ತುರ್ಕಸ್ತಾನದಿಂದ ಕಸಕೊಳ್ಳುವದಕ್ಕಾಗಿ ನಾವೇನೂ ಹೋರಾಡುವದಿಲ್ಲ." ಎಂದು ವಚನವನ್ನಿತ್ತಿದ್ದರು. ಆದರೆ ಒಪ್ಪಂದದ ಸಮಯವು ಒದಗಿದಾಗ ಮಾತ್ರ ಥ್ರೇಸ ಪ್ರಾಂತವು ಗ್ರೀಸಕ್ಕೆ ಕೊಡಲ್ಪಟ್ಟಿತು. ಏಶಿಯಾದೊಳಗಿನ ತುರ್ಕಸ್ಥಾನ ಭಾಗವು ಫ್ರಾನ್ಸ ಮತ್ತು ಬ್ರಿಟಿನ್

ಇವೆರಡರ ಮೇಲಾಳ್ಕಿಗೆ ಕೊಡಲ್ಪಟ್ಟಿತು. ಇಂಗ್ಲಂಡ, ಫ್ರಾನ್ಸ, ಇಟಲಿ ಅಮೇರಿಕಾ ಇವೆಲ್ಲ ರಾಷ್ಟ್ರಗಳ ಪ್ರತಿನಿಧಿಗಳೇ ತುರ್ಕಸ್ಥಾನದಲ್ಲಿ ಮೇಲಾಳ್ಕಿಯನ್ನು ಮಾಡಬೇಕೆಂದು ಗೊತ್ತಾಯಿತು. ಈ ರೀತಿ ವಚನಭಂಗವನ್ನು ಮಾಡಿ ತುರ್ಕಸ್ಥಾನ ಸಾಮ್ರಾಜ್ಯವನ್ನು ಚೂರು ಚೂರಾಗಿ ಮಾಡಲು ಬ್ರಿಟಿಶ ಮುಖಂಡರು ಅನುವಾದರು.

ಖಿಲಾಫದ ವಿಷಯದಲ್ಲಿ ೧೯೧೯ರ ಜಾನೇವರಿ ೧ನೆಯ ತಾ॥ ದಿನವೆ ಹಿಂದುಸ್ಥಾನದ ಮುಸಲ್ಮಾನರ ವತಿಯಿಂದ ಬ್ರಿಟಿಶ ಮುಖ್ಯ ಪ್ರಧಾನನಿಗೆ ಒಂದು ನಿವೇದನವು ಕಳಿಸಲ್ಪಟ್ಟಿತ್ತು. ಡಿಶೆಂಬರದ ಕೊನೆಗೂ ಇದೇ ತರಹದ ವಿನಂತಿ ಪತ್ರವು ಕಳಿಸಲ್ಪಟ್ಟಿತು. ೧೯೧೯ರ ಡಿಸೆಂಬರದಲ್ಲಿ ಜರುಗಿದ ಖಿಲಾಫತ ಪರಿಷತ್ತಿನಲ್ಲಿ ಪಾಸಾದ ನಿರ್ಣಯದಂತೆ ಮುಸಲ್ಮಾನೀ ಮುಖಂಡರ ಶಿಷ್ಟ ಮಂಡಳವು ವ್ಹಾಯಿಸರಾಯರನ್ನು ಕಂಡಿತು. ಅದರೆ ವ್ಹಾಯಿಸರಾಯರಿಂದ ಸಮಾಧಾನಕಾರಕವಾದ ಉತ್ತರವು ದೊರೆಯಲಿಲ್ಲ. ಅನಂತರ ಮಹಮ್ಮದಅಲಿ, ಸಯ್ಯದ ಹುಶೇನ, ಮೌಲಾನಾ ಸಯ್ಯದ ಸುಲೇಮಾನ ಮೌಲವಿ, ಮತ್ತು ಹಸನಮುಹಮ್ಮದ ಹಯಾತ, ಹೀಗೆ ನಾಲ್ಕು ಮುಸಲ್ಮಾನ ಮುಖಂಡರು ಮುಸಲ್ಮಾನೀ ಸಮಾಜದ ಪರವಾಗಿ ಇಂಗ್ಲಂಡಕ್ಕೆ ಹೋಗಿ, ಭಾರತಮಂತ್ರಿಗಳ ಪರವಾಗಿ ಫಿಶರ ಮತ್ತು ಮುಖ್ಯ ಮಂತ್ರಿಗಳಾದ ಲಾಯಿಡ ಜಾರ್ಜ ಇವರನ್ನು ಕಂಡರು. ಅವರಿಂದಲೂ ಯಾವದೇ ತರಹದ ಸಮಾಧಾನಕಾರಕವಾದ ಉತ್ತರ ದೊರೆಯಲಿಲ್ಲ. ಲಂಡನ ಮತ್ತು ಪ್ಯಾರಿಸದಲ್ಲಿಯೂ, ಸಭೆಗಳನ್ನೇರ್ಪಡಿಸಿ ಖಿಲಾಪತದ ಶಿಷ್ಟಮಂಡಳದ ಕಾರ್ಯಕ್ಕೆ ಅನುಕೂಲವಾದ ಠರಾವುಗಳು ಪಾಸಾದವು. ಅದೆ ಸಮಯಕ್ಕೆ ಇಂಗ್ಲಂಡ ಫ್ರಾನ್ಸ, ಇಟಲಿ ಜಪಾನ ಮುಂತಾದ ಪ್ರಮುಖ ರಾಷ್ಟ್ರಗಳ ಪ್ರತಿನಿಧಿಗಳ ಸಭೆಯು ಸ್ಯಾನರಿಮೊದಲ್ಲಿ ಕೂಡಿತ್ತು. ಸಭೆಯೆದುರಿಗೆ ತಮ್ಮ ಬೇಡಿಕೆಗಳನ್ನು ಇಡಲು ಪರವಾನಿಗೆಯನ್ನು ಶಿಷ್ಟಮಂಡಳದವರು ಕೇಳಿದರು. ಆದರೆ ಪರವಾನಿಗೆಯು ಕೊಡಲ್ಪಡಲಿಲ್ಲ. ಮೇ ೧೫ನೆಯ ತಾರೀಖಿನ ದಿನ ತುರ್ಕಸ್ಥಾನದೊಡನೆ ಮಾಡಲ್ಪಡಬಹುದಾದ ಒಪ್ಪಂದದ ಕಲಮುಗಳು ಪ್ರಸಿದ್ಧಿಸಲ್ಪಟ್ಟವು. ಕಾನಸ್ಟಾಂಟಿನೋಪಲ್ ತುರ್ಕಸ್ಥಾನದ ವಶದಲ್ಲಿಯೆ ಉಳಿಯಬೇಕು. ಸ್ಮರ್ನಾದ ಕೆಲವು ಭಾಗಗಳು ತುರ್ಕಸ್ಥಾನದ ಛತ್ರದ

ಕೆಳಗೆ ಗ್ರೀಸದ ಮೇಲಾಳ್ಕೆಗೆ ಕೊಡಬೇಕು. ತುರ್ಕಸ್ತಾನದ ಆರ್ಮಿನೀಯನ್ ಜಿಲ್ಹೆಯ ಕೆಲವು ಭಾಗಗಳೂ ಥ್ರೇಸದ ಪೂರ್ವಭಾಗವೂ ಗ್ರೀಸಕ್ಕೆ ಕೊಡಲ್ಪಡಬೇಕು. ಸಿರಿಯಾ ಮೆಸಾಪೋಟೆಮಿಯಾ ಮತ್ತು ಪ್ಯಾಲಿಸಟಾಯಿನ ಇವೆಲ್ಲವೂ ಸ್ವತಂತ್ರ ಸಂಸ್ಥಾನಗಳಾದವು. ಆದರೆ ಕೆಲವು ಕಾಲಗಳ ವರೆಗೆ ಸಿರಿಯಾ ದೇಶವು ಫ್ರಾನ್ಸದ ಮೇಲಾಳ್ಕೆಗೂ, ಮೆಸಾಪೋಟಿಮಿಯಾ, ಪ್ಯಾಲಿಸಟಾಯಿನಗಳು ಬ್ರಿಟಿಶರ ಆಳ್ಕೆಗೂ ಒಳಪಟ್ಟಿರಬೇಕು. ಹೆಜ್ಯಾಜವು ಸ್ವತಂತ್ರ ಸಂಸ್ಥಾನವಾಗಿರಬೇಕು. ಈ ಮಾತುಗಳೆ ಮುಖ್ಯವಾಗಿ ಒಪ್ಪಂದದ ಕಲಮುಗಳಲ್ಲಿ ಅಡಕವಾಗಿದ್ದವು. ಈ ಕಲಮುಗಳಿಗೆ ಸಮರ್ಥನಪರವಾಗಿ ಹಿಂದುಸ್ತಾನ ಸರಕಾರದವರು ಮೇ ೧೫ನೆಯ ತಾರೀಖಿನ ದಿವಸ ಒಂದು ಪ್ರಕಟನೆಯನ್ನು ಹೊರಡಿಸಿದರು.

(೭೩) **ಪಂಜಾಬ ಅನಾಹುತಗಳ ವಿಚಾರಣೆಗಳ ಫಲಿತಾಂಶವು:**—೧೯೧೯ರ ನೋವ್ಹೆಂಬರ ತಿಂಗಳಲ್ಲಿ ನೇಮಿಸಲ್ಪಟ್ಟ ವಿಚಾರಣಾ ಮಂಡಳದವರು ೧೯೨೦ರ ಮಾರ್ಚಿನಲ್ಲಿ ತಮ್ಮ ವರದಿಯನ್ನು ಪ್ರಸಿದ್ಧಿಸಿದರು. ಅವರು ೧೭೦೦ ಜನರ ಸಾಕ್ಷಿಯನ್ನು ತೆಗೆದುಕೊಂಡಿದ್ದರು. ಎಲ್ಲ ಮಾತುಗಳನ್ನು ವಿಚಾರಿಸಿ ಅವರ ಅಭಿಪ್ರಾಯವು ಈ ಕೆಳಗಿನಂತಾಗಿತ್ತು. ಒಡ್ವಾಯರರ ಆಡಳಿತೆಯಿಂದ ಜನರಲ್ಲಿ ಕ್ಷೋಭವು ಉಂಟಾಗಿತ್ತು; ರೊಲೆಟ್ ಚಳವಳಿಯಿಂದ ಜನರ ಮನಸ್ಸಿನಲ್ಲಿ ಸರಕಾರದಲ್ಲಿರುವ ವಿಶ್ವಾಸಕ್ಕೆ ಧಕ್ಕೆ ತಟ್ಟಿತು. ಸತ್ಯಾಗ್ರಹ ಮತ್ತು ಹರತಾಳಗಳಿಂದ ಜನರಲ್ಲಿ ಚಟುವಟಿಕೆಗಳು ಹುಟ್ಟಿ ಹಿಂಸಾಮಯ ಪ್ರವೃತ್ತಿಗಳಿಗೆ ತಡೆಹಾಕಿ ಹೆಚ್ಚಿನ ಅನರ್ಥಗಳಿಂದ ಜನರನ್ನು ಉಳಿಸಿದವು. ಪಂಜಾಬದಲ್ಲಿ ಸರಕಾರವನ್ನು ತಳ್ಳುವ ಒಳಸಂಚು ಇರಲಿಲ್ಲ. ಗಾಂಧಿ, ಕಿಚುಲು, ಮತ್ತು ಸತ್ಯಪಾಲರನ್ನು ಹಿಡಿದದ್ದರಿಂದಲೆ ಗೊಂದಲವು ಹುಟ್ಟಿತು. ಅಮೃತಸರದಲ್ಲಿ ರೇಲ್ವೆಪೂಲಿನ ಮೇಲಿನ ಗುಂಡಿನೇಟುಗಳೇ ಜನರ ಅತ್ಯಾಚಾರಗಳ ಕಾರಣಗಳಾದವು. ಕಾರಣಗಳೇನೂ ಇದ್ದರೂ ಜನರ ಅತ್ಯಾಚಾರಗಳು ಗರ್ಹ್ಯವಾದವುಗಳು. ದಂಡಿನಾಳಿಗೆಗೆ ಕಾರಣಗಳೇ ಇದ್ದಿಲ್ಲ. ಕಾರಣವಿತ್ತೆಂದು ತಿಳಿದುಕೊಂಡರೂ, ಅದರ ಕಾಲಾವಧಿಯು ಮಿತಿಮೀರಿತು. ೫ ಜಿಲ್ಹೆಗಳಲ್ಲಿಯೂ, ದಂಡಿನ ಆಳ್ಕೆಯು ಅತ್ಯಂತ ಕ್ರೂರತರದ್ದಾಯಿತು. ಜ್ಯಾಲಿಯಾನವಾಲಾಬಾಗಿನಂತಹ ಕೊಲೆ

ಯೆಂದರೆ ಕೇವಲ ಅವಮಾನಸೂಚಕದ ಕೃತ್ಯವು. ದಂಡಿನಾಳ್ಗೆಯ ಕೋರ್ಟು ಗಳಲ್ಲಿ ನಿರಪರಾಧಿ ಜನರಿಗೂ ಕಾಟವಾಯಿತು. ಹೊಟ್ಟೆಯಿಂದ ಹೊಸೆ ಯುತ್ತ ಹೋಗಬೇಕೆಂಬ ಹುಕುಮು ಮತ್ತು ಇದೇ ತರಹದ ಹುಕುಮುಗಳು ಅವುಗಳನ್ನು ಹೊರಡಿಸಿದವರ, ನೈತಿಕ ಅಧಃಪಾತವನ್ನು ತೋರಿಸುತ್ತವೆ. ಇವೆಲ್ಲ ಅನ್ಯಾಯಗಳ ಪರಿಮಾರ್ಜನೆಯಾಗಬೇಕಾದರೆ ರೊಲೆಟ್ ಆಕ್ಟನ್ನು ಹಿಂತೆಗೆದುಕೊಳ್ಳಬೇಕು. ಒಡ್ವಾಯರನನ್ನೂ, ಡಾಯರ, ಜಾನ್ಸನ್, ಒಬ್ರಾಯನ್ ಬಾಸ್ವರ್ಥಸ್ಮಿಥ್, ಶ್ರೀರಾಮಸೂದ್, ಮತ್ತು ಮಲಿಕ ಸಾಹೇಬಖಾನ ಇವರೆಲ್ಲರನ್ನೂ ನೌಕರಿಯಿಂದ ತೆಗೆದುಹಾಕಬೇಕು. ನೀತಿವಿರುದ್ಧ ಕೃತ್ಯವನ್ನು ಮಾಡಿದ ಕೃತ್ಯಗಳನ್ನು ಕುರಿತು ವಿಚಾರಣೆ ಯಾಗಿ, ಆಯಾ ಅಧಿಕಾರಿಗಳನ್ನು ಕೆಲಸದಿಂದ ತೆಗೆಯಬೇಕು. ವ್ಹಾಯಿಸ ರಾಯರನ್ನು ತಿರುಗಿ ಕರೆದುಕೊಳ್ಳಬೇಕು. ಜನರಿಂದ ವಸೂಲಾದ ದಂಡ ವನ್ನು ತಿರುಗಿಕೊಡಬೇಕು. ಈ ತರಹದ ಸೂಚನೆಗಳನ್ನು ಕಾಂಗ್ರೆಸ ವಿಚಾರಣಾಮಂಡಳದವರು ಮಾಡಿದರು.

೧೯೨೦ ರ ಮೇ ತಿಂಗಳಲ್ಲಿ ಸರಕಾರೀ ಕಮಿಟಿಯವರು ತಮ್ಮ ವರದಿ ಯನ್ನು ಪ್ರಸಿದ್ಧಿಸಿದರು. ಸಾಮಾನ್ಯವಾಗಿ ಗಾಂಧಿಯವರ ಸತ್ಯಾಗ್ರಹ ಚಳವಳಿಯಿಂದಲೆ ಜನರಲ್ಲಿ ಕಾಯದೆಗಳನ್ನು ಉಲ್ಲಂಘಿಸುವ ಪ್ರವೃತ್ತಿಯು ಉಂಟಾಯಿತೆಂದೂ ಪಂಜಾಬದಲ್ಲಿಯ ರಿಕ್ರೂಟಿನ ಪದ್ಧತಿಗೂ ಜನರ ಅಸಂತೋಷಕ್ಕೂ ಏನೂ ಸಂಬಂಧವಿದ್ದಿಲ್ಲವೆಂದೂ ಹಿಂದುಸ್ತಾನ ಸರಕಾರ ದವರು ಯಾವ ದೋಷಕ್ಕೂ ಪಾತ್ರರಲ್ಲವೆಂದೂ ಕಮಿಟಿಯವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಪಂಜಾಬದಲ್ಲಿ ಜನರಿಂದಾದ ಅತ್ಯಾಚಾರಗಳು ಬಂಡಾಯದ ಸ್ವರೂಪವುಳ್ಳವಿದ್ದವೆಂದೂ, ಆ ಪರಿಸ್ಥಿತಿ ಯಲ್ಲಿ ದಂಡಿನ ಆಳ್ಗೆಯನ್ನು ಸಾರುವದೇ ಒಳ್ಳೆ ಉಪಾಯವಾಗಿತ್ತೆಂದೂ ಕಮಿಟಿಯ ಯುರೋಪಿಯನ್ ಅಧಿಕಾರಿಗಳ ಅಭಿಪ್ರಾಯವಾಗಿತ್ತು. ಕಮಿಟಿಯ ಹಿಂದಿ ಸಭಾಸದರು ದಂಡಿನಾಳ್ಗೆಯ ಅವಶ್ಯಕತೆಯಿದ್ದಿಲ್ಲ ವೆಂದು ತಮ್ಮ ಅಭಿಪ್ರಾಯವನ್ನು ಕೊಟ್ಟರು. ಈ ರೀತಿ ಅನೇಕ ಮಾತು ಗಳಲ್ಲಿ ಕಮಿಟಿಯ ಯುರೋಪಿಯನ್ ಮತ್ತು ಹಿಂದಿ ಅಧಿಕಾರಿಗಳಿಗೆ ಹಿಂದಿ ಸಭಾಸದರಲ್ಲಿ ಮತಭೇದವಿತ್ತು. ಅವೆಲ್ಲ ಸಂಗತಿಗಳನ್ನು ಇಲ್ಲಿ ಹೆಚ್ಚು ವಿಸ್ತಾರವಾಗಿ ಹೇಳುವದು ಸಾಧ್ಯವಿಲ್ಲ.

(೭೪) **ಅಸಹಕಾರದ ಪ್ರಾರಂಭವು:—** ಈ ಮೊದಲಿನಿಂದಲೆ ಸರಕಾರದವರು ಖಿಲಾಫತದ ವಿಷಯದಲ್ಲಿ ಮುಸಲ್ಮಾನರ ಸಮಾಧಾನವನ್ನು ಮಾಡದೆ ಹೋದರೆ ಅಸಹಕಾರವನ್ನು ಪ್ರಾರಂಭಿಸಬೇಕೆಂದು ಮಹಾತ್ಮಾ ಗಾಂಧಿಯವರು ಸೂಚನೆಯನ್ನು ಮಾಡಿದ್ದರು. ಮಾರ್ಚ ೧೦ನೆಯ ತಾ॥ ದಿವಸ ಈ ವಿಷಯದಲ್ಲಿ ನಿಶ್ಚಿತವಾದ ಪ್ರಕಟನೆಯನ್ನು ಮಹಾತ್ಮಾ ಗಾಂಧಿಯವರು ಹೊರಡಿಸಿದರು. ಅದರಲ್ಲಿ ಅವರು ಸರಕಾರದ ನೋಕರರು ತಮ್ಮ ನೋಕರಿಯನ್ನು ಬಿಡಬೇಕೆಂದು ಸೂಚಿಸಿದರು. ಎಪ್ರಿಲ ೬ ರಿಂದ ೧೩ರ ವರೆಗೆ ರಾಷ್ಟ್ರೀಯ ವಾರವು ಒಳ್ಳೇ ವಿಜೃಂಭಣೆಯಿಂದ ಜರುಗಿಸಲ್ಪಟ್ಟಿತು. ಮೆ ೨ನೆಯ ತಾ॥ ದಿವಸ ಆಲ್ ಇಂಡಿಯಾ ಕಾಂಗ್ರೆಸ ಕಮೀಟಿಯ ಸಭೆಯಲ್ಲಿ ಪಂಜಾಬ ಅತ್ಯಾಚಾರಗಳ ವಿಚಾರಣೆ ಮತ್ತು ಖಿಲಾಫತ ಇವೇ ಚರ್ಚೆಯ ಮುಖ್ಯ ವಿಷಯಗಳಾಗಿದ್ದವು. ಕಾಂಗ್ರೆಸವಿಚಾರಣಾಮಂಡಳದ ನಿರ್ಣಯಗಳು ಸ್ವೀಕರಿಸಲ್ಪಟ್ಟು ಜನರಲ್ ಡಾಯರ ಕರ್ನಲ್ ಜಾನ್ಸನ್ ಕರ್ನಲ್ ಒಬ್ರಾಯನ್, ಮತ್ತು ಬಾಸ್ವರ್ಥಸ್ಮಿಥ ಇವರ ಮೇಲೆ ಬ್ರಿಟಿಶ ನ್ಯಾಯಕೋರ್ಟಿನಲ್ಲಿ ವಿಚಾರಣೆಯಾಗಬೇಕೆಂದೂ ರೊಲೆಟ್ ಆಕ್ಟನ್ನು ರದ್ದು ಪಡಿಸಬೇಕೆಂದೂ ವ್ಹಾಯಸರಾಯರನ್ನು ತಿರುಗಿ ಕರೆಸಿಕೊಳ್ಳಬೇಕೆಂದೂ, ಸೂಚನೆಗಳು ಪಾಸಾದವು. ಹಂಟರ ಕಮೀಟಿಯ ವರದಿಯೂ ಅದರ ಮೇಲೆ ಸೆಕ್ರೆಟರಿ ಆಫ್‌ಸ್ಟೇಟ ಕೊಟ್ಟ ಅಭಿಪ್ರಾಯವೂ ನಿಷೇಧಿಸಲಾಯಿತು. ದಂಡಿನಾಳ್ಗೆಯಲ್ಲಿ ಶಿಕ್ಷೆ ಹೊಂದಿದವರಲ್ಲಿ ಇನ್ನೂ ಸೆರೆಮನೆಯಲ್ಲಿದ್ದ ೩೮ ಜನರನ್ನು ಬಿಡುಗಡೆಮಾಡಬೇಕೆಂದು ಸೂಚಿಸಲಾಯಿತು. ಖಿಲಾಫತದ ವಿಷಯದಲ್ಲಿ ಹಿಂದಿ ಮುಸಲ್ಮಾನರ ಬೇಡಿಕೆಗಳು ಮನ್ನಿಸಲ್ಪಡಬೇಕೆಂದು ನಿರ್ಣಯವು ಪಾಸಾಯಿತು. ಒಟ್ಟಿನಮೇಲೆ ವಿಚಾರಿಸಿದರೆ ಆಲ್‌ಇಂಡಿಯಾ ಕಾಂಗ್ರೆಸ ಅಧಿವೇಶನದಲ್ಲಿ ಜನತೆಯ ಮನಸ್ಸಿನಲ್ಲಿರುವ ಕ್ಷೋಭವು ಪೂರ್ಣ ಒಡಮೂಡಿತ್ತು. ಅಸಹಕಾರದ ಸೂಚನೆಯೂ ಈ ಸಭೆಯ ಎದುರಿಗೆ ಬಂದು ಅದರ ಪೂರ್ಣ ವಿಚಾರವನ್ನು ಮಾಡಲು ೧೫ನೆಯ ಸಪ್ಟಂಬರದೊಳಗಾಗಿ ಕಾಂಗ್ರೆಸ್ಸಿನ ಸ್ಪೇಶಲ್ ಅಧಿವೇಶನವನ್ನು ಕೂಡ್ರಿಸಬೇಕೆಂದು ಗೊತ್ತಾಯಿತು.

ಆದರೆ ಕಾಂಗ್ರೆಸ್ಸಿನ ಈ ಅಧಿವೇಶನವು ಕೂಡುವದಕ್ಕಿಂತ ಮೊದಲೆ ಅಸಹಕಾರದ ಚಳವಳಿಯು ಮುಂದುವರಿಯುಹತ್ತಿತ್ತು. ಜೂನ ೧–೨ ತಾ॥ ನಿನ ಖಿಲಾಫತ ಕಮಿಟಿಯ ಸಭೆಯು ಅಲ್ಲಾಬಾದಿನಲ್ಲಿಯಾಗಿ ಮುಸಲ್ಮಾನರ ಬೇಡಿಕೆಗಳು ಮನ್ನಿಸಲ್ಪಡದಿದ್ದರೆ ಅಸಹಕಾರವನ್ನು ಮೆಲ್ಲಮೆಲ್ಲಗೆ ಪ್ರಾರಂಭಿಸಬೇಕೆಂದು ಗೊತ್ತಾಯಿತು. ಖಿಲಾಫತ ಕಮಿಟಿಯ ಠರಾವಿನಂತೆ ೯೦ ಮುಸಲ್ಮಾನ ಮುಖಂಡರು ವ್ಹಾಯಿಸರಾಯರಿಗೆ ಒಂದು ಪತ್ರವನ್ನು ಬರೆದರು. ಮುಸಲ್ಮಾನರ ಬೇಡಿಕೆಗಳು ಮಾನ್ಯವಾಗದಿದ್ದರೆ, ೧ನೆಯ ಅಗಸ್ಟದಿಂದ ಅಸಹಕಾರವು ಪ್ರಾರಂಭಿಸಲ್ಪಡುವದೆಂದು ಅವರು ಈ ಪತ್ರದಲ್ಲಿ ಬರೆದರು.

ಅಗಸ್ಟ ೧ನೆಯ ತಾ. ದಿವಸ ಲೋಕಮಾನ್ಯ ಟಿಳಕರು ಇಹಲೋಕ ಯಾತ್ರೆಯನ್ನು ಮುಗಿಸಿದರು. ಆ ದಿನವೆ ಅಸಹಕಾರ ಚಳವಳಿಗೆ ಪ್ರಾರಂಭವಾಯಿತು. ಮಹಾತ್ಮಾ ಗಾಂಧಿಯವರು ವ್ಹಾಯಿಸರಾಯರಿಗೆ ಒಂದು ಪತ್ರವನ್ನು ಬರೆದು ಪಂಜಾಬದ ಅತ್ಯಾಚಾರಗಳ ವಿಷಯದಲ್ಲಿಯೂ, ಮುಸಲ್ಮಾನರ ಖಿಲಾಪತ ಪ್ರಕರಣದ ವಿಷಯದಲ್ಲಿಯೂ, ಸರಕಾರದವರು ತೋರಿಸಿದ ಅನುದಾರ ಧೋರಣವನ್ನು ಖಂಡಿಸಿ ತಮಗೆ ಆ ಮೊದಲು ಶಾಂತತಾ ಕಾರ್ಯಕ್ಕಾಗಿ ದೊರೆತ "ಕೈಸರ ಇ ಹಿಂದ" ಪದಕವನ್ನು ತಿರುಗಿ ಕಳಿಸಿದರು. ದೇಶದಲ್ಲೆಲ್ಲ ಆ ದಿನ ಸಭೆಗಳೂ ಹರತಾಳಗಳೂ ಆದವು. ಅನೇಕ ಪದವೀಧರರು ತಮ್ಮ ಪದವಿಗಳನ್ನು ತಿರುಗಿ ಕಳಿಸಿ ಕೊಟ್ಟರು. ಈ ರೀತಿ ಅಸಹಕಾರದ ಅಂದೋಲನಕ್ಕೆ ಪ್ರಾರಂಭವಾಯಿತು. ಆಗಿನಕಾಲದ ಅಸಹಕಾರದ ಮುಖ್ಯವಾದ ಕಾರ್ಯಕ್ರಮವೆಂದರೆ ಸರಕಾರೀ ಬಹುಮಾನಗಳಿಗೆ ಬಹಿಷ್ಕಾರ, ಸರಕಾರೀ ಶಾಲೆಗಳಿಗೆ ಬಹಿಷ್ಕಾರ, ಸರಕಾರೀ ಕೋರ್ಟುಗಳಿಗೆ ಬಹಿಷ್ಕಾರ, ಮತ್ತು ಸರಕಾರೀ ನೋಕರಿಗಳಿಗೆ ಬಹಿಷ್ಕಾರ, ಈ ನಾಲ್ಕು ಮಾತುಗಳನ್ನೊಳಗೊಂಡಿತ್ತು. ಅಗಸ್ಟ ೨ನೆಯ ತಾ. ದಿವಸ ವ್ಹಾಯಿಸರಾಯರು ಇಂಪೀರಿಯಲ್ ಲೆಜಿಸಲೇಟಿವ್ಹ ಕೌನ್ಸಿಲಿನಲ್ಲಿ ಮಾತನಾಡುವಾಗ ಅವಶ್ಯವಿದ್ದಾಗ ಸರಕಾರದವರು ಇಂತಹ ಚಳವಳಿಯನ್ನು ದಬ್ಬಲು ತಮ್ಮ ಕೈಯಲ್ಲಿಯ ಎಲ್ಲ ಸಾಧನವನ್ನು ಉಪಯೋಗಿಸುವರೆಂದು ಜಾಹೀರ ಪಡಿಸಿದರು.

## (೭೫) ಮುಂಬಯಿಯಲ್ಲಿ ಸ್ಪೆಶಲ ಕಾಂಗ್ರೆಸ್ಸು (೧೯೨೦)

ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯ ಸಭೆಯನಂತರ ಅಸಹಕಾರದ ವಿಷಯಕ್ಕೆ ಪ್ರಾಂತಿಕ ಕಾಂಗ್ರೆಸ ಕಮಿಟಿಯವರು ಸಾಮಾನ್ಯವಾಗಿ ಅಸಹಕಾರಕ್ಕೆ ಅನುಕೂಲವಾದ ಅಭಿಪ್ರಾಯವನ್ನು ಕೊಟ್ಟರು. ಕಾಂಗ್ರೆಸ್ಸಿನ ಸ್ಪೆಶಲ ಅಧಿವೇಶನವು ಕಲಕತ್ತೆಯಲ್ಲಿ ಸಪ್ಟಂಬರ ತಿಂಗಳ ೪ನೆಯ ತಾ. ದಿನ ಪ್ರಾರಂಭವಾಯಿತು. ಅಧ್ಯಕ್ಷಸ್ಥಾನಕ್ಕೆ ಲಾಲಾ ಲಜಪತರಾಯರು ಆರಿಸಲ್ಪಟ್ಟರು. ಅವರು ತಮ್ಮ ಭಾಷಣದಲ್ಲಿ ಮೊದಲಿಗೆ ಲೋಕಮಾನ್ಯ ಟಿಳಕರ ಶೋಚನೀಯ ನಿಧನವನ್ನು ಉಲ್ಲೇಖಿಸಿ ಹೀಗೆ ಹೇಳಿದರು. "ಅವರ ನಿಧನದಿಂದುಂಟಾದ ಹಾನಿಯನ್ನು ವರ್ಣಿಸುವದು ಕೇವಲ ಅಶಕ್ಯವಾದ ಮಾತಾಗಿದೆ. ಅವರ ಅತುಲವಾದ ರಾಷ್ಟ್ರಭಕ್ತಿಯೂ, ದೃಢವಾದ ದೇಶಾಭಿಮಾನವೂ, ನಿರ್ಮಲವಾದ ಬುದ್ಧಿಯೂ, ನಮಗೆ ಇಂದಿಗೆ ಬೇಕಾಗಿತ್ತು. ಅವರ ನಿಧನದ ಕಾಲಕ್ಕೆ ದೇಶದಲ್ಲೆಲ್ಲ ಕಂಡುಬಂದ ಲೋಕಪ್ರೇಮವು ಕೇವಲ ಅಭೂತಪೂರ್ವವಾಗಿತ್ತು. ಅವರ ನಿಧನದಿಂದ ರಾಷ್ಟ್ರಕ್ಕಂತೂ ಹಾನಿಯಾಗಿದೆ. ಆದರೆ ಕಾಂಗ್ರೆಸ್ಸಿಗೆ ಆದ ಹಾನಿಯು ಅದಕ್ಕೂ ಹೆಚ್ಚಾಗಿದೆ." ಅನಂತರ ಅವರು ಪಂಜಾಬದಲ್ಲಿಯ ಆಡಳಿತೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ದಂಡಿನಾಳ್ಗೆಯನ್ನು ಖಂಡಿಸಿ ಸರ ಮಾಯ್ಕಲ್ ಒಡ್‌ವಾಯರರೇ ಪಂಜಾಬದಲ್ಲಿಯ ಎಲ್ಲ ಅನರ್ಥಗಳಿಗೂ ಕಾರಣರೆಂದು ಹೇಳಿದರು. ಅನಂತರ ಅವರು ಖಿಲಾಫತ ಪ್ರಶ್ನೆಯನ್ನೂ ಹೊಸ ಸುಧಾರಣೆಯ ನೇಮುಗಳನ್ನೂ ಚರ್ಚಿಸಿದರು. ಅಸಹಕಾರದ ವಿಷಯಕ್ಕೆ ಮಾತ್ರ ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲಿಲ್ಲ.

ಕಾಂಗ್ರೆಸಿನ ಅಧಿವೇಶನದಲ್ಲಿ ಹಂಟರ ಕಮಿಟಿಯ ನಿರ್ಣಯಗಳೂ, ಸರಕಾರದವರು ಈ ವಿಷಯದಲ್ಲಿ ತೋರಿಸಿದ ಅನಾಸ್ಥೆಯೂ ನಿಷೇಧಿಸಲ್ಪಟ್ಟವು. ಅಸಹಕಾರದ ವಿಷಯಕ್ಕೆ ಮಹಾತ್ಮಾ ಗಾಂಧಿಯವರು ಅಧಿವೇಶನದೆದುರಿಗೆ ಮಂಡಿಸಿದ ಠರಾವು ಪಾಸಾಯಿತು. ಅದಕ್ಕೆ ೧೮೮೬ ಪ್ರತಿನಿಧಿಗಳು ಅನುಕೂಲರಾಗಿಯೂ, ೮೮೪ ಪ್ರತಿನಿಧಿಗಳು ಪ್ರತಿಕೂಲರಾಗಿಯೂ, ಇದ್ದರು. ಆ ಠರಾವಿನಲ್ಲಿ ಖಿಲಾಫತ ಮತ್ತು ಪಂಜಾಬ ಇವುಗಳ ವಿಷಯದಲ್ಲಿ ಸರಕಾರದ ಅನಾಸ್ಥೆಯನ್ನು ಖಂಡಿಸಿ ಆ ವಿಷಯದ

ಲ್ಲಿಯ ಅನ್ಯಾಯಗಳು ದೂರಾಗುವವರೆಗೂ, ಸ್ವರಾಜ್ಯವು ಸ್ಥಾಪನೆಯಾಗುವ ವರೆಗೂ, ಅಸತ್ಯಾಚಾರಿ ಅಸಹಕಾರದ ಚಳವಳಿಯು ರಾಷ್ಟ್ರದಿಂದ ಸ್ವೀಕರಿಸಲ್ಪಡಬೇಕೆಂದು ಗೊತ್ತಾಯಿತು. ಆ ನಿರ್ಣಯದಲ್ಲಿ ಅಡಕವಾಗಿದ್ದ ಅಸಹಕಾರದ ಕಾರ್ಯಕ್ರಮವು ಈ ಮುಂದಿನಂತಿತ್ತು. (೧) ಪದವೀ ಧರರು ಸರಕಾರದ ಪದವಿಗಳನ್ನು ಬಿಟ್ಟುಬಿಡಬೇಕು; ಮುನ್ಸಿಪಾಲ್ಟಿ ಲೋಕಲ್‌ಬೋರ್ಡುಗಳಲ್ಲಿ ಸರಕಾರದಿಂದ ನೇಮಕರಾದ ಸಭಾಸದರು ತಮ್ಮ ಜಾಗೆಗಳಿಗೆ ರಾಜೀನಾಮೆಯನ್ನು ಕೊಡಬೇಕು. (೨) ಸರಕಾರೀ ದರಬಾರ, ಸಭೆ ಮುಂತಾದವುಗಳನ್ನು ಬಹಿಷ್ಕರಿಸಬೇಕು. (೩) ಸರಕಾರೀ ನಿಯಂತ್ರಣದೊಳಗಿನ ಶಾಲೆಕಾಲೇಜುಗಳಿಂದ ಹುಡುಗರನ್ನು ಮೆಲ್ಲಗೆ ತೆಗೆಯಬೇಕು. ರಾಷ್ಟ್ರೀಯ ಶಾಲೆಕಾಲೇಜಗಳನ್ನು ಸ್ಥಾಪಿಸಬೇಕು. (೪) ವಕೀಲರು ಕೋರ್ಟುಗಳಿಗೆ ಬಹಿಷ್ಕಾರಹಾಕಬೇಕು; ನ್ಯಾಯಗಳನ್ನು ಬಗೆಹರಿಸುವದಕ್ಕಾಗಿ ಪಂಚಾಯತಿಗಳನ್ನು ಸ್ಥಾಪಿಸಬೇಕು. (೫) ಮೆಸೊಪೋಟೆಮಿಯಾಕ್ಕೆ ನೌಕರಿಗಾಗಿ ಹೋಗಲು ಸೈನಿಕರೂ, ಕಾರಕೂನರೂ, ಅಲ್ಲಗಳೆಯಬೇಕು. (೬) ಹೊಸ ಕೌನ್ಸಿಲುಗಳಿಗೆ ಉಮೇದವಾರರಾಗಿ ನಿಂತವರು ಉಮೇದವಾರಿಕೆಯನ್ನು ಹಿಂದೆತೆಗೆದುಕೊಳ್ಳಬೇಕು; ಈ ರೀತಿ ಉಮೇದವಾರಿಕೆಯನ್ನು ಹಿಂತೆಗೆದುಕೊಳ್ಳದಿದ್ದರೆ ಯಾವ ಮತದಾರರೂ ತಮ್ಮ ಮತಗಳನ್ನು ಕೊಡಬಾರದು. (೭) ಪರದೇಶೀ ವಸ್ತುಗಳನ್ನು ಪೂರ್ಣವಾಗಿ ಬಹಿಷ್ಕರಿಸಬೇಕು. ಎಲ್ಲರೂ ಸ್ವದೇಶಿವಸ್ತ್ರಗಳನ್ನೇ ಧರಿಸ ಬೇಕು ಮತ್ತು ಈಗಿದ್ದ ಸ್ವದೇಶಿ ಗಿರಣಿಗಳಿಗೆ ಸಾಕಷ್ಟು ಅರಿವೆಯನ್ನು ತಯಾರಿಸುವದು ಸಾಧ್ಯವಿರದ್ದರಿಂದ ನೂಲುವದನ್ನೂ, ನೇಯುವದನ್ನೂ, ಪ್ರೋತ್ಸಾಹಿಸಬೇಕು. ಈ ಠರಾವಿಗೆ ಬಿಪಿನಚಂದ್ರಪಾಲರು "ಮಹಾತ್ಮಾ ಗಾಂಧಿಯವರ ಕಾರ್ಯಕ್ರಮವನ್ನು ದೇಶದವರು ವಿಚಾರಿಸಬೇಕು; ಬ್ರಿಟಿಶ ಮುಖ್ಯ ಮಂತ್ರಿಗಳೆದುರಿಗೆ ರಾಷ್ಟ್ರದ ಪ್ರತಿನಿಧಿಗಳು ತಮ್ಮ ಬೇಡಿಕೆ ಗಳನ್ನು ಮಂಡಿಸಬೇಕು. ಆ ಬೇಡಿಕೆಗಳು ಮಾನ್ಯವಾಗದಿದ್ದರೆ ಅಸಹ ಕಾರದ ಕಾರ್ಯಕ್ರಮವನ್ನು ಕೈಕೊಳ್ಳಬೇಕು" ಎಂದು ಒಂದು ಉಪಸೂಚನೆಯನ್ನು ಮುಂದೆತಂದರು. ಆದರೆ ಆ ಉಪಸೂಚನೆಯು ಬಿದ್ದುಹೋಗಿ ಮಹಾತ್ಮಾ ಗಾಂಧಿಯವರ ಠರಾವೆ ಕಾಂಗ್ರೆಸ್ಸಿನಲ್ಲಿ ಮಂಜೂರಾಯಿತು.

ಕಾಂಗ್ರೆಸದಲ್ಲಿ ಅಸಹಕಾರದ ಠರಾವು ಪಾಸಾದಕೂಡಲೆ ಅನೇಕ ಪದವೀಧರರು ತಮ್ಮ ತಮ್ಮ ಪದವಿಗಳನ್ನು ಬಿಟ್ಟರು. ಸಪ್ಟಂಬರ ೧೪ನೆಯ ತಾರೀಖಿನ ದಿವಸ ವ್ಹಾಯಿಸರಾಯರ ಕೌನ್ಸಿಲಿನಲ್ಲಿ ಪಂಜಾಬದ ವಿಷಯಕ್ಕೆ ಒಂದು ಠರಾವನ್ನು ತರಲಿಕ್ಕೆ ವ್ಹಾಯಿಸರಾಯರು ಪರವಾನಿಗೆಯನ್ನು ಕೊಡದ್ದರಿಂದ ಎಲ್ಲ ಹಿಂದಿ ಜನರು ಕೌನ್ಸಿಲ್ ಬಿಟ್ಟು ಎದ್ದು ಹೋದರು. ಪಂಡಿತ ಮೋತಿಲಾಲ ನೆಹರುರವರೂ ಇನ್ನೂ ಅನೇಕರೂ ಸರಕಾರಿ ಪದವಿ ಮುಂತಾದವುಗಳನ್ನು ಬಿಟ್ಟುಬಿಟ್ಟರು. ಅಕ್ಟೋಬರ ೨ನೆಯ ತಾ। ದಿವಸ ಆಲ್ ಇಂಡಿಯಾ ಕಾಂಗ್ರೆಸ ಕಮೀಟಿಯವರು ಕೂಡಿ ಅಸಹಕಾರದ ವಿಷಯಕ್ಕೆ ದೀರ್ಘವಾದ ವಿಚಾರವನ್ನು ಮಾಡಿ ಕಾರ್ಯಕ್ರಮವನ್ನು ನಿಶ್ಚಯಿಸಿದರು. ಆಕ್ಟೋಬರ ತಿಂಗಳ ಎರಡನೆ ವಾರದಲ್ಲಿ ಅಲಿಗಡ ಯುನಿವ್ಹರ್ಸಿಟಿಯ ವಿದ್ಯಾರ್ಥಿಗಳು ಕಾಲೇಜನ್ನು ಬಿಟ್ಟುಬಿಟ್ಟರು. ಅದೇ ಸುಮಾರಿಗೆ ಮಹಾತ್ಮರೂ, ಅಲಿ ಬಂಧುಗಳೂ, ನೆಹರು ಮುಂತಾದವರೂ ಉತ್ತರ ಹಿಂದುಸ್ಥಾನದಲ್ಲಿ ಪ್ರಚಾರ ಯಾತ್ರೆಯನ್ನು ಹೊರಡಿಸಿದರು. ಮುಂದೆ ಸ್ವಲ್ಪದರಲ್ಲಿಯೆ ಲಾಹೋರದಲ್ಲಿಯ ಅನೇಕ ಸೂರಾರು ವಿದ್ಯಾರ್ಥಿಗಳು ಸರಕಾರೀ ಕಾಲೇಜಿಗೆ ಶರಣುಹೊಡೆದರು. ಇದೆಲ್ಲ ಜಾಗೃತಿಯನ್ನು ನೋಡಿ ಪಂಜಾಬ ಸರಕಾರದವರು ಇಲೆಕ್ಶನ್ ಬಿಟ್ಟು ಉಳಿದ ವಿಷಯಗಳನ್ನು ಚರ್ಚೆಮಾಡಲು ಅಮೃತಸರ ಮತ್ತು ಶೇಖಪೂರ ಇವೆರಡೂ ಜಿಲ್ಹೆಗಳಲ್ಲಿ ಸಭೆಗಳು ಕೂಡಬಾರದೆಂದು ವಿಧಿಸಿದರು. ನೊವ್ಹೆಂಬರ ತಿಂಗಳಲ್ಲಿಯೂ, ಕಾಲೇಜಬಹಿಷ್ಕಾರದ ಕಾರ್ಯಕ್ರಮವು ಒಳ್ಳೇ ರಭಸದಿಂದ ಮುಂದೆ ಸಾಗಿತ್ತು. ಅಹಮ್ಮದಾಬಾದದಲ್ಲಿ ಮಹಾತ್ಮರು ಮೊದಲನೆಯ ರಾಷ್ಟ್ರೀಯ ವಿದ್ಯಾಪೀಠವನ್ನು ಹೊರಡಿಸಿದರು. ನೊವ್ಹೆಂಬರ ೨೨ನೆಯ ತಾ। ದಿವಸ ಅಮೃತಸರದ ಖಾಲ್ಸಾ ಕಾಲೇಜದ ೧೨ ಮಂದಿ ಪ್ರೊಫೆಸರರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟರು. ಇದೆ ಸುಮಾರಕ್ಕೆ ಮಹಾತ್ಮರು ಮಹಾರಾಷ್ಟ್ರ ಮತ್ತು ಕರ್ನಾಟಕದಲ್ಲಿ ಪ್ರವಾಸವನ್ನು ಮಾಡಿದರು. ಡಿಸೆಂಬರ ತಿಂಗಳ ಮೊದಲನೆಯ ವಾರದಲ್ಲಿ ಪುಣೆಯಲ್ಲಿ ಟಿಳಕ ಮಹಾವಿದ್ಯಾಲಯವು ಸ್ಥಾಪಿಸಲ್ಪಟ್ಟಿತು. ಒಟ್ಟಿಗೆ ಅಸಹಕಾರದ ಕಾರ್ಯಕ್ರಮವು ಒಳ್ಳೇ ಭರದಿಂದ ಮುಂದೆ ಸಾಗಿತು. ಅಸಹಕಾರದ ಚಳವಳಿಯು ಅತ್ಯಾ

*

ಚಾರಗಳಲ್ಲಿ ಪರಿಣಮಿಸದೇ ಇದ್ದರೆ ಅದನ್ನು ಯಾವರೀತಿಯಿಂದಲೂ ತಡೆಯ ಬಾರದೆಂದು ವ್ಹಾಯಿಸರಾಯರು ಜಾಹೀರ ಪಡಿಸಿದರು.

**(೭೬) ಅಸಹಕಾರದ ಅಂದೋಲನವು:**— ೧೯೨೧ ರಲ್ಲಿ ನಡೆದ ಸಂಗತಿಗಳನ್ನೂ ಪೂರ್ಣವಾಗಿ ವರ್ಣಿಸುವದು ಸಾಧ್ಯವಿಲ್ಲ. ಮುಖ್ಯ ಸಂಗತಿ ಗಳನ್ನು ಮಾತ್ರ ನಿರ್ದೇಶಿಸುವದು ಸಾಧ್ಯವಿದೆ. ನಾಗಪೂರ ಕಾಂಗ್ರೆಸು ಮುಗಿದನಂತರ ಬಂಗಾಲದ ವಿದ್ಯಾರ್ಥಿಗಳಲ್ಲಿ ದೊಡ್ಡ ಅಂದೋಲನಕ್ಕೆ ಪ್ರಾರಂಭವಾಯಿತು. ಜಾನೇವಾರಿ ೧೨ ನೆಯ ತಾ. ದಿವಸ ಕಲಕತ್ತೆಯ ವಂಗವಾಸಿ ಕಾಲೇಜಿನ ವಿದ್ಯಾರ್ಥಿಗಳು ತಮ್ಮ ಕಾಲೇಜಕ್ಕೆ ಶರಣು ಹೊಡೆದರು. ರಿಪನ್ನ ಕಾಲೇಜದ ವಿದ್ಯಾರ್ಥಿಗಳೂ ಅವರನ್ನು ಕೂಡಿದರು. ೧೫ನೆಯ ತಾರೀಖಿನ ದಿವಸ ಕಲಕತ್ತೆಯ ಎಲ್ಲ ಕಾಲೇಜುಗಳ ಪ್ರಿನ್ಸಿಪಾಲರ ಸಭೆಯಾಗಿ ಅಸಹಕಾರದಲ್ಲಿ ಭಾಗವಹಿಸಿದ ವಿದ್ಯಾರ್ಥಿಗಳಿಗೆ ವಿಶೇಷ ತೊಂದರೆ ಕೊಡತಕ್ಕದ್ದಲ್ಲವೆಂದು ಗೊತ್ತಾಯಿತು. ಕಲಕತ್ತೆಯ ಪ್ರೊ. ಸರಕಾರ, ಡಾ. ಘೋಷ ಮುಂತಾದವರು ಸರಕಾರೀ ನೌಕರಿಗೆ ಶರಣು ಹೊಡೆದರು. ಲಾಹೋರದ ವಿದ್ಯಾರ್ಥಿಗಳು ಕಲಕತ್ತೆಯ ವಿದ್ಯಾರ್ಥಿಗಳ ಅನುಕರಣವನ್ನೆ ಮಾಡಿದರು. ಮುಂಬೈ, ಪುಣೆ, ಧಾರವಾಡ ಮುಂತಾದ ಸ್ಥಳಗಳಲ್ಲಿಯೂ ಕಾಲೇಜ ವಿದ್ಯಾರ್ಥಿಗಳು ಕಾಲೇಜಿಗೆ ಶರಣುಹೊಡೆದು ರಾಷ್ಟ್ರಕಾರ್ಯದಲ್ಲಿ ತೊಡಗಹತ್ತಿದರು. ಫೆಬ್ರುವರಿ ೪ನೆಯ ತಾ. ದಿನ ಮಹಾತ್ಮರು ಕಲಕತ್ತೆಯಲ್ಲಿಯೂ ೬ನೆಯ ತಾ. ದಿನ ಪಾಟ್ನಾದಲ್ಲಿಯೂ ರಾಷ್ಟ್ರೀಯ ಕಾಲೇಜುಗಳನ್ನು ತೆರೆದರು. ಅದಕ್ಕೂ ಮೊದಲೆ ದಾಸರವರು ತಮ್ಮ ವಕೀಲಿಗೆ ತಿಲಾಂಜಲಿಯನ್ನು ಕೊಟ್ಟು ತಮ್ಮ ಆಸ್ತಿಯನ್ನೆಲ್ಲ ರಾಷ್ಟ್ರಕ್ಕೆ ಅರ್ಪಿಸಿಬಿಟ್ಟರು.

ಇತ್ತ ಹೊಸ ಕಾಯದೆಯಂತೆ ಏರ್ಪಡಿಸಲ್ಪಟ್ಟ ಕಾಯದೆ ಮಂಡಳ ಗಳನ್ನು ತೆರೆಯುವದಕ್ಕಾಗಿ ಕಳಿಸಲ್ಪಟ್ಟ ಬಾದಶಹರ ಕಕ್ಕಂದಿರಾದ ಡ್ಯೂಕ ಆಫ್ ಕೊನಾಟರು ಮದ್ರಾಸಿಗೆ ಜಾನೇವರಿ ೧೦ ನೆಯ ತಾ। ದಿನ ಬಂದರು. ಆ ದಿನ ಮದ್ರಾಸಿನಲ್ಲಿ ಹರತಾಳವು ಏರ್ಪಡಿಸಲ್ಪಟ್ಟಿತ್ತು. ಡ್ಯೂಕ ಆಫ್ ಕೊನಾಟರು ೧೨ ನೆಯ ತಾ। ದಿವಸ ಮದ್ರಾಸಿನ ಕೌನ್ಸಿಲ್ಲನ್ನೂ ೨೮ ನೆಯ ತಾ। ದಿವಸ ಬಂಗಾಲದ ಕೌನ್ಸಿಲ್ಲನ್ನೂ ತೆರೆದರು. ಫೆಬ್ರುವರಿ ೭

ನೆಯ ತಾ। ದಿನ ಅವರು ದಿಲ್ಲಿಗೆ ಹೋದರು. ೮ನೆಯ ತಾ। ದಿವಸ ನರೇಂದ್ರ ಮಹಾಮಂಡಳವನ್ನು ತೆರೆದರು. ೯ ನೆಯ ತಾ। ದಿವಸ ಕೌನ್ಸಿಲ್ ಆಫ್ ಸ್ಟೇಟ್ ಮತ್ತು ಲೇಜಿಸ್ಲೇಟಿವ್ಹ ಅಸೆಂಬ್ಲಿ ಇವುಗಳ ಅನಾವರಣ ಸಮಾರಂಭವನ್ನು ನೆರವೇರಿಸಿದರು. ಆ ಸಮಯಕ್ಕೆ ಭಾಷಣಮಾಡುವಾಗ ಡ್ಯೂಕ ಆಫ್ ಕೊನಾಟರು ಪಂಜಾಬದಲ್ಲಿಯ ಅತ್ಯಾಚಾರಗಳನ್ನು ನೆನಿಸಿ ಹೀಗೆ ಹೇಳಿದರು "ಹಿಂದುಸ್ಥಾನದ ಜನರೂ, ಅಧಿಕಾರಿಗಳೂ, ಇವರ ನಡುವೆ ಪ್ರೇಮಸಂಬಂಧಗಳಿರಬೇಕು. ಅದರ ಬದಲು ದ್ವೇಷವೂ ವೈಷಮ್ಯ ಬುದ್ಧಿಯೂ ನನಗೆ ಕಂಡುಬಂದಿವೆ. ಅಮೃತಸರದ ಛಾಯೆಯು ಹಿಂದುಸ್ಥಾನದಲ್ಲೆಲ್ಲ ಪಸರಿಸಿದೆ. ಇಲ್ಲಿ ಕೂಡಿದ ಬ್ರಿಟಿಶಾ ಮತ್ತು ಹಿಂದಿ ಜನರಿಗೆ ನನ್ನ ಬಿನ್ನಹವಿಷ್ಟೆ. ಹಿಂದಿನ ತಪ್ಪುಗಳನ್ನು, ತಪ್ಪುತಿಳುವಳಿಕೆಗಳನ್ನು ಮರೆತು ಬಿಡಿ, ಕ್ಷಮಿಸಬೇಕಾಗಿದ್ದ ಮಾತುಗಳನ್ನು ಕ್ಷಮಿಸಿರಿ. ಇವೊತ್ತಿನಿಂದ ಪ್ರಾರಂಭವಾದ ಸತ್ಕಾರ್ಯಕ್ಕೆ ಕೈಹಾಕಿರಿ." ಎಂದು ಹೇಳಿದರು. ಅನಂತರ ಡ್ಯೂಕ ಆಫ್ ಕೊನಾಟರು ಮುಂಬೈಗೆ ಬಂದು ೨೩ ನೆಯ ತಾ। ದಿನ ಮುಂಬೈ ಕೌನ್ಸಿಲಿನ ಅನಾವರಣ ಸಮಾರಂಭವನ್ನು ನೆರವೇರಿಸಿದರು. ಮರುದಿನ ಅವರು ಇಂಗ್ಲೆಂಡಿಗೆ ಹೋದರು. ಬಾದಶಹರ ಕಕ್ಕಂದಿರು ಹೋದಹೋದಲ್ಲೆಲ್ಲ ಹರತಾಳವೂ, ನಿಷೇಧಾತ್ಮಕ ಸಭೆಗಳೂ, ಮೆರವಣಿಗೆಗಳೂ, ಜರುಗಿದವು. ಜನರ ಚಿತ್ತವನ್ನು ಆಕರ್ಷಿಸುವದಕ್ಕಾಗಿ, ಅರಸುಮನೆತನದವರನ್ನು ಕಳುಹುವ ಪರಿಪಾಠದಂತೆ ಬಾದಶಹರ ಕಕ್ಕಂದಿರೆ ಹೊಸ ಸುಧಾರಣೆಗಳಂತೆ ಏರ್ಪಡಿಸಲ್ಪಟ್ಟ ಕಾಯದೆಮಂಡಲಗಳ ಅನಾವರಣ ಸಮಾರಂಭವನ್ನು ನೆರವೇರಿಸುವದಕ್ಕಾಗಿ ಹಿಂದುಸ್ಥಾನಕ್ಕೆ ಬಂದಿದ್ದರು. ಆದರೆ ಈಗ ಜನತೆಯ ವೃತ್ತಿಯು ಬೇರೆಯಾಗಿತ್ತು. ಮಾರ್ಚ ತಿಂಗಳಲ್ಲಿಯೂ ಅಸಹಕಾರದ ಪ್ರಚಾರಕಾರ್ಯವು ಮುಂದೆ ಸಾಗಿತು. ಕೆಲವು ಕಡೆಗೆ ಸಭಾಬಂದಿ ಕೆಲವು ಕಡೆಗೆ ೧೪೪ನೆಯ ಕಲಮಿನ ಪ್ರಕಾರ ಹುಕುಮುಗಳು ಮುಂತಾದ ದಬ್ಬಾಳಿಕೆಯನ್ನು ಅಲ್ಲಲ್ಲಿ ಅಧಿಕಾರಿಗಳು ಪ್ರಾರಂಭಿಸಿದ್ದರು.

ಮಾರ್ಚ ೩೧ನೆಯ ತಾ॥ ದಿನ ಆಲ್ ಇಂಡಿಯಾ ಕಾಂಗ್ರೆಸ ಕಮಿಟಿಯ ಸಭೆಯು ಬಿಜವಾಡದಲ್ಲಿ ಸೇರಿತು. ಮುಂದಿನ ಮೂರು ತಿಂಗಳಲ್ಲಿ ಟಿಳಕ ಸ್ವರಾಜ್ಯ ಫಂಡಿಗಾಗಿ ೧ ಕೋಟಿ ರೂಪಾಯಿಗಳನ್ನು ಕೂಡಿಸಬೇಕೆಂದೂ,

೧ ಕೋಟಿ ಕಾಂಗ್ರೆಸ ಸಭಾಸದರನ್ನು ಮಾಡಬೇಕೆಂದೂ, ೨೦ ಲಕ್ಷ ರಾಟಿಗಳು ಹಿಂದುಸ್ತಾನದ ಹಳ್ಳಿಗಳಲ್ಲಿ ಪಸರಿಸುವಂತೆ ಮಾಡಬೇಕೆಂದೂ ಮೊದಲನೆಯ ಠರಾವು ಪಾಸಾಯಿತು. ಸರಕಾರದವರು ಹೊರಡಿಸಿದ ಅನ್ಯಾಯದ ಹುಕುಮುಗಳನ್ನು ತುರ್ತಕ್ಕೆ ಮನ್ನಿಸಬೇಕೆಂದೂ ನಿರ್ಣಯವಾಯಿತು. ಬಿಜವಾಡದಲ್ಲಿ ಪಾಸಾದ ಠರಾವುಗಳಂತೆ ಎಲ್ಲ ಪ್ರಾಂತದವರು ವಿಧಾಯಕ ಕಾರ್ಯಕ್ರಮವನ್ನು ನೆರವೇರಿಸುವದರಲ್ಲಿ ತೊಡಗಿದರು. ಸಂಕಲ್ಪದಂತೆ ೩೦ ಜೂನದವರೆಗೆ ೧ ಕೋಟಿ ರೂಪಾಯಿಗಳು ಕೂಡಿದವು. ರಾಟಿ ಮತ್ತು ಸಭಾಸದರ ಸಂಖ್ಯೆಯು ಸಂಕಲ್ಪದಷ್ಟು ಕೂಡದಿದ್ದರೂ ಆ ವಿಷಯದಲ್ಲಿಯು ಕಾರ್ಯಕ್ರಮವು ಸಾಮಾನ್ಯವಾಗಿ ಯಶಸ್ವಿಯಾಯಿತೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಪ್ರತಿಯೊಂದು ಪ್ರಾಂತದವರೂ ರಾಷ್ಟ್ರೀಯ ಶಿಕ್ಷಣದ ಏರ್ಪಾಡನ್ನು ಮಾಡಿದರು. ಸರಕಾರದವರು ದಬ್ಬಾಳಿಕೆಯನ್ನು ಭರದಿಂದ ಸಾಗಿಸಿದರು.

ಎಪ್ರಿಲ ೨ನೆಯ ತಾ॥ ದಿವಸ ಲಾರ್ಡ ರೀಡಿಂಗರು ವ್ಹಾಯಿಸರಾಯರಾಗಿ ಬಂದರು. ಬೇರೆ ಬೇರೆ ಪ್ರಾಂತಗಳಲ್ಲಿ ದಬ್ಬಾಳಿಕೆಯ ಹೊಸ ಹೊಸ ಠರಾವುಗಳು ಹೊರಡಹತ್ತಿದವು. ಬಿಹಾರ ಸರಕಾರದವರು ಮದ್ಯಪಾನದ ನಿಷೇಧದ ಚಳವಳಿಯನ್ನು ಮುರಿಯಲು ಮುಂದಾದರು. ಸಂಯುಕ್ತ ಪ್ರಾಂತ ಸರಕಾರದವರು ೧೪೪ ನೆಯ ಕಲಮಿನಂತೆ ಭಾಷಣಬಂದಿ ಮತ್ತು ಸಭಾಬಂದಿ ಇವುಗಳ ವಿಷಯಕ್ಕೆ ಹುಕುಮುಗಳನ್ನು ಹೊರಡಿಸಿದರು. ಅಸಹಕಾರದ ಚಳವಳಿಯು ಕ್ರಾಂತಿಕಾರಕವಾದುದೆಂದು ಜಾಹೀರಪಡಿಸಿದರು. ಅಯೋಧ್ಯೆಪ್ರಾಂತದಲ್ಲಿ ರಾಜದ್ರೋಹಿ ಸಭೆಗಳ ಕಾಯದೆಯು ಅಮಲಿನಲ್ಲಿ ಬಂದಿತು. ಮುಂಬೈ ಸರಕಾರದವರು ಮಾತ್ರ ಶಾಂತತೆಯ ಧೋರಣವನ್ನು ಅವಲಂಬಿಸಿದರು. ಎಪ್ರಿಲ ತಿಂಗಳಲ್ಲಿ ಅನೇಕ ಪ್ರಾಂತಗಳಲ್ಲಿ ಪರಿಷತ್ತುಗಳಾಗಿ ಅಸಹಕಾರದ ಠರಾವುಗಳು ಮಂಜೂರು ಮಾಡಲ್ಪಟ್ಟವು. ಎಪ್ರಿಲ ೧೬ನೆಯ ತಾ। ದಿವಸ ಮುಳಶಿ ಸತ್ಯಾಗ್ರಹದ ಪ್ರಾರಂಭವಾಯಿತು.

ಜುಲೈ ೧ನೆಯ ತಾರೀಖಿನ ದಿನ ಧಾರವಾಡದಲ್ಲಿ ಶೆಂದಿ ಅಂಗಡಿಯ ಪಿಕೆಟಿಂಗ ಮಾಡಲು ಕೂಡಿದ ಜನರಮೇಲೆ ಪೊಲೀಸರು ಗುಂಡು ಹಾರಿಸಿದರು. ಅನೇಕರಿಗೆ ಗಾಯಗಳಾದವು, ಇಬ್ಬರು ಮರಣಹೊಂದಿದರು.

ಹೊಸ ವ್ಹಾಯಿಸರಾಯರು ಹಿಂದುಸ್ಥಾನದ ಪರಿಸ್ಥಿತಿಯನ್ನು ವಿಚಾರಿಸ ತೊಡಗಿದರು. ಮೆ ೧೩ರಿಂದ ೧೮ರ ವರೆಗೆ ವ್ಹಾಯಿಸರಾಯರು ಮಹಾತ್ಮರನ್ನು ಅನೇಕ ಸಲ ಬೆಟ್ಟಿಗೆ ಕರೆದು ಮಾತುಕತೆಗಳನ್ನು ಆಡಿದರು. ಮಹಾತ್ಮರು ಅಸಹಕಾರದ ಮುಖ್ಯ ಉದ್ದೇಶವನ್ನು ತಿಳಿಸಿ ಹೇಳಿದರು. ಬಿಜವಾಡದ ಸಭೆಯಾದನಂತರ ದೇಶದಲ್ಲಿಯ ಎಲ್ಲ ಪ್ರಮುಖ ಮುಖಂಡರು ತಮ್ಮ ತಮ್ಮ ಪ್ರಾಂತಗಳಲ್ಲಿ ಪ್ರಚಾರಕಾರ್ಯವನ್ನು ಮಾಡಿದರು. ಈ ಮೂರು ತಿಂಗಳಲ್ಲಿಯ ಕಾರ್ಯವು ಕೇವಲ ಅದ್ಭುತವಾಗಿತ್ತು. ಜುಲೈ ೨೮ನೆಯ ತಾ॥ ದಿನ ಆಲ್ ಇಂಡಿಯಾ ಕಾಂಗ್ರೆಸ ಕಮಿಟಿಯ ಅಧಿವೇಶನವು ಮುಂಬೈಯಲ್ಲಿ ಕೂಡಿತು. ಯುವರಾಜರು ಹಿಂದುಸ್ಥಾನದಲ್ಲಿ ಬಂದಾಗ ಅವರ ಎಲ್ಲ ಕಾರ್ಯಕ್ರಮಗಳನ್ನು ಬಹಿಷ್ಕರಿಸಬೇಕೆಂದೂ ೩೦ನೆಯ ಸಪ್ಟಂಬರದವರೆಗೆ ಪರದೇಶೀ ವಸ್ತ್ರ ಬಹಿಷ್ಕಾರದ ಕಾರ್ಯವನ್ನು ಮುಗಿಸಬೇಕೆಂದೂ ಖಾದಿಗೆ ಪ್ರೋತ್ಸಾಹನ ಕೊಡಬೇಕೆಂದೂ ಸ್ವದೇಶಿ ಕಾರ್ಯಕ್ರಮವು ಮುಗಿಯುವವರೆಗೆ ಕಾಯದೆಭಂಗವನ್ನು ಮುಂದೆ ಹಾಕಬೇಕೆಂದೂ ಠರಾವುಗಳು ಪಾಸಾದವು. ಈ ಮುಂದಿನ ಮೂರುತಿಂಗಳುಗಳಲ್ಲಿ ಪರದೇಶೀ ಬಹಿಷ್ಕಾರದ ಕಾರ್ಯಕ್ರಮವು ಬಹಳ ವಿಜೃಂಭಣೆಯಿಂದ ನೆರವೇರಿತು. ದೇಶದಲ್ಲೆಲ್ಲ ಜಾಹೀರ ಸಭೆಗಳಲ್ಲಿ ಪರದೇಶೀ ವಸ್ತ್ರವು ಸುಡಲ್ಪಟ್ಟಿತು.

ಜುಲೈತಿಂಗಳಲ್ಲಿ ಕರಾಚಿಯಲ್ಲಿ ಜರುಗಿದ ಪರಿಷತ್ತಿನಲ್ಲಿ ಮುಸಲ್ಮಾನರು ಬ್ರಿಟಿಶ ಸೈನ್ಯದಲ್ಲಿ ಸೇರುವುದು ಮುಸಲ್ಮಾನೀ ಧರ್ಮದ ವಿರುದ್ಧವಿರುವದರಿಂದ ಯಾವ ಮುಸಲ್ಮಾನನೂ ಸೈನ್ಯದಲ್ಲಿ ಸೇರಬಾರದೆಂದು ಠರಾವು ಪಾಸಾಗಿದ್ದಿತು. ಆ ಪರಿಷತ್ತಿನಲ್ಲಿ ಭಾಗತೆಗೆದುಕೊಂಡದುದಕ್ಕೆ ಮಹಮ್ಮದ ಅಲಿ, ಶೌಕತಅಲಿ, ಮುಂತಾದ ಮುಖಂಡರನ್ನು ಹಿಡಿದರು. ಈ ಸುದ್ದಿಯು ತಿಳಿದ ಒಂದು ವಾರದಲ್ಲಿಯೆ ಖಿಲಾಫತ ಮುಖಂಡರೂ ದೇಶದಲ್ಲಿ ಎಲ್ಲ ಮುಖಂಡರೂ, ಕರಾಚಿಯ ಠರಾವನ್ನೆ ಸಮರ್ಥಿಸುವೆವೆಂದು ಜಾಹೀರ ಪಡಿಸಿದರು. ನೂರಾರು ಸಭೆಗಳಲ್ಲಿಯೂ ಅದೆ ಠರಾವು ಮತ್ತೆ ಪಾಸು ಮಾಡಲ್ಪಟ್ಟಿತು. ಕರಾಚಿಯಲ್ಲಿ ಖಟ್ಲೆಯ ಚೌಕಸಿಯಾಗಿ ಮಹಮ್ಮದಅಲಿ, ಶೌಕತಅಲಿ, ಮುಂತಾದವರಿಗೆ ಎರಡೆರಡು ವರ್ಷ ಶಿಕ್ಷೆಯಾಯಿತು. ಮುಂದೆ ನೊವ್ಹೆಂಬರ ೪ನೆಯ ತಾ॥ ದಿನ ಆಲ್ ಇಂಡಿಯಾ ಕಾಂಗ್ರೆಸ

ಕಮಿಟಿಯು ಸಭೆಯಾಗಿ ಪ್ರತಿಯೊಂದು ಪ್ರಾಂತದವರು ತಮ್ಮ ಹೊಣೆಯ ನ್ನರಿತು ವೈಯಕ್ತಿಕ ಇಲ್ಲವೆ ಸಾಮೂಹಿಕ ಸತ್ಯಾಗ್ರಹವನ್ನು ಪ್ರಾರಂಭಿಸ ಬಹುದೆಂದು ನಿರ್ಣಯವನ್ನು ಮಾಡಿದರು.

**(೭೭) ಯುವರಾಜರಿಗೆ ಬಹಿಷ್ಕಾರ:—** ನೊವ್ಹೆಂಬರ ೧೭ನೆಯ ತಾ। ದಿನ ಯುವರಾಜರು ಮುಂಬೈಗೆ ತಲುಪಿದರು. ಅವರ ಸತ್ಕಾರದ ಸಮಾರಂಭ ವನ್ನು ಪೂರ್ಣವಾಗಿ ಬಹಿಷ್ಕರಿಸಬೇಕೆಂದು ಈ ಮೊದಲೆ ಗೊತ್ತಾಗಿತ್ತು. ಆದರೆ ಮುಂಬೈಯಲ್ಲಿಯ ಪಾರ್ಸಿ ಜನರು ಸತ್ಕಾರದ ಸಮಾರಂಭದಲ್ಲಿ ಭಾಗತೆಗೆದುಕೊಂಡರು. ಜನರು ರೇಗಿಗೆದ್ದು ಸತ್ಕಾರ ಸಮಾರಂಭಕ್ಕೆ ಹೋಗುವ ಜನರ ಮೇಲೇರಿ ಹೋದರು. ಟ್ರಾಮ್ಯಕಾರುಗಳನ್ನು ಸುಟ್ಟರು. ೫ ದಿನಗಳವರೆಗೆ ಸರಕಾರದ ಪಕ್ಷಪಾತಿಗಳಲ್ಲಿಯೂ, ಸರಕಾರದ ವಿರೋಧಕ ರಲ್ಲಿಯೂ ಬಡಿದಾಟವು ನಡೆದಿತ್ತು. ಸೈನಿಕರೂ ಪೋಲಿಸರೂ, ಅನೇಕ ಸಲ ಗುಂಡುಗಳನ್ನು ಹಾರಿಸಬೇಕಾಯಿತು. ೫ ದಿನಗಳ ನಂತರ ದಂಗೆಯು ಶಾಂತವಾಯಿತು. ಕಲಕತ್ತಾ, ಮದ್ರಾಸ, ಲಾಹೋರ ಮುಂತಾದ ದೊಡ್ಡ ಪಟ್ಟಣಗಳಲ್ಲಿಯೂ ಯುವರಾಜನು ಬಂದದಿನ ಹರತಾಳಗಳೂ, ಸಭೆಗಳೂ ಆದವು. ನೊವ್ಹೆಂಬರ ೧೯ನೆಯ ತಾ॥ ದಿನ ಬಂಗಾಲದಲ್ಲಿಯ ಎಲ್ಲ ಸ್ವಯಂಸೇವಕ ಸಂಘಗಳು ಬೇಕಾಯದೇಶೀರ ಸಂಘಗಳೆಂದು ಜಾಹೀರನಾಮೆಯು ಹೊರಟಿತು. ಕಲಕತ್ತೆಯ ಸಾವಿರಾರು ಕಾಂಗ್ರೆಸ ಭಕ್ತರು ಬೇಕಾಯದೆಶೀರ ಸ್ವಯಂಸೇವಕರ ಸಂಘದ ಸಭಾಸದರಾದರು. ಯುವರಾಜನು ಡಿಶೆಂಬರ ೨೪ ನೆಯ ತಾ। ದಿನ ಕಲಕತ್ತೆಗೆ ಬಂದಾಗ ಪೂರ್ಣವಾಗಿ ಹರತಾಳವನ್ನು ಜರುಗಿಸಬೇಕೆಂದೂ ಜಾಹೀರನಾಮೆಯನ್ನು ಮುಖಂಡರು ಹೊರಡಿಸಿದರು. ಸರಕಾರೀ ದಬ್ಬಾಳಿಕೆಯು ಹೆಚ್ಚಾಗ ಹತ್ತಿತು. ದಿಲ್ಲಿ, ಪಂಜಾಬ, ಮತ್ತು ಸಂಯುಕ್ತಪ್ರಾಂತದ ಸರಕಾರ ದವರು ಸಭಾಬಂದಿಯ ಕಾಯದೆಯನ್ನು ಅಮಲಿನಲ್ಲಿ ತಂದರು. ಅಲ್ಲಾ ಬಾದ ಚಿತಗಾಂಗ ಮುಂತಾದ ದೊಡ್ಡ ಪಟ್ಟಣದಲ್ಲೆಲ್ಲ ಸಭೆಗಳು ನಿಲ್ಲಿಸಲ್ಪ ಟ್ಟವು. ವ್ಹಾಯಿಸರಾಯರು ಒಂದು ಭಾಷಣದಲ್ಲಿ ಇನ್ನುಮುಂದೆ ಸರಕಾರದವರು ಶಾಂತತೆಯನ್ನು ಕಾಯಲು ಯೋಗ್ಯವಾದ ಉಪಾಯವನ್ನು ಕೈಕೊಳ್ಳಲು ಹಿಂಜರಿಯುವದಿಲ್ಲವೆಂದು ಹೇಳಿದರು.

ನವಂಬರ ಡಿಸೆಂಬರ ತಿಂಗಳಲ್ಲಿ ಗಂಗಾಧರರಾವ ದೇಶಪಾಂಡೆ, ಚಿತ್ತರಂಜನದಾಸ, ಜಿತೇಂದ್ರಲಾಲ ಬಾನರ್ಜಿ, ಫೂಖನ್, ಲಾಲಾಲಜಪತರಾಯ, ಪಂಡಿತ ಮೋತಿಲಾಲ ನೆಹ್ರು, ಜವಾಹರಲಾಲನೆಹ್ರು, ಮುಂತಾದ ಮುಖಂಡರನ್ನು ಹಿಡಿದು ಶಿಕ್ಷೆಯನ್ನು ಕೊಟ್ಟರು. ಇವೆರಡು ತಿಂಗಳಲ್ಲಿ ದೇಶದ ಎಲ್ಲ ಭಾಗಗಳಲ್ಲಿಯೂ ಶಿಕ್ಷೆಗಳ ಸತ್ರವೇ ನಡೆಯಿತು. ಪಂಜಾಬದಲ್ಲಿ ಕಾಂಗ್ರೆಸ ಖಿಲಾಫತ ಸಂಸ್ಥೆಗಳು ಬೇಕಾಯದೆಶೀರ ಸಂಘಗಳೆಂದು ಜಾಹೀರ ಪಡಿಸಲ್ಪಟ್ಟವು. ಕಲಕತ್ತೆಯಲ್ಲಿ ಖಾದಿಯನ್ನು ಮಾರಿದ ತಪ್ಪಿಗಾಗಿ ೫೦ ಜನ ಹೆಂಗಸರನ್ನು ಹಿಡಿದರು. ಬಿಹಾರದಲ್ಲಿಯೂ ಕಾಂಗ್ರೆಸ ಸಂಸ್ಥೆಯು ಬೇಕಾಯದೆಶೀರ ಸಂಘವೆಂದು ಜಾಹೀರ ಪಡಿಸಲ್ಪಟ್ಟಿತು. ಯುವರಾಜರು ಅಲಹಾಬಾದ ಕಾಶಿ ಮುಂತಾದ ಕಡೆಗೆ ಹೋದಾಗ ಪೂರ್ಣವಾಗಿ ಹರತಾಳವು ಆಚರಿಸಲ್ಪಟ್ಟಿತು. ಡಿಸೆಂಬರ ತಿಂಗಳಲ್ಲಿ ಬಂಗಾಲದಲ್ಲಿಯಂತೂ ಸರಕಾರಿ ಅಧಿಕಾರಿಗಳಿಗೂ ಸೆರೆಮನೆಯನ್ನು ಸೇರಲು ಉತ್ಸುಕರಾದ ಕಾಂಗ್ರೆಸ ಸ್ವಯಂಸೇವಕರಿಗೂ ಒಂದು ತರಹದ ಏರಾಟಿಕೆಯೆ ಪ್ರಾರಂಭವಾದಂತಾಯಿತು. ಸರಕಾರದ ದಬ್ಬಾಳಿಕೆಯು ನಿಷೇಧವೆಂದು ಮದ್ರಾಸಿನ ಅಡ್ವೋಕೇಟ ಜನರಲರಾದ ಶ್ರೀನಿವಾಸ ಐಯಂಗಾರರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟರು. ಕಲಕತ್ತೆಯಲ್ಲಿಯಂತೂ ಸತ್ಯಾಗ್ರಹಕ್ಕೆ ಒಳ್ಳೆ ಕಳೆಯೇರಿತು. ಡಿಸೆಂಬರದ ೧೪ನೆಯ ತಾ॥ ನದಿನ ಕಲಕತ್ತೆಯಲ್ಲಿ ೭೦ ಸ್ವಯಂಸೇವಕರನ್ನು ಹಿಡಿದರು. ಮರುದಿನ ೨೦೦ ಸ್ವಯಂಸೇವಕರು ಹೊರಬಿದ್ದರು; ೧೨೦ ಜನರನ್ನು ಹಿಡಿದರು. ೧೬ನೆಯ ತಾರಿಕಿನ ದಿನ ೪೦೦ ಜನರಲ್ಲಿ ೧೨೦ ಜನರನ್ನು ಹಿಡಿದರು. ೧೭ನೆಯ ತಾರೀಕಿನ ದಿನ ೪೫೦ ಸ್ವಯಂಸೇವಕರು ಹೊರಬಿದ್ದರು; ೨೫೦ ಜನರನ್ನು ಹಿಡಿದರು. ೧೮ನೆಯ ತಾರೀಕಿನ ದಿನ ೭೦೦ ಸ್ವಯಂಸೇವಕರಲ್ಲಿ ೩೦೦ ಜನರನ್ನು ಹಿಡಿದರು. ಹೀಗೆ ದಿನದಿನಕ್ಕೆ ಸೆರೆಮನೆಯನ್ನು ಸೇರುವವರ ಸಂಖ್ಯೆಯು ಬೆಳೆಯಹತ್ತಿತು. ೨೩ನೆಯ ತಾರಿಕಿನ ದಿನವಂತೂ ೨೦೦೦ ಸ್ವಯಂಸೇವಕರು ಹೊರಬಿದ್ದರು; ೫೦೦ ಜನರನ್ನು ಹಿಡಿದರು. ೨೪ನೆಯ ತಾರೀಕಿನ ದಿನ ಕಲಕತ್ತೆಯಲ್ಲಿ ಸಂಪೂರ್ಣವಾಗಿ ಹರತಾಳವಾಯಿತು. ಯುವರಾಜರು ಮುಂದೆ ಹೋದಹೋದಲ್ಲೆಲ್ಲ ಹರತಾಳವೇ ಆಯಿತು. ಎಲ್ಲಿಯೂ ಬಹಳ ಜನರು ಅವರನ್ನು ಸ್ವಾಗತಿಸಲಿಲ್ಲ.

(೭೮) **ಅಹಮದಾಬಾದಿನ ಕಾಂಗ್ರೆಸ್ಸು**:— ಡಿಸೆಂಬರ ತಿಂಗಳಲ್ಲಿ ಕಾಂಗ್ರೆಸ್ಸಿನ ಅಧಿವೇಶನವು ಅಹಮದಾಬಾದಿನಲ್ಲಿ ಕೂಡಿತು. ದೇಶದಲ್ಲಿಯ ೨೦ ಸಾವಿರ ಜನರು ಸೆರೆಮನೆಯನ್ನು ಸೇರಿದ್ದರಿಂದ ದೇಶದಲ್ಲಿ ಹೊಸ ಚೈತನ್ಯವು ಸಂಚರಿಸಿತ್ತು. ಕಾಂಗ್ರೆಸ್ಸಿಗೆ ಅಧ್ಯಕ್ಷರಾಗಬೇಕೆಂದು ಆರಿಸಲ್ಪಟ್ಟ ಚಿತ್ತರಂಜನದಾಸರು ಸೆರೆಮನೆಯನ್ನು ಸೇರಿದ್ದರಿಂದ ಹಕೀಮ ಅಜಮಲ್‌ಖಾನರು ಅಧ್ಯಕ್ಷರಾಗಿದ್ದರು. ಈ ಕಾಂಗ್ರೆಸ್ಸಿನಲ್ಲಿ ಅನೇಕ ತರಹದ ಹೊಸ ಮಾರ್ಪಾಟುಗಳು ಆದವು. ಸಭಾಸ್ಥಾನದಲ್ಲಿ ಪ್ರತಿನಿಧಿಗಳಿಗೆ ಕೂಡಲು ಖುರ್ಚಿ ಮೇಜುಗಳೂ ಇದ್ದಿಲ್ಲ. ಎಲ್ಲರು ನೆಲದಮೇಲೆ ಕೂತರು. ಶುಭ್ರ ಖಾದಿಯನ್ನು ಎಲ್ಲ ಸಭಾಸದರು ಧರಿಸಿದ್ದರು. ಸಭೆಯ ಕಾರ್ಯವೆಲ್ಲವೂ ಹಿಂದಿಯಲ್ಲಿಯೆ ಜರುಗಿತು, ಕಾಂಗ್ರೆಸದ ಈ ಅಧಿವೇಶನದಲ್ಲಿ ಸ್ವರಾಜ್ಯವು ಸ್ಥಾಪಿಸಲ್ಪಡುವವರೆಗೆ ಅಸಹಕಾರವನ್ನು ಮುಂದೆ ಸಾಗಿಸಬೇಕೆಂದೂ ಕಾಂಗ್ರೆಸ್ಸಿನ ಉಳಿದ ಎಲ್ಲ ಕಾರ್ಯಗಳನ್ನು ನಿಲ್ಲಿಸಿ ಸ್ವಯಂಸೇವಕರಾಗಿ ಜನರು ಸೆರೆಮನೆಯನ್ನು ಸೇರಬೇಕೆಂದೂ ಸರಕಾರದ ಕಟ್ಟಳೆಯನ್ನು ಮನ್ನಿಸದೆ ಸಾರ್ವಜನಿಕ ಸಭೆಗಳನ್ನು ಸೇರಿಸಬೇಕೆಂದೂ ಶಕ್ಯವಿದ್ದಲ್ಲಿ ವೈಯಕ್ತಿಕ ಮತ್ತು ಸಾಮೂಹಿಕ ಸತ್ಯಾಗ್ರಹವನ್ನು ಏರ್ಪಡಿಸಬೇಕೆಂದೂ ಉಳಿದ ಎಲ್ಲ ಚಟುವಟಿಕೆಗಳನ್ನು ತುರ್ತಕ್ಕೆ ನಿಲ್ಲಿಸಬೇಕೆಂದೂ ಮ. ಗಾಂಧಿಯವರಿಗೆ ಕಾಂಗ್ರೆಸ್ಸಿನ ಸಂಪೂರ್ಣ ಅಧಿಕಾರಗಳು ಕೊಡಲ್ಪಡಬೇಕೆಂದೂ ನಿರ್ಧರಿಸಲ್ಪಟ್ಟಿತು.

ಹಜರತ್ ಮೋಹನಿಯವರು ತಂದ ಸಂಪೂರ್ಣ ಸ್ವಾತಂತ್ರ್ಯದ ಠರಾವು ಪಾಸಾಗಲಿಲ್ಲ. ಕಾಂಗ್ರೆಸ್ಸಿನ ವಿಧಾಯಕ ಕಾರ್ಯಕ್ರಮದಲ್ಲಿ ಉಳಿದ ಎಲ್ಲ ಪಕ್ಷದವರೂ ಕೂಡಿಕೊಳ್ಳಬೇಕೆಂದು ಠರಾವು ಪಾಸಾಯಿತು. ಕಾಂಗ್ರೆಸ್ಸಿನ ಕಾರ್ಯವು ಮುಗಿದನಂತರ ಗಾಂಧಿಯವರು ಪ್ರತಿಯೊಂದು ಪ್ರಾಂತದ ಪ್ರತಿನಿಧಿಗಳನ್ನು ಭೆಟ್ಟಿಯಾಗಿ ಕಾಯದೆಭಂಗದ ಕಾರ್ಯಕ್ರಮವನ್ನು ತಿಳಿಸಿ ಹೇಳಿದರು.

ಯುವರಾಜರು ಕಲಕತ್ತೆಗೆ ಬರುವದಕ್ಕಿಂತ ಮೊದಲೆ ಪಂಡಿತ ಮಾಲವಿಯರ ಮುಖಾಂತರವಾಗಿ ಸರಕಾರ ಮತ್ತು ಕಾಂಗ್ರೆಸ್ ಇವೆರಡರ ನಡುವೆ ಸಂಧಿಯ ಪ್ರಯತ್ನಗಳು ನಡೆದಿದ್ದವು, ಲಾರ್ಡ ರೀಡಿಂಗರು ಆ ಸಮಯಕ್ಕೆ

ಕಲಕತ್ತೆಯಲ್ಲಿದ್ದರು. ದಾಸರು ಅಲೀಪೂರ ಜೇಲಿನಲ್ಲಿದ್ದರು. ಬೇಕಾಯದೆ ಶೀರ ಸಂಘದ ಸಭಾಸದರೆಂದು ಸೆರೆಮನೆಯನ್ನು ಸೇರಿದವರೆಲ್ಲರನ್ನೂ ಬಿಡ ಬೇಕೆಂದು ದಾಸರು ಹೇಳಿದರು. ಸತ್ಯಾಗ್ರಹದಲ್ಲಿ ಸೆರೆಮನೆಗೆ ಹೋದವ ರನ್ನು ಬಿಡಲು ಕಾಂಗ್ರೆಸ್ಸಿನ ೨೨ ಪ್ರತಿನಿಧಿಗಳನ್ನೊಳಗೊಂಡ ದುಂಡು ಮೇಜಿನ ಪರಿಷತ್ತನ್ನು ಕರೆಯಲು ಸರಕಾರದವರು ಒಪ್ಪಿಕೊಂಡರು; ಆದರೆ ಕರಾಚಿಯಲ್ಲಿ ಶಿಕ್ಷೆಹೊಂದಿದ ಅಲಿಬಂಧುಗಳನ್ನು ಬಿಡಲಿಕ್ಕೂ ಪಿಕೇಟಿಂಗಿನ ಪಕ್ಕನ್ನು ಮನ್ನಿಸಲಿಕ್ಕೂ ಸರಕಾರದವರು ಸಿದ್ಧರಾಗಲಿಲ್ಲ. ಒಪ್ಪಂದದ ಪ್ರಯತ್ನಗಳನ್ನು ಮತ್ತೊಮ್ಮೆ ಮಾಡಿ ನೋಡಲು ಮುಂಬೈ ಯಲ್ಲಿ ೧೯೨೨ ನೆಯ ಇಸ್ವಿಯ ಜಾನೆವರಿ ೧೪-೧೫ ತಾರೀಕುಗಳ ದಿನ ದೇಶದಲ್ಲಿಯ ಎಲ್ಲ ಪ್ರತಿನಿಧಿಗಳ ಸಭೆಯಾಯಿತು. ಸರಕಾರದವರು ತಮ್ಮ ದಬ್ಬಾಳಿಕೆಯ ಧೋರಣವನ್ನು ಕೂಡಲೆ ನಿಲ್ಲಿಸಬೇಕೆಂದೂ, ರಾಷ್ಟ್ರದ ಬೇಡಿಕೆಗಳನ್ನು ಸಾಧಿಸಲು ಎರಡನೆಯ ಉಪಾಯಗಳು ಇಲ್ಲವೆಂದು ಕಾಣುವವರೆಗೆ ಅಹಮ್ಮದಾಬಾದ ಕಾಂಗ್ರೆಸ್ಸಿನಲ್ಲಿ ನಿರ್ಣೀತವಾದ ಕಾಯದೆ ಭಂಗದ ಕಾರ್ಯಕ್ರಮವನ್ನು ಅಮಲಿನಲ್ಲಿ ತರಬಾರದೆಂದೂ, ಸರಕಾರ ಮತ್ತು ಜನತೆಯ ಪ್ರತಿನಿಧಿಗಳ ನಡುವೆ ಶಾಂತಿಯನ್ನು ಹುಟ್ಟಿಸಲಿಕ್ಕೆ ದುಂಡುಮೇಜಿನ ಪರಿಷತ್ತನ್ನು ಕೂಡಿಸುವದು ಅವಶ್ಯವಾದುದೆಂದೂ, ಈ ಪರಿಷತ್ತಿಗೆ ಅನುಕೂಲವಾದ ವಾತಾವರಣವನ್ನು ಹುಟ್ಟಿಸಲು ಎಲ್ಲ ರಾಜಕೀಯ ಕೈದಿಗಳನ್ನು ಬಿಡಬೇಕೆಂದೂ, ಠರಾವುಗಳು ಪಾಸಾದವು. ಪರಿಷತ್ತಿನ ಪ್ರಯತ್ನಗಳಿಗೆ ಯಶಸ್ಸು ಬರುವುದೊ ಹೇಗೆ ಎಂಬು ದನ್ನು ನೋಡಲು ವರ್ಕಿಂಗ ಕಮಿಟಿಯವರು ಅಸಹಕಾರದ ಕಾರ್ಯ ಕ್ರಮವನ್ನು ೧೫ ದಿನಗಳವರೆಗೆ ನಿಲ್ಲಿಸಿದರು.

(೭೯) **ಬಾರ್ಡೋಲಿ-ಚೌರಿ ಚೌರಾ:**— ಫೆಬ್ರುವರಿ ೪ನೆಯ ತಾ। ದಿನ ಮಹಾತ್ಮಾ ಗಾಂಧಿಯವರು ವ್ಹಾಯಿಸರಾಯರಿಗೆ ಪತ್ರವನ್ನು ಬರೆದು ಸರಕಾರದವರು ತಮ್ಮ ದಬ್ಬಾಳಿಕೆಯ ಧೋರಣವನ್ನು ನಿಲ್ಲಿಸಿ ಜನತೆಯ ಬೇಡಿಕೆಗಳನ್ನು ಮನ್ನಿಸುವೆವೆಂದು ೭ ದಿನಗಳಲ್ಲಿ ಜಾಹೀರಪಡಿಸದಿದ್ದರೆ ಬಾರ್ಡೋಲಿ ತಾಲೂಕಿನಲ್ಲಿ ಸಾಮೂಹಿಕ ಸತ್ಯಾಗ್ರಹವನ್ನು ಪ್ರಾರಂಭಿ ಸುವರೆಂದು ತಿಳಿಸಿದರು. ಸರಕಾರದವರು ಆ ಪತ್ರಕ್ಕೆ ಉತ್ತರವನ್ನಿತ್ತು

ದಬ್ಬಾಳಿಕೆಯ ಧೋರಣವನ್ನು ಸಮರ್ಥಿಸಿ ಸಾಮೂಹಿಕ ಸತ್ಯಾಗ್ರಹವನ್ನು ಕಠೋರತನದಿಂದ ಮುರಿದುಬಿಡುವೆವೆಂದು ಜಾಹೀರಪಡಿಸಿದರು. ಬಾರ್ಡೋಲಿಯಲ್ಲಿ ಸತ್ಯಾಗ್ರಹದ ಸಿದ್ಧತೆಗೆ ಪ್ರಾರಂಭವಾಯಿತು. ಜಾನೆವರಿ ೩೬ನೆಯ ತಾರೀಖಿನ ದಿವಸ ಮಹಾತ್ಮರು ಬಾರ್ಡೋಲಿಯಲ್ಲಿ ಕರಬಂದಿಯ ಚಳವಳಿಯನ್ನು ಹೂಡಲು ತಳವೂರಿದರು. ೨೦ನೆಯ ತಾರೀಖಿನ ದಿನ ತಾಲೂಕಿನ ಎಲ್ಲಭಾಗಗಳಿಂದ ೪೦೦೦ ಸತ್ಯಾಗ್ರಹಿಗಳು ಸೇರಿ ಸಾಮೂಹಿಕ ಸತ್ಯಾಗ್ರಹದ ನಿಶ್ಚಯವನ್ನು ಮಾಡಿದರು. ಮರುದಿನ ವರ್ಕಿಂಗ ಕಮಿಟಿಯ ಸಭೆ ಸೇರಿ ದೇಶದಲ್ಲಿಯ ಎಲ್ಲ ಜನರು ಬಾರ್ಡೋಲಿಗೆ ಸಹಾಯಮಾಡಬೇಕೆಂದು ಬಿನ್ನವಿಸಿದರು. ಈ ಕ್ಷಣಕ್ಕೆ ಅಖಂಡ ಹಿಂದುಸ್ಥಾನದ ಕಣ್ಣುಗಳು ಬಾರ್ಡೋಲಿಯ ಮೇಲಿದ್ದವು. ಆದರೆ ಫೆಬ್ರುವರಿ ೫ ನೆಯ ತಾರೀಖಿನ ಸಂಯುಕ್ತ ಪ್ರಾಂತದಲ್ಲಿಯ ಚೌರೀ ಚೌರಾ ಎಂಬಲ್ಲಿ ೩೦೦೦ ಜನರು ಕೂಡಿ ಪೋಲೀಸಚೌಕಿಯನ್ನೂ ಪೊಲೀಸರನ್ನೂ ಸುಟ್ಟುಬಿಟ್ಟರು. ಈ ಸುದ್ದಿಯನ್ನು ಕೇಳಿ ವರ್ಕಿಂಗ ಕಮಿಟಿಯವರು ೧೧-೧೨ ತಾ. ದಿನ ಬಾರ್ಡೋಲಿಯಲ್ಲಿ ಸಭೆಯನ್ನು ಸೇರಿಸಿ ಸಾಮೂಹಿಕ ಸತ್ಯಾಗ್ರಹವನ್ನು ಮುಂದೆಹಾಕುವ ನಿರ್ಣಯವನ್ನು ಪಾಸುಮಾಡಿದರು. ದೇಶದಲ್ಲಿ ಶಾಂತತೆಯು ಉಂಟಾಗುವ ಉದ್ದೇಶದಿಂದ ಅಸಹಕಾರದ ಉಗ್ರ ಕಾರ್ಯಕ್ರಮವೆಲ್ಲವೂ ನಿಲ್ಲಿಸಲ್ಪಡಬೇಕೆಂದೂ, ೧ ಕೋಟಿ ಕಾಂಗ್ರೆಸ ಸಭಾಸದರನ್ನು ಮಾಡುವದೂ ಖಾದಿಯನ್ನು ಪ್ರೋತ್ಸಾಹಿಸುವದೂ ಅಸ್ಪೃಶ್ಯೋದ್ಧಾರವನ್ನು ಮಾಡುವದೂ ಸೆರೆಕುಡಿತವನ್ನು ನಿಲ್ಲಿಸುವದೂ ಹಳ್ಳಿಗಳಲ್ಲಿ ಪಂಚಾಯತಿಗಳನ್ನು ಸ್ಥಾಪಿಸುವದೂ ದೇಶದ ಎಲ್ಲ ಪಂಗಡಗಳಲ್ಲಿ ಒಕ್ಕಟ್ಟನ್ನು ಬೆಳೆಯಿಸುವದೂ ಟಿಳಕ ಸ್ಮಾರಕ ನಿಧಿಯನ್ನು ಕೂಡಿಸುವದೂ ಇವೆ ಮುಂತಾದ ವಿಧಾಯಕ ಕಾರ್ಯಕ್ರಮಗಳಲ್ಲಿ ದೇಶದ ಕಾರ್ಯಕರ್ತರು ತೊಡಗಬೇಕೆಂದೂ ಠರಾವು ಪಾಸಾಯಿತು. ಆಲ್ ಇಂಡಿಯಾ ಕಾಂಗ್ರೆಸ ಕಮಿಟಿಯ ಸಭೆಯು ದಿಲ್ಲಿಯಲ್ಲಿ ೨೪ನೆಯ ತಾರೀಖಿನ ದಿನ ಸೇರಿ ವೈಯಕ್ತಿಕ ಸತ್ಯಾಗ್ರಹಕ್ಕೆ ಪರವಾನಿಗೆ ಕೊಡಲ್ಪಟ್ಟಿತು. ಯಂಗ ಇಂಡಿಯಾದಲ್ಲಿ ಬರೆದ ಕೆಲವು ಲೇಖಗಳಿಗಾಗಿ ರಾಜದ್ರೋಹದ ಆರೋಪದ ಮೇಲೆ ಮಹಾತ್ಮರನ್ನು ಮಾರ್ಚ ೧೦ನೆಯ ತಾರೀಖಿನ ದಿನ ಹಿಡಿದರು. ೧೮ನೆಯ ತಾರೀಖಿನ ದಿನ ಅಹಮ್ಮದಾಬಾದದಲ್ಲಿ ಖಟ್ಲೆಯು ಪ್ರಾರಂಭವಾಯಿತು. ಮಹಾತ್ಮರು ತಮ್ಮ ಮೇಲಿನ

ಆರೋಪವನ್ನು ಒಪ್ಪಿಗೊಂಡು ತಾವು ರಾಜದ್ರೋಹಿಗಳು ಏಕೆ ಆದೆವೆಂಬು ದನ್ನು ವಿಸ್ತೃತವಾಗಿ ಹೇಳಿದರು. ದೇಶದಲ್ಲಿ ನಡೆದ ಎಲ್ಲ ಅತ್ಯಾಚಾರಗಳ ಹೊಣೆಯನ್ನು ಅವರು ತಮ್ಮ ಮೇಲೆಯೆ ತೆಗೆದುಕೊಂಡರು. "ನಾನು ಒಬ್ಬ ಹೊಣೆಗಾರ ಮನುಷ್ಯನು, ಶಿಕ್ಷಣವನ್ನು ಹೊಂದಿದವನು; ಆದುದ ರಿಂದ ನನ್ನ ಕೃತಿಗಳ ಪರಿಣಾಮವೇನಾಗುವದೆಂಬದನ್ನು ಬಲ್ಲವನು. ಹೌದು, ನನ್ನ ಕೃತಿಗಳ ಪರಿಣಾಮವು ನನಗೆ ಗೊತ್ತಿತ್ತು. ನಾನು ಬೆಂಕಿ ಯೊಡನೆ ಆಡುತ್ತಿದ್ದೆನೆಂಬುದು ನನಗೆ ಗೊತ್ತಿತ್ತು. ನನ್ನನ್ನು ಈಗ ಬಿಟ್ಟು ಬಿಟ್ಟರೆ ಮತ್ತೆ ಬೆಂಕಿಯೊಡನೆ ಆಡತೊಡಗುವೆನು—ನಾನು ಹಾಗೆ ಮಾಡ ದಿದ್ದರೆ ನನ್ನ ಕರ್ತವ್ಯವನ್ನು ನಾನು ಮಾಡಿದಂತಾಗುವದಿಲ್ಲ. ಅತ್ಯಾಚಾರ ವನ್ನು ತಪ್ಪಿಸಬೇಕೆಂದು ನನ್ನ ನಿಶ್ಚಯವಿದೆ. ಅನತ್ಯಾಚಾರವು ನನ್ನ ಅಚಲ ಧರ್ಮವಾಗಿದೆ. ನನ್ನ ದೇಶಕ್ಕೆ ಅಪಾರಹಾನಿಯನ್ನು ಮಾಡಿದ ರಾಜ್ಯ ಪದ್ಧತಿಯು ಒಂದೆಡೆಗೆ, ನನ್ನಿಂದ ನಿಜವಾದ ಮಾತನ್ನು ತಿಳಿದು ತಲೆಕೆಟ್ಟ ಜನತೆಯ ರೋಷಾಗ್ನಿ ಇನ್ನೊಂದೆಡೆಗೆ; ನಾನು ಇವೆರಡರಲ್ಲಿ ಒಂದನ್ನು ಆರಿಸಬೇಕಾಗಿತ್ತು. ನನ್ನ ಜನರು ಕೆಲವು ಸಲ ಹುಚ್ಚರಂತೆ ವರ್ತಿಸಿರುವರು. ಇದಕ್ಕಾಗಿ ನಾನು ವಿಷಾದಿಸುವೆನು. ಆದರೆ ನನ್ನ ವಿಷಯದಲ್ಲಿ ದಯೆ ಯನ್ನು ತೋರಿರೆಂದು ನಾನು ಹೇಳಲಾರೆ. ನಾನು ಮಾಡಿದ ಕೃತಿಗಳು ಕಾಯದೆಯ ದಷ್ಟಿಯಿಂದ ಅಪರಾಧಗಳಿದ್ದರೂ ನನ್ನ ದೃಷ್ಟಿಯಿಂದ ಅವು ನಾಗರಿಕನ ಶ್ರೇಷ್ಠ ಕರ್ತವ್ಯಗಳಾಗಿವೆ. ಆದುದರಿಂದ ನೀವು ಕೊಡತಕ್ಕ ಎಲ್ಲಕ್ಕೂ ಹೆಚ್ಚಿನ ಶಿಕ್ಷೆಯನ್ನು ನಾನು ಆನಂದದಿಂದ ಸ್ವೀಕರಿಸುವೆನು. ನೀವು ಅಮಲಿನಲ್ಲಿ ತರಬೇಕಾದ ಕಾಯದೆಯು ಅನ್ಯಾಯದ್ದಿದ್ದು, ನಾನು ನಿರಪರಾಧಿಯೆಂದು ತೋರಿದರೆ ನೀವು ನಿಮ್ಮ ಕೆಲಸಕ್ಕೆ ರಾಜೀನಾಮೆ ಕೊಡುವದು ಒಳಿತು. ಆದರೆ ಆ ಕಾಯದೆಗಳು ಜನರ ಹಿತಕ್ಕಾಗಿವೆಯೆಂದೂ ನನ್ನ ಕೃತಿಗಳಿಂದ ಜನರಿಗೆ ಹಾನಿಯಾಗುವದೆಂದೂ ನಿಮಗೆ ಅನಿಸಿದರೆ ನನಗೆ ಆದಷ್ಟು ಹೆಚ್ಚಿಗೆ ಶಿಕ್ಷೆಯನ್ನು ವಿಧಿಸುವದೆ ನಿಮ್ಮ ಕರ್ತವ್ಯವು" ಎಂದು ಹೇಳಿದರು.

(೮೦) **ಸೆರೆಮನೆವಾಸ**:— ಮಹಾತ್ಮಾಗಾಂಧಿಯವರಿಗೆ ೬ ವರ್ಷದ ಸಾದಾಶಿಕ್ಷೆ ವಿಧಿಸಲ್ಪಟ್ಟಿತು. ಮಹಾತ್ಮಾಗಾಂಧಿಯವರ ಶಿಕ್ಷೆಯೊಡನೆ

ಕಾಯದೆಭಂಗದ ಚಳವಳಿಯು ತಣ್ಣಗಾಯಿತು. ಪ್ರಮುಖ ಮುಖಂಡ ರೆಲ್ಲರೂ ಆ ಹೊದಲೆ ಸೆರೆಮನೆಯಲ್ಲಿದ್ದರು. ಅಸಹಕಾರದ ಆಂದೋಲನದಲ್ಲಿ ೩೫–೩೦ ಸಾವಿರ ಜನರು ಸೆರೆಮನೆಯನ್ನು ಸೇರಿದರು. ಮಹಾತ್ಮಾ ಗಾಂಧಿಯವರಿಗೆ ಶಿಕ್ಷೆಯಾದನಂತರ ದೇಶದಲ್ಲಿ ಸತ್ಯಾಗ್ರಹವನ್ನು ಸಾಗಿಸ ಬೇಕೋ ನಿಲ್ಲಿಸಬೇಕೋ ಎಂಬುದನ್ನು ವಿಚಾರಿಸಲು ಆಲ್ ಇಂಡಿಯಾ ಕಾಂಗ್ರೆಸ ಕಮೀಟಿಯವರು ಒಂದು ಕಮೀಟಿಯನ್ನು ನೇಮಿಸಿದರು. ಆ ಕಮೀಟಿಯವರು ದೇಶದಲ್ಲೆಲ್ಲ ತಿರುಗಾಡಿ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ವಿಚಾರಿಸಿ ದೇಶವು ತೂರ್ತಕ್ಕೆ ಸಾಮೂಹಿಕ ಸತ್ಯಾಗ್ರಹಕ್ಕೆ ಸಿದ್ಧವಿಲ್ಲ ವೆಂದೂ ಮತ್ತು ತಾತ್ಪೂರ್ತಿಕ ಸತ್ಯಾಗ್ರಹವನ್ನು ಕೈಕೊಳ್ಳಲು ಪ್ರಾಂತಿಕ ಕಾಂಗ್ರೆಸ ಕಮೀಟಿಯ ಅಧಿಕಾರಗಳನ್ನು ಕೊಡಬೇಕೆಂದೂ ಸರಕಾರೀ ಶಾಲೆಕಾಲೇಜುಗಳ ಮೇಲಿನ ಬಹಿಷ್ಕಾರ ಮುಂದೆ ಸಾಗ ಬೇಕೆಂದೂ ಮುನ್ಸಿಪಾಲ್ಟಿ ಲೋಕಲ್‌ಬೋರ್ಡ ಮುಂತಾದವುಗಳಲ್ಲಿ ಅಸಹಕಾರಿಗಳು ಸೇರುವದು ಇಷ್ಟವಿದೆಯೆಂದೂ ಕೋರ್ಟಿನ ಮೇಲಿನ ಬಹಿಷ್ಕಾರ ತೆಗೆದುಹಾಕಬೇಕೆಂದೂ ಬಹುಮತದಿಂದ ಸೂಚಿಸಿದರು. ಸರಕಾರದೊಡನೆ ರಾಷ್ಟ್ರದ ಬೇಡಿಕೆಗಾಗಿ ಹೋರಾಡಲು ಕೌನ್ಸಿಲುಗಳನ್ನು ಪ್ರವೇಶಿಸಬೇಕೆಂದು ಹಕೀಮ ಅಜಮಲಖಾನ, ಮೋತಿಲಾಲ ನೆಹರು, ವಿಠ್ಠಲಭಾಯಿ ಪಟೇಲರೂ, ಅಭಿಪ್ರಾಯಪಟ್ಟರು. ಕೌನ್ಸಿಲ ಬಹಿಷ್ಕಾರ ವನ್ನು ಹಾಗೆಯೆ ಮುಂದೆಸಾಗಿಸಬೇಕೆಂದು ಡಾ॥ ಅನ್ಸಾರಿ, ರಾಜ ಗೋಪಾಳಾಚಾರಿ, ಮತ್ತು ಕಸ್ತೂರಿರಂಗ ಐಯ್ಯಂಗಾರರೂ ಅಭಿಪ್ರಾಯ ಪಟ್ಟರು. ನೊವ್ಹೆಂಬರ ತಿಂಗಳ ೨೦ರಿಂದ ೨೪ ತಾರೀಕುಗಳವರೆಗೆ ಆಲ್ ಇಂಡಿಯಾ ಕಾಂಗ್ರೆಸ ಕಮೀಟಿಯ ಸಭೆಯು ಸೇರಿ ಕೌನ್ಸಿಲ ಪ್ರವೇಶದ ವಿಷಯವನ್ನು ಮುಂದಿನ ಕಾಂಗ್ರೆಸ್ಸಿಗೆ ಬಿಟ್ಟುಬಿಡಬೇಕೆಂದು ಗೊತ್ತಾ ಯಿತು. ೧೯೨೨ರ ಡಿಸೆಂಬರ ತಿಂಗಳಲ್ಲಿ ಕಾಂಗ್ರೆಸ್ಸಿನ ೩೭ನೆಯ ಅಧಿವೇ ಶನವು ಬಂಗಾಲದ ಸುಪ್ರಸಿದ್ಧ ಮುಂದಾಳುಗಳಾದ ದೇಶಬಂಧು ಚಿತ್ತರಂಜನ ದಾಸರ ಅಧ್ಯಕ್ಷತೆಯಲ್ಲಿ ಬಹಳ ಉತ್ಸಾಹದಿಂದ ನೆರವೇರಿತು. ಕೌನ್ಸಿಲ ಪ್ರವೇಶ ಮತ್ತು ಕೌನ್ಸಿಲ ಬಹಿಷ್ಕಾರ ಇವುಗಳ ವಿಷಯಕ್ಕೆ ನಿಕರದ ಚರ್ಚೆಯಾಗಿ ಕೌನ್ಸಿಲ ಬಹಿಷ್ಕಾರವೇ ಸಮ್ಮತಿಸಲ್ಪಟ್ಟಿತು. ಕಾಯದೆಭಂಗ

ಕ್ಕಾಗಿ ರಾಷ್ಟ್ರದವರು ಸಿದ್ಧತೆಯನ್ನು ಮಾಡಬೇಕೆಂದು ಗೊತ್ತಾಯಿತು. ಶಾಲೆಕಾಲೇಜುಗಳ ಬಹಿಷ್ಕಾರವನ್ನು ಮುಂದೆ ಸಾಗಿಸಬೇಕೆಂದು ಗೊತ್ತಾಯಿತು. ಕಾಂಗ್ರೆಸ್ಸು ಮುಗಿದಕೂಡಲೆ ದಾಸರು ಅಧ್ಯಕ್ಷಪದವಿಗೆ ರಾಜೀನಾಮೆ ಕೊಟ್ಟು ಕೌನ್ಸಿಲ ಪ್ರವೇಶಕ್ಕೆ ಅನುಕೂಲವಿರುವ ಸ್ವರಾಜ್ಯ ಪಕ್ಷವನ್ನು ಸ್ಥಾಪಿಸಿದರು. ೧೯೨೩ರಲ್ಲಿ ಕೌನ್ಸಿಲ ಪ್ರವೇಶದ ವಿಷಯಕ್ಕೆ ವಾದವು ಸಂತತವಾಗಿ ನಡೆದಿತ್ತು. ಮೇ ತಿಂಗಳಲ್ಲಿ ನಾಗಪೂರದಲ್ಲಿ ರಾಷ್ಟ್ರೀಯ ಧ್ವಜವನ್ನು ಓಣಿಯೊಳಗಿಂದ ಒಯ್ಯಲು ಸರಕಾರದವರು ಅಡ್ಡಿಮಾಡಿದ್ದರಿಂದ ವಲ್ಲಭಭಾಯಿ ಪಟೇಲರ ನೇತೃತ್ವದಲ್ಲಿ ಸತ್ಯಾಗ್ರಹವು ಏರ್ಪಡಿಸಲ್ಪಟ್ಟು ಯಶಸ್ವಿಯಾಗಿ ಕೊನೆಗಂಡಿತು. ಕಾಂಗ್ರೆಸ್ಸಿನ ವಿಶೇಷ ಅಧಿವೇಶನವು ಮೌಲಾನಾ ಅಬುಲ ಕಲಮ ಅಝಾದ ಇವರ ಅಧ್ಯಕ್ಷತೆಯಲ್ಲಿ ಸಪ್ಟಂಬರ ತಿಂಗಳ ಮೂರನೇ ವಾರದಲ್ಲಿ ದಿಲ್ಲಿಯಲ್ಲಿ ನೆರವೇರಿತು. ಕೌನ್ಸಿಲಿನಲ್ಲಿ ಇಚ್ಛೆ ಇದ್ದವರು ಪ್ರವೇಶಿಸಬಹುದೆಂದುದು ನಿರ್ಣಯವಾಯಿತು. ಡಿಸೆಂಬರ ತಿಂಗಳಲ್ಲಿ ಕಾಕಿನಾಡಿನಲ್ಲಿ ಕಾಂಗ್ರೆಸ್ಸಿನ ೩೮ನೆಯ ಅಧಿವೇಶನವು ಜರುಗಿತು. ಅಸಹಕಾರದ ತತ್ವವನ್ನು ಸಮರ್ಥಿಸಿ, ವಿಧಾಯಕ ಕಾರ್ಯಕ್ರಮವು ಕೈಕೊಳ್ಳಲ್ಪಡಬೇಕೆಂದು ನಿರ್ಣಯವಾಯಿತು. ಖಾದಿ ಕಾರ್ಯವನ್ನು ದೃಢಪಡಿಸಲು ಒಂದು ಬೇರೆ ವಿಭಾಗವೆ ಏರ್ಪಡಿಸಲ್ಪಟ್ಟಿತು. ೧೯೨೪ ಜಾನೆವರಿ ೧೨ನೆಯ ತಾರೀಕಿನ ದಿನ ಮಹಾತ್ಮರಿಗೆ ಅಪೆಂಡಿಸೈಟಿಸ್‌ರೋಗವು ಆಗಿ ಕರ್ನಲ್ ಮೆಡಾಕರು ಶಸ್ತ್ರಕ್ರಿಯೆಯನ್ನು ಮಾಡಿದರು. ಮುಂದೆ ಫೆಬ್ರುವರಿ ೫ನೆಯ ತಾರೀಕಿನ ದಿನ ಮಹಾತ್ಮರನ್ನು ಸರಕಾರದವರು ಬಿಟ್ಟುಬಿಟ್ಟರು.

ಇತ್ತ ಸ್ವರಾಜ್ಯ ಪಕ್ಷದವರು ಅಸೆಂಬ್ಲಿಯಲ್ಲಿ ೪೫ ಸ್ಥಳಗಳನ್ನು ವಶಪಡಿಸಿಕೊಂಡು ಸರಕಾರದೊಡನೆ ಹೋರಾಟವನ್ನು ಪ್ರಾರಂಭಿಸಿದ್ದರು. ಹಿಂದುಸ್ಥಾನಕ್ಕೆ ವಸಾಹತಿನ ಸ್ವರಾಜ್ಯವನ್ನು ಕೊಡುವವಿಷಯದಲ್ಲಿ ವಿಚಾರ ಮಾಡಲು ದುಂಡುಮೇಜಿನ ಪರಿಷತ್ತನ್ನು ಕೂಡಿಸಬೇಕೆಂದು ಠರಾವು ಪಾಸುಮಾಡಿಕೊಂಡರು. ರಾಜಕೀಯ ಕೈದಿಗಳ ಬಿಡುಗಡೆ ಮಾಡಬೇಕೆಂದೂ ದಬ್ಬಾಳಿಕೆಯ ಕಾಯದೆಗಳನ್ನು ತಿರುಗಿ ತಕ್ಕೊಳ್ಳಬೇಕೆಂದೂ ಠರಾವುಗಳು ಪಾಸಾದವು. ಇನ್ನೂ ಅನೇಕ ಸಂಗತಿಗಳ ವಿಷಯದಲ್ಲಿ ಸ್ವರಾಜ್ಯ ಪಕ್ಷದವರು ಸರಕಾರದವರನ್ನು ಸೋಲಿಸಿದರು. ಮಹಾತ್ಮರು ಕೌನ್ಸಿಲ

ಪ್ರವೇಶಕ್ಕೆ ಪ್ರತಿಕೂಲವಾದ ಮತವನ್ನು ಸೂಚಿಸಿದರು. ಸ್ವರಾಜ್ಯಪಕ್ಷ್ದವರು ತಮ್ಮ ಕಾರ್ಯವನ್ನು ಹಾಗೆಯೆ ಮುಂದೆ ಸಾಗಿಸಿದರು. ಜೂನದಲ್ಲಿ ಅಹಮದಾಬಾದಿನಲ್ಲಿ ಆಲ್‌ಇಂಡಿಯಾ ಕಾಂಗ್ರೆಸ ಕಮಿಟಿಯ ಸಭೆ ಸೇರಿ ಪರದೇಶಿ ಅರಿವೆ, ಪದವಿಗಳೂ, ಕೌನ್ಸಿಲು ಇವುಗಳ ಬಹಿಷ್ಕಾರಕ್ಕೆ ಬೆಂಬಲವು ಕೊಡಲಾಯಿತು. ತಿಂಗಳಿಗೆ ೨೦೦೦ ಗಜ ಸೂಲನ್ನು ಕೊಡುವವರೆ ಕಾಂಗ್ರೆಸ್ಸಿನ ಅಧಿಕಾರಿಗಳು ಆಗಲು ಲಾಯಖರೆಂದು ಗೊತ್ತಾಯಿತು. ನೊವ್ಹೆಂಬರ ತಿಂಗಳವರೆಗೆ ಈ ತರಹದ ಸಭಾಸದರ ಸಂಖ್ಯೆಯು ೭೦೦೦ರಷ್ಟು ಏರಿತು. ೧೯೨೪ರಲ್ಲಿ ದಿಲ್ಲಿ, ಗುಲಬುರ್ಗಾ, ನಾಗಪೂರ, ಲಖನೌ, ಶಹಾಜಾನಪೂರ, ಅಲಹಾಬಾದ, ಜಬಲಪೂರ, ಮತ್ತು ಕೋಹಾಟ ಇವೆಲ್ಲ ಸ್ಥಳಗಳಲ್ಲಿ ಹಿಂದೂಮುಸಲ್ಮಾನರ ದಂಗೆಗಳಾಗಿ ಬಹಳೇ ಪ್ರಾಣಹಾನಿಯಾಯಿತು. ಪ್ರಾಯಶ್ಚಿತ್ತವೆಂದು ಮಹಾತ್ಮರು ೨೧ ದಿವಸ ಉಪವಾಸವನ್ನು ಕೈಕೊಂಡರು.

ಸಪ್ಟಂಬರದ ಕೊನೆಗೆ ಎಲ್ಲ ಜಾತಿಗಳ ಪ್ರತಿನಿಧಿಗಳ ಐಕ್ಯ ಪರಿಷತ್ತು ದಿಲ್ಲಿಯಲ್ಲಿ ಸೇರಿ ಐಕ್ಯವರ್ಧಕ ಠರಾವುಗಳು ಪಾಸಾದವು. ಅನಂತರ ಮಹಾತ್ಮರಿಗೂ, ದಾಸ ನೆಹ್ರುರವರಿಗೂ ಒಪ್ಪಂದವಾಗಿ, ಪರದೇಶಿ ಬಹಿಷ್ಕಾರವನ್ನುಳಿದು ಅಸಹಕಾರದ ಕಾರ್ಯಕ್ರಮವು ತೂರ್ತಕ್ಕೆ ನಿಲ್ಲಿಸಲ್ಪಡಬೇಕೆಂದೂ, ಸ್ವರಾಜ್ಯಪಕ್ಷದವರು ಕೌನ್ಸಿಲ ಕಾರ್ಯಕ್ರಮವನ್ನು ಮುಂದೆ ಸಾಗಿಸಬೇಕೆಂದೂ, ಕಾಂಗ್ರೆಸ್ಸಿನ ಪ್ರತಿಯೊಬ್ಬ ಸಭಾಸದನು ೨೦೦೦ ಗಜ ಸೂಲನ್ನು ವರ್ಗಣಿಯೆಂದು ಕೊಡಬೇಕೆಂದೂ ಗೊತ್ತಾಯಿತು. ಡಿಸೆಂಬರ ತಿಂಗಳಲ್ಲಿ ಬೆಳಗಾಂವಿಯಲ್ಲಿ ಕೂಡಿದ ಕಾಂಗ್ರೆಸ್ಸಿನ ೩೯ ನೆಯ ಅಧಿವೇಶನಕ್ಕೆ ಮಹಾತ್ಮಾ ಗಾಂಧಿಯವರೆ ಅಧ್ಯಕ್ಷರಾಗಿದ್ದರು. ಬೆಳಗಾಂವಿಯ ಅಧಿವೇಶನವು ಎಲ್ಲರೀತಿಯಿಂದಲೂ ಯಶಸ್ವಿಯಾಯಿತು. ಶ್ರೀ. ದೇಶಪಾಂಡೆ ಗಂಗಾಧರರಾಯರು ಸ್ವಾಗತಸಮಿತಿಯ ಅಧ್ಯಕ್ಷರಾಗಿದ್ದರು. ಸ್ವಯಂಸೇವಕರ ವ್ಯವಸ್ಥೆಯು ಡಾ। ಹರ್ಡೀಕರರ ನೇತೃತ್ವದಲ್ಲಿ ಒಳ್ಳೆ ಸಿಸ್ತಿನಿಂದ ನಡೆಯಿತು. ಉಳಿದ ಎಲ್ಲ ವ್ಯವಸ್ಥೆಯು ಒಳ್ಳೆಯದಾಗಿತ್ತು. ಮಹಾತ್ಮಾ ಗಾಂಧಿಯವರು ತಮ್ಮ ಭಾಷಣದಲ್ಲಿ ೧೯೨೦ ರಿಂದ ನಡೆದ ಎಲ್ಲ ಸಂಗತಿಗಳನ್ನು ಸ್ವಲ್ಪದರಲ್ಲಿ ಹೇಳಿ ಸತ್ಯಾಗ್ರಹವನ್ನು ಏಕೆ ನಿಲ್ಲಿಸುವದು ಅವಶ್ಯ

ವಾಯಿತೆಂದು ಹೇಳಿದರು. ಪರದೇಶೀ ವಸ್ತ್ರ ಬಹಿಷ್ಕಾರದ ಮಹತ್ವವನ್ನೂ ನೂಲಿನ ವರ್ಗಣಿಯ ಮಹತ್ವವನ್ನೂ ಹಿಂದು ಮುಸಲ್ಮಾನರ ಒಕ್ಕಟ್ಟು ಮತ್ತು ಅಸ್ಪೃಶ್ಯತಾನಿವಾರಣ ಇವುಗಳ ಅವಶ್ಯಕತೆಯನ್ನೂ ವಿವರವಾಗಿ ಹೇಳಿದರು. ಸ್ವರಾಜ್ಯದ ರೂಪರೇಷೆಯನ್ನು ತಿಳಿಸಿಹೇಳಿದರು. ರಾಷ್ಟ್ರೀಯ ವಿದ್ಯಾಪೀಠಗಳನ್ನು ಮುಂದೆ ಸಾಗಿಸುವದು ಎಷ್ಟು ಅವಶ್ಯವಿದೆಂಬದನ್ನು ತಿಳಿಸಿ ಹೇಳಿದರು. ಬಂಗಾಲದಲ್ಲಿಯ ಸರಕಾರದ ದಬ್ಬಾಳಿಕೆಯನ್ನು ನಿಷೇಧಿಸಿದರು. ಕೊನೆಗೆ ಸತ್ಯಾಗ್ರಹದ ಮೇಲಿನ ತಮ್ಮ ಅಚಲವಾದ ವಿಶ್ವಾಸವನ್ನು ವ್ಯಕ್ತಪಡಿಸಿದರು. "ಸತ್ಯಾಗ್ರಹದ ಮೇಲೆ ನನ್ನ ಅಚಲ ವಿಶ್ವಾಸವಿದೆ. ಅಸಹಕಾರವಾಗಲೀ ಕಾಯದೆಭಂಗವಾಗಲಿ ಇವು ಸತ್ಯಾಗ್ರಹದ ಶಾಖೆಗಳಾಗಿವೆ. ಸತ್ಯಾಗ್ರಹವೆಂದರೆ ನನ್ನ ಕಲ್ಪದ್ರುಮವಾಗಿದೆ. ಸತ್ಯಾಗ್ರಹವು ಸತ್ಯದ ಶೋಧನೆಯು. ಸತ್ಯವೆಂದರೆ ದೇವರು ಸತ್ಯವನ್ನು ನನಗೆ ತೋರಿಸಿಕೊಡುವ ಬೆಳಕೇ ಅಹಿಂಸೆಯು. ನನ್ನ ಮಟ್ಟಿಗೆ ಹೇಳುವದಾದರೆ ಸ್ವರಾಜ್ಯವಾದರೂ ಈ ಸತ್ಯದ ಒಂದು ಭಾಗವಾಗಿದೆ. ದಕ್ಷಿಣ ಆಫ್ರಿಕೆಯಲ್ಲಿಯೂ ಖೇಡಾ ಜಿಲ್ಹೆಯಲ್ಲಿಯೂ ಚಂಪಾರಣ್ಯದಲ್ಲಿಯೂ ಸತ್ಯಾಗ್ರಹವು ಯಶಸ್ವಿಯಾಯಿತು. ಸತ್ಯಾಗ್ರಹದಲ್ಲಿ ಯಾವತರಹದ ಹಿಂಸೆಯೂ ಇಲ್ಲ; ದ್ವೇಷವೂ ಇಲ್ಲ. ನಾನು ಇಂಗ್ಲಿಷರನ್ನು ದ್ವೇಷಿಸಲಾರೆ. ಅವರ ದಾಸ್ಯದಲ್ಲಿಯೂ ಇರಲಾರೆ. ಆದುದರಿಂದ ನಾವೆಲ್ಲರೂ ಸತ್ಯಾಗ್ರಹಿಗಳಾಗುವಾ. ಸ್ವರಾಜ್ಯದಂತೆಯೆ ಸತ್ಯಾಗ್ರಹವಾದರೂ ನಮ್ಮ ಜನ್ಮಸಿದ್ಧವಾದ ಹಕ್ಕು ಇದೆ" ಎಂದು ಮಹಾತ್ಮರು ಹೇಳಿದರು.

(೮೧) **೧೯೨೫ ರಲ್ಲಿಯ ಸಂಗತಿಗಳು:**— ೧೯೨೫ ರಲ್ಲಿಯೂ ಸ್ವರಾಜ್ಯಪಕ್ಷದ ಕೌನ್ಸಿಲಿನ ಕಾರ್ಯಕ್ರಮವು ಹಾಗೆಯೆ ಮುಂದೆ ಸಾಗಿತು. ಬಂಗಾಲ ಮತ್ತು ಮಧ್ಯಪ್ರಾಂತ ಇವೆರಡು ಕೌನ್ಸಿಲುಗಳಲ್ಲಿ ಅವರ ಕಾರ್ಯಕ್ರಮಕ್ಕೆ ಯಶಸ್ಸುದೊರೆತು, ಮಂತ್ರಿಮಂಡಳಗಳು ಮುರಿಯಲ್ಪಟ್ಟವು. ಜೂನ ತಿಂಗಳಲ್ಲಿ ಚಿತ್ತರಂಜನದಾಸರು ತೀರಿಕೊಂಡರು. ಅವರು ತೀರಿಕೊಂಡನಂತರ ಮಹಾರಾಷ್ಟ್ರದಲ್ಲಿಯ ಸ್ವರಾಜ್ಯಪಕ್ಷದವರು ಪ್ರತಿ ಸಹಕಾರವನ್ನು ಸ್ವೀಕರಿಸಿದರು. ಅಗಸ್ಟ ೨೨ನೆಯ ತಾ॥ ದಿನ ವಿಠ್ಠಲಭಾಯಿ ಪಟೇಲರು ಲೆಜಿಸ್ಲೆಟಿವ್ಹ ಅಸೆಂಬ್ಲಿಯ ಮೊದಲನೆಯ ಲೋಕನಿಯುಕ್ತ ಅಧ್ಯಕ್ಷ

ರಾಗಿ ಆರಿಸಲ್ಪಟ್ಟರು. ಸಪ್ಟಂಬರ ೨೧ ನೆಯ ತಾ॥ ದಿನ ಪಾಟ್ನಾದಲ್ಲಿ ಆಲ್ ಇಂಡಿಯಾ ಕಾಂಗ್ರೆಸ ಕಮೀಟಿಯ ಸಭೆಯಾಯಿತು. ಖಾದೀಕಾರ್ಯ ವೆಲ್ಲವು ಮಹಾತ್ಮಾಗಾಂಧಿಯವರು ಆ ಮೊದಲಿಗೆ ಸ್ಥಾಪಿಸಿದ ಅಖಿಲ ಭಾರತಿಯ ಚರಖಾ ಸಂಘಕ್ಕೆ ಒಪ್ಪಿಸಲ್ಪಡಬೇಕು, ಕಾಂಗ್ರೆಸ್ಸು ಇನ್ನು ಮುಂದೆ ವಿಶೇಷವಾಗಿ ರಾಜಕೀಯ ಕಾರ್ಯದ ಕಡೆಗೆ ಹೆಚ್ಚು ಲಕ್ಷ್ಯಕೊಡ ಬೇಕು. ಕೌನ್ಸಿಲ್ಲಿನೊಳಗಿನ ಕಾಂಗ್ರೆಸ್ಸಿನ ರಾಜಕೀಯ ಕಾರ್ಯವನ್ನು ಸ್ವರಾಜ್ಯ ಪಕ್ಷದವರೆ ನೆರವೇರಿಸಬೇಕು, ಕಾಂಗ್ರೆಸ್ಸಿನ ಸಭಾಸದರು ನೂಲಿನ ವರ್ಗಣಿಯ ಬದಲಾಗಿ ನಾಲ್ಕಾಣೆ ವರ್ಗಣಿಯನ್ನು ಸಲ್ಲಿಸಬಹುದು, ಎಂದು ನಿರ್ಣಯಗಳಾದವು. ಇದೇ ವರ್ಷದಲ್ಲಿ ಅಹಮ್ಮದಾಬಾದ, ಕಲಕತ್ತಾ, ಮುಂಬೈ, ಪಾಟ್ನಾ, ಇವೆಲ್ಲ ಪಟ್ಟಣಗಳ ಮುನ್ಸಿಪಾಲ್ಟಿಗಳಲ್ಲಿ ಕಾಂಗ್ರೆಸ ಕಾರ್ಯಕರ್ತರು ಸೇರಿದರು. ಸ್ವರಾಜ್ಯಪಕ್ಷದಲ್ಲಿ ಇಬ್ಬಣವಾಗಿ ಕೇಳಕರ, ಜಯಕರ, ಮುಂತಾದವರು ಪ್ರತಿಸಹಕಾರದ ತತ್ವವನ್ನು ಪ್ರತಿಪಾದಿಸಹತ್ತಿದರು. ಕೊನೆಗೆ ಅವರು ಸ್ವರಾಜ್ಯಪಕ್ಷವನ್ನು ಬಿಟ್ಟೇ ಬಿಟ್ಟರು.

**(೮೨) ಕಾಂಗ್ರೆಸ್ಸಿನ ೪೦ ನೆಯ ಅಧಿವೇಶನ:—** ಕಾನಪೂರ ದಲ್ಲಿ ಸರೋಜಿನಿದೇವಿಯವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ಸಿನ ೪೦ನೆಯ ಅಧಿವೇಶನವು ಜರುಗಿತು. ಜನತೆಯ ರಾಜಕೀಯ ಹಕ್ಕುಗಳನ್ನು ಅವರಿಗೆ ತಿಳಿಸಿಹೇಳಬೇಕು; ಖಾದಿ, ಐಕ್ಯ, ಅಸ್ಪೃಶ್ಯತಾನಿವಾರಣೆ, ಮದ್ಯಪಾನ ಪ್ರತಿಬಂಧ ಇವುಗಳ ಮುಖಾಂತರವಾಗಿ ಜನತೆಯಲ್ಲಿ ಕಸುವನ್ನು ಉಂಟು ಮಾಡಬೇಕು; ಸ್ವರಾಜ್ಯಪಕ್ಷದವರು ೧೯೨೪ನೆಯ ಇಸ್ವಿಯಲ್ಲಿ ಕೇಳಿದ ಹಕ್ಕುಗಳನ್ನು ಸರಕಾರದವರು ಕೊಡಲು ಸಿದ್ಧರಿರುವರೊ ಇಲ್ಲವೊ ಎಂಬುದರ ಕೊನೆಯ ನಿರ್ಣಯವನ್ನು ಕೊಡಿರೆಂದು ಸರಕಾರಕ್ಕೆ ಕೇಳ ಬೇಕು; ಸರಕಾರದವರು ಸಮಾಧಾನಕಾರಕವಾದ ಉತ್ತರವನ್ನು ಕೊಡ ದಿದ್ದರೆ ಸ್ವರಾಜ್ಯಪಕ್ಷದ ಸಭಾಸದರು ಕಾಯದೆಮಂಡಳಗಳನ್ನು ಬಹಿಷ್ಕ ರಿಸಬೇಕು; ಮಂತ್ರಿಪದಗಳನ್ನು ಬಹಿಷ್ಕರಿಸುವ ಧೋರಣವು ಮೊದಲಿ ನಂತೆಯೆ ಮುಂದೆಸಾಗಬೇಕು; ಸರಕಾರದವರಿಂದ ಸಮಾಧಾನಕಾರಕವಾದ ಉತ್ತರವು ಬಂದರೆ ಅದನ್ನು ಮುಂದೆ ವಿಚಾರಿಸಬೇಕು, ಎಂದು ನಿರ್ಣಯ

ಗಳಾದವು. ಹಿಂದುಸ್ಥಾನಿ ಭಾಷೆಯಲ್ಲಿಯೆ ಕಾಂಗ್ರೆಸ್ಸಿನ ಕಾರ್ಯಕ್ರಮಗಳನ್ನು ನೆರವೇರಿಸಬೇಕೆಂದು ಗೊತ್ತಾಯಿತು.

(೮೩) ೧೯೨೬ ರಲ್ಲಿಯ ಘಟನಾವಳಿಗಳು:— ೧೯೨೬ ನೆಯ ಇಸ್ವಿಯ ಮಾರ್ಚ ತಿಂಗಳಲ್ಲಿ ಆಲ್ ಇಂಡಿಯಾ ಕಾಂಗ್ರೆಸ ಕಮಿಟಿಯ ಸಭೆಯು ದಿಲ್ಲಿಯಲ್ಲಿ ಆಯಿತು. ಸ್ವರಾಜ್ಯದ ಕಾರ್ಯದಲ್ಲಿ ಸರಕಾರದವರು ತರುವ ಪ್ರತಿಯೊಂದು ಆತಂಕವನ್ನು ದೃಢನಿಶ್ಚಯದಿಂದ ಎದುರಿಸಬೇಕೆಂದೂ ಸರಕಾರದವರಿಂದ ಸಮಾಧಾನಕಾರಕವಾದ ಉತ್ತರವು ಬರುವ ವರೆಗೆ ಮಂತ್ರಿಪದಗಳನ್ನು ಸ್ವೀಕರಿಸಬಾರದೆಂದೂ ಗೊತ್ತಾಯಿತು. ಅಸೆಂಬ್ಲಿಯಲ್ಲಿ ಬಜೆಟಿನ ಚರ್ಚೆಯ ಕಾಲಕ್ಕೆ ಪಂಡಿತ ಮೋತಿಲಾಲ ನೆಹ್ರುರವರು ಸರಕಾರದ ಧೋರಣವನ್ನು ನಿಷೇಧಿಸಿ ಸ್ವರಾಜ್ಯಪಕ್ಷದ ಎಲ್ಲ ಸಭಾಸದರೊಂದಿಗೆ ಸಭಾಗೃಹದಿಂದೆದ್ದು ಹೋದರು. ಎಪ್ರಿಲ ೬ನೆಯ ತಾ. ದಿನ ಲಾರ್ಡ ಅಯರ್ವಿನ್ನರು ಹಿಂದುಸ್ಥಾನಕ್ಕೆ ವ್ಹಾಯಿಸರಾಯರಾಗಿ ಬಂದರು. ನವಂಬರ ತಿಂಗಳಲ್ಲಿ ಚುನಾವಣಿಗಳಾಗಿ ಮತ್ತೆ ಸ್ವರಾಜ್ಯಪಕ್ಷದವರು ಆರಿಸಿಬಂದರು.

(೮೪) **ಕಾಂಗ್ರೆಸ್ಸಿನ ೪೧ನೆಯ ಅಧಿವೇಶನವು:**— ಕಾಂಗ್ರೆಸ್ಸಿನ ೪೧ನೆಯ ಅಧಿವೇಶನವು ಶ್ರೀನಿವಾಸ ಅಯಂಗಾರರ ಅಧ್ಯಕ್ಷತೆಯಲ್ಲಿ ಗೋಹತ್ತಿಯಲ್ಲಿ ನೆರವೇರಿತು. ರಾಷ್ಟ್ರದ ಬೇಡಿಕೆಯನ್ನು ಸರಕಾರದವರು ಮನ್ನಿಸುವ ವರೆಗೆ ಮಂತ್ರಿಪದಗಳನ್ನು ಸ್ವೀಕರಿಸಬಾರದು. ಸರಕಾರದ ದಬ್ಬಾಳಿಕೆಯ ಠರಾವುಗಳನ್ನು ವಿರೋಧಿಸಬೇಕು, ದೇಶದ ಹಿತವನ್ನುಂಟು ಮಾಡುವಂತಹ ಠರಾವುಗಳನ್ನು ಕಾಯದೆಮಂಡಳಗಳಲ್ಲಿ ಪಾಸುಮಾಡಿಸಿಕೊಳ್ಳಬೇಕು, ಈ ಮಾತುಗಳನ್ನೊಳಗೊಂಡ ಮುಖ್ಯ ನಿರ್ಣಯವಾಯಿತು. ವಿಧಾಯಕ ಕಾರ್ಯಕ್ರಮ ಹಿಂದೂಮುಸಲ್ಮಾನರ ಐಕ್ಯ ಇವುಗಳ ವಿಷಯಕ್ಕೂ ಯೋಗ್ಯವಾದ ನಿರ್ಣಯಗಳಾದವು. ಕಾಂಗ್ರೆಸ್ಸಿನ ಚುನಾವಣಿಯಲ್ಲಿ ಭಾಗವಹಿಸುವವರೆಲ್ಲರೂ ಖಾದಿಯನ್ನು ತೊಟ್ಟೇ ತೀರಬೇಕೆಂದು ಗೊತ್ತಾಯಿತು. ೧೯೨೭ ರಲ್ಲಿಯೂ, ಸ್ವರಾಜ್ಯಪಕ್ಷದವರು ಸರಕಾರಕ್ಕೆ ವಿರೋಧವನ್ನು ಮುಂದೆಸಾಗಿಸಿದರು. ಆದರೆ ಬಂಗಾಲ ಮತ್ತು ಮಧ್ಯಪ್ರಾಂತದಲ್ಲಿ ಮಾತ್ರ ಮಂತ್ರಿಮಂಡಳಗಳನ್ನು ಮುರಿಯುವ ಕಾರ್ಯವು

*

ಸಫಲವಾಗಲಿಲ್ಲ. ೧೯೩೬ ರಲ್ಲಿ ರಾಜಕೀಯ ಸನ್ಯಾಸವನ್ನು ಕೈಕೊಂಡ ಮಹಾತ್ಮರು, ೧೯೨೭ರಲ್ಲಿ ಸಂಚಾರ ಕಾರ್ಯಕ್ರಮವನ್ನು ಕೈಕೊಂಡರು.

(೮೫) **ಸಾಯಮನ ಕಮೀಶನಿನ ಆಗಮನ:—** ೧೯೨೭ರಲ್ಲಿ ಹಿಂದೂಮುಸಲ್ಮಾನರ ನಡುವೆ ೨೫ ಕದನಗಳಾದವು. ಅಕ್ಟೋಬರ ತಿಂಗಳಲ್ಲಿ ಐಕ್ಯ ಪರಿಷತ್ತು ಸೇರಿ, ತೊಂದರೆಯಾಗದಂತೆ ಮಶೀದೆಗಳೆದುರಿಗೆ ವಾದ್ಯಗಳನ್ನು ಬಾರಿಸಲು ಅಡ್ಡಿಯಿಲ್ಲವೆಂದೂ ಹಿಂದು ಜನರ ಮನಸ್ಸು ನೋಯಿಸದಂತೆ ಗೋವಧಮಾಡಲಿಕ್ಕೆ ಅಡ್ಡಿಯಿಲ್ಲವೆಂದೂ ಠರಾವುಗಳು ಪಾಸಾದವು. ನೊವ್ಹೆಂಬರ ೮ನೆಯ ತಾರೀಕಿನ ದಿನ ಹಿಂದುಸ್ತಾನದ ರಾಜ್ಯಘಟನೆಯನ್ನು ವಿಚಾರಿಸಲು ಪಾರ್ಲಿಮೆಂಟಿನವರು ಸರಜಾನ ಸಾಯಮನ್ನರ ಅಧ್ಯಕ್ಷತೆಯಲ್ಲಿ ಕಮೀಶನ್ನು ನೇಮಿಸಿದ ವಿಷಯಕ್ಕೆ ಸರಕಾರೀ ಜಾಹೀರನಾಮೆ ಹೊರಟಿತು. ಕಮೀಶನ್ನಿನಲ್ಲಿ ಹಿಂದೀ ಜನರ ಪ್ರತಿನಿಧಿಗಳು ಇರದೆಯಿದ್ದ ಮಾತನ್ನು ವಾಚ್ಯಾ ಮುಂತಾದ ಕಾಂಗ್ರೆಸಿನ ಹೊರಗೆ ಇದ್ದ ಅನೇಕ ಮುಖಂಡರು ಖಂಡಿಸಿದರು.

(೮೬) **ಕಾಂಗ್ರೆಸಿನ ೪೨ನೆಯ ಅಧಿವೇಶನವು:—** ಡಿಸೆಂಬರ ತಿಂಗಳಲ್ಲಿ ಕಾಂಗ್ರೆಸಿನ ೪೨ ನೆಯ ಅಧಿವೇಶನವು ಮದ್ರಾಸಿನಲ್ಲಿ ಡಾ। ಅನ್ಸಾರಿಯವರ ಅಧ್ಯಕ್ಷತೆಯಲ್ಲಿ ಕೂಡಿತು. ಆ ಅಧಿವೇಶನದಲ್ಲಿ ಸಾಯಮನ್ನ ಕಮೀಶನನ್ನು ಕಾಯದೆಮಂಡಳಗಳ ಸಭಾಸದರೂ ಉಳಿದವರೂ ಎಲ್ಲ ರೀತಿಯಿಂದ ಬಹಿಷ್ಕರಿಸಬೇಕೆಂದೂ ಸಾಯಮನ ಕಮೀಶನಿನವರು ಹಿಂದುಸ್ಥಾನಕ್ಕೆ ಬರುವದಿನ ಹಿಂದುಸ್ತಾನದ ಎಲ್ಲ ಭಾಗಗಳಲ್ಲಿ ನಿಷೇಧಪ್ರದರ್ಶನಗಳಾಗಬೇಕೆಂದೂ, ಕಾಯದೆ ಮಂಡಳದ ಸಭಾಸದರು ಕೆಟ್ಟ ಕಾಯದೆಗಳನ್ನು ವಿರೋಧಿಸಲಿಕ್ಕಷ್ಟೆ ಕಾಯದೆ ಮಂಡಳಗಳಿಗೆ ಹೋಗಬಹುದೆಂದು ನಿರ್ಣಯವು ಪಾಸಾಯಿತು. ಬ್ರಿಟಿಶ ಮಾಲನ್ನು ಬಹಿಷ್ಕರಿಸಬೇಕು, ಸ್ವರಾಜ್ಯದ ರಾಜ್ಯಘಟನೆಯನ್ನು ವರ್ಕಿಂಗ ಕಮೀಟಿಯವರು ಉಳಿದ ಪಂಗಡಗಳೊಡನೆ ವಿಚಾರವಿನಿಮಯವನ್ನು ಮಾಡಿ ಸಿದ್ಧಪಡಿಸಬೇಕು, ಎಂದು ನಿರ್ಣಯಗಳಾದವು. ಸಂಪೂರ್ಣ ಸ್ವಾತಂತ್ರ್ಯವೆ ಕಾಂಗ್ರೆಸ್ಸಿನ ಗುರಿಯೆಂದು ಗೊತ್ತುವಳಿಯು ಪಾಸಾಯಿತು. ಸಾಯಮನ್ ಕಮೀಶನ್ನಿಗೆ ಬಹಿಷ್ಕಾರ ಹಾಕಬೇಕೆಂದು ಗೊತ್ತಾಗಿದೆಯೆಂದು ಮೇಲೆ ಹೇಳಿದೆ.

೧೯೨೮ನೆಯ ಇಸ್ವಿಯ ಫೆಬ್ರುವರಿ ೩ನೆಯ ತಾ॥ ದಿನ ಕಮೀಶನ್ನು ಮುಂಬೈಗೆ ಬಂದು ತಲುಪಿತು. ಆ ದಿನ ಹಿಂದುಸ್ಥಾನದ ಎಲ್ಲ ಪಟ್ಟಣಗಳಲ್ಲಿಯೂ ಹರತಾಳವಾಯಿತು. ಮದ್ರಾಸಿನಲ್ಲಿ ಪೋಲಿಸರು ಜನರ ಮೇಲೆ ಗುಂಡುಗಳನ್ನು ಹಾರಿಸಿದರು. ಜಸ್ಟಿಸ್‌ಪಾರ್ಟಿ ಮತ್ತು ಕೆಲವು ಮುಸಲ್ಮಾನ ಸಂಘಗಳನ್ನು ಬಿಟ್ಟರೆ ಸಾಯಮನ್ ಕಮೀಶನ್ನಿನ ಮೇಲಿನ ಬಹಿಷ್ಕಾರವು ಪೂರ್ಣವಾಯಿತೆಂದು ಹೇಳಲು ಅಡ್ಡಿಯಿಲ್ಲ. ಕಮೀಶನ್ನು ಹೋದಹೋದಲ್ಲೆಲ್ಲ ಜನರು ಸಾವಿರಗಟ್ಲೆ ಕೂಡಿ ' ಸಾಯಮನ್ ತಿರುಗಿ ಹೋಗು ” ಎಂದು ಕೂಗುತ್ತಿದ್ದರು. ಲಾಹೋರದಲ್ಲಿ ಜನರನ್ನು ಪೋಲಿಸರು ಲಾಠಿಯಿಂದ ಹೊಡೆದರು. ಲಾಲಾ ಲಜಪತರಾಯರಿಗೂ ಲಾಠಿ ಪೆಟ್ಟು ಕೂತಿತು. ಅದರಿಂದಲೆ ಅವರು ಮುಂದೆ ಮರಣಹೊಂದಿದರು. ಲಖನೌದಲ್ಲಿಯೂ ಲಾಠಿಯ ಹೊಡೆತವಾಯಿತು. ಸಾವಿರಾರು ಕುದುರೆಯ ಸವಾರರೂ ಪೋಲೀಸರೂ, ನಾಲ್ಕು ದಿನಗಳವರೆಗೆ ಜನರನ್ನು ಚನ್ನಾಗಿ ಥಳಿಸಿದರು. ಕಮೀಶನ್ನಿನ ಸಭಾಸದರು ಮರಳಿ ಮಾರ್ಚ ೩೧ನೆಯ ತಾರೀಖಿನ ದಿನ ಇಂಗ್ಲಂಡಿಗೆ ಹೋದರು. ಇತ್ತ ಅಸೆಂಬ್ಲಿಯಲ್ಲಿ ಕಮೀಶನ್ನಿನೊಡನೆ ಸಹಕರಿಸಕೂಡದೆಂದು ಠರಾವು ಪಾಸಾಯಿತು. ಕಾಂಗ್ರೆಸ್ಸಿನಲ್ಲಿ ಪಾಸಾದ ಠರಾವಿನಂತೆ ಘಟನೆಯನ್ನು ಗೊತ್ತುಪಡಿಸುವದಕ್ಕಾಗಿ ಫೆಬ್ರುವರಿ ಮಾರ್ಚ ತಿಂಗಳುಗಳಲ್ಲಿ ಸರ್ವಪಕ್ಷೀಯ ಪರಿಷತ್ತಿನ ಅಧಿವೇಶನಗಳಾದವು. ಇತ್ತ ಅದೇ ಸುಮಾರಿಗೆ ಬಾರ್ಡೋಲಿಯಲ್ಲಿ ಸರಕಾರದವರು ಅನ್ಯಾಯದಿಂದ ಹಸ್ತೆಯನ್ನು ಹೆಚ್ಚಿಸಿದ್ದರಿಂದ ಕರಬಂದಿಯ ಚಳವಳಿಯು ಪ್ರಾರಂಭವಾಗಿ ಸರಕಾರದ ದಬ್ಬಾಳಿಕೆಯನ್ನು ಲೆಕ್ಕಿಸದೆ ಸರದಾರ ವಲ್ಲಭಾಯಿ ಪಟೇಲರ ನೇತೃತ್ವದಲ್ಲಿ ಬಳ್ಳೆ ಯಶಸ್ವಿಯಾಗಿ ಕೊನೆಗೊಂಡಿತು. ಸರ್ವಪಕ್ಷೀಯ ಪರಿಷತ್ತಿನ ಪರವಾಗಿ ಪಂಡಿತ ಮೋತಿಲಾಲ ನೆಹರುರವರ ನೇತೃತ್ವದಲ್ಲಿ ಏರ್ಪಡಿಸಲ್ಪಟ್ಟ ಸಮಿತಿಯ ವರದಿಯನ್ನು ವಿಚಾರಿಸಲು ಸರ್ವಪಕ್ಷೀಯ ಪರಿಷತ್ತಿನ ಅಧಿವೇಶನವು ಲಖನೌದಲ್ಲಿ ಅಗಸ್ಟ ತಿಂಗಳ ೨೮ನೆಯ ತಾ। ದಿನ ಕೂಡಿತು. ವಸಹಾತಿನ ಸ್ವರಾಜ್ಯಕ್ಕೆ ಅನುಕೂಲವಾದ ಠರಾವು ಪಾಸಾಯಿತು. ನೆಹರು ವರದಿಯನ್ನೆ ಆಲ್ ಇಂಡಿಯಾ ಕಾಂಗ್ರೆಸ ಕಮಿಟಿಯವರು ನೊವ್ಹೆಂಬರ ತಿಂಗಳ ೪ನೆಯ ತಾ॥ ದಿನದ ಅಧಿವೇಶನದಲ್ಲಿ ಬೆಂಬಲವನ್ನು ಕೊಟ್ಟರು.

(೮೭) ಕಾಂಗ್ರೆಸ್ಸಿನ ೪೩ನೆಯ ಅಧಿವೇಶನ (೧೯೨೮):— ಕಾಂಗ್ರೆಸ್ಸಿನ ೪೩ನೆಯ ಅಧಿವೇಶನವು ಕಲಕತ್ತೆಯಲ್ಲಿ ಪಂಡಿತ ಮೋತಿಲಾಲ ನೆಹರುರವರ ಅಧ್ಯಕ್ಷತೆಯಲ್ಲಿ ಒಳ್ಳೆ ಉತ್ಸಾಹದಿಂದ ನೆರವೇರಿತು. ಕಲಕತ್ತೆಯಲ್ಲಿಯೆ ಮುಂದೆ ಬರುವ ಹೋರಾಟದ ಪೂರ್ಣ ಲಕ್ಷಣಗಳು ತೋರಹತ್ತಿದ್ದವು. ಸ್ವಾತಂತ್ರ್ಯವೇ ರಾಷ್ಟ್ರದ ಗುರಿಯೆಂದು ಪಂಡಿತ ಮೋತಿಲಾಲ ನೆಹರುರವರು ವಿವೇಚಿಸಿದರು. ನೆಹರು ರಿಪೋರ್ಟಿನ ವಿಷಯಕ್ಕೆ ಕಾಂಗ್ರೆಸ್ಸಿನಲ್ಲಿ ಈ ಮುಂದಿನಂತೆ ನಿರ್ಣಯವು ಪಾಸಾಯಿತು "೧೯೨೯ನೆಯ ಇಸ್ವಿಯ ಡಿಶೆಂಬರ ೩೧ನೆಯ ತಾರೀಖಿನೊಳಗಾಗಿ ನೆಹರು ರಿಪೋರ್ಟಿನಲ್ಲಿ ನಿರ್ದಿಷ್ಟವಾದ ರಾಜ್ಯಘಟನೆಯ ಸ್ವೀಕಾರವನ್ನು ಬ್ರಿಟಿಶ ಸರಕಾರದವರು ಮಾಡಿದರೆ ಆ ಘಟನೆಯನ್ನು ಕಾಂಗ್ರೆಸ್ಸಿನವರು ಮನ್ನಿಸುವರು. ಹಾಗೆ ಆಗದೆ ಹೋದರೆ ಕಾಂಗ್ರೆಸ್ಸು ಕರಬಾದಿಯನ್ನೊಳಗೊಂಡ ಅಸತ್ಯಾಚಾರಿ ಅಸಹಕಾರದ ಕಾರ್ಯಕ್ರಮವನ್ನು ಕೈಕೊಳ್ಳುವದು. ಕಾಂಗ್ರೆಸ ಕಾರ್ಯಕರ್ತರು ಸರಕಾರೀ ದರಬಾರ, ಬ್ರಿಟಿಶ ಸರಕು ಮುಂತಾದವುಗಳನ್ನು ಬಹಿಷ್ಕರಿಸಬೇಕು, ಸಂಸ್ಥಾನಿಕರು ತಮ್ಮ ಪ್ರಜೆಗಳಿಗೆ ಸ್ವರಾಜ್ಯದ ಹಕ್ಕುಗಳನ್ನು ಕೊಡಬೇಕು, ಎಂದು ಠರಾವುಗಳು ಪಾಸಾದವು. ಮರುವರ್ಷ ಕೈಕೊಳ್ಳತಕ್ಕ ಕಾರ್ಯಕ್ರಮದಲ್ಲಿ ಮದ್ಯಪಾನ ಪ್ರತಿಬಂಧ, ಪರದೇಶೀ ಅರಿವೆಯ ಬಹಿಷ್ಕಾರ, ಖಾದಿಗೆ ಪ್ರೋತ್ಸಾಹನ, ಕಾಂಗ್ರೆಸ ಮೆಂಬರರನ್ನು ಮಾಡುವದು, ಅಸ್ಪೃಶ್ಯತಾನಿವಾರಣೆ, ಸ್ವಯಂಸೇವಕರ ಸಂಘಟನೆ, ಇವೆಲ್ಲವುಗಳ ಸಮಾವೇಶವಾಗಿತ್ತು, ಇದುವರೆಗೆ ವಿಧಾಯಕ ಕಾರ್ಯಕ್ರಮದಲ್ಲಿಯೆ ತೊಡಗಿದ್ದ ಮಹಾತ್ಮಾ ಗಾಂಧಿಯವರು ರಾಜಕೀಯ ಕಾರ್ಯಕ್ರಮದಲ್ಲಿ ಮನಸ್ಸು ಹಾಕಹತ್ತಿದರು.

(೮೮) ೧೯೨೯ ರಲ್ಲಿಯ ಕಾರ್ಯಕ್ರಮ:— ಸಾಯಮನ್ನ ಕಮಿಶನ್ನಿನವರು ಎರಡು ಸಾರೆ ಹಿಂದುಸ್ತಾನದಲ್ಲಿ ಬಂದು ತಮ್ಮ ಕೆಲಸವನ್ನು ೧೯೨೯ ರ ಎಪ್ರಿಲ ೧೬ನೆಯ ತಾ। ದಿವಸ ಮುಗಿಸಿದರು. ಮೇ ತಿಂಗಳಲ್ಲಿ ಇಂಗ್ಲಂಡದಲ್ಲಿ ಚುನಾವಣೆಯಾಗಿ ಕೂಲಿಕಾರ ಪಕ್ಷದ ರ್‍ಯಾಮ್ಸೆಮ್ಯಾಕ್ಡೊನಾಲ್ಡರು ಮುಖ್ಯ ಮಂತ್ರಿಗಳೂ, ವೆಜ್‌ವುಡ್‌ಬೆನ್ನರು ಭಾರತ ಮಂತ್ರಿಗಳು ಆದರು. ಇತ್ತ ಕಲಕತ್ತಾ ಕಾಂಗ್ರೆಸ್ಸಿನ ಅಧಿವೇಶನವಾದ ಕೂಡಲೆ

ಪರದೇಶೀ ವಸ್ತ್ರಗಳ ಬಹಿಷ್ಕಾರ, ಮದ್ಯಪಾನ ಪ್ರತಿಬಂಧ, ಅಸ್ಪೃಶ್ಯತಾ ನಿವಾರಣೆ, ಕಾಂಗ್ರೆಸ ಕಾರ್ಯದ ಸಂಘಟನೆ, ಸ್ವಯಂಸೇವಕರ ಸಂಘಟನೆ ಇವೆಲ್ಲ ಕಾರ್ಯಗಳಿಗಾಗಿ ಬೇರೆ ಬೇರೆ ಕಮಿಟಿಗಳು ಏರ್ಪಡಿಸಲ್ಪಟ್ಟವು. ಏಪ್ರಿಲ ತಿಂಗಳ ೮ನೆಯ ತಾರೀಕಿನ ದಿನ ಅಸೆಂಬ್ಲಿಯ ಅಧಿವೇಶನವು ನಡೆದ ಕಾಲದಲ್ಲಿ ಭಗತಸಿಂಗ ಮತ್ತು ದತ್ತ ಇವರು ಒಂದು ಬಾಂಬನ್ನು ಅಸೆಂಬ್ಲಿಯಲ್ಲಿ ಒಗೆದರು. ಕೆಲವರಿಗೆ ಅಪಾಯಗಳಾದವು; ಪ್ರಾಣಹಾನಿಯೇನೂ ಆಗಲಿಲ್ಲ. ದೇಶದಲ್ಲೆಲ್ಲ ವಿಶೇಷವಾಗಿ ಪಂಜಾಬದಲ್ಲಿ ದಬ್ಬಾಳಿಕೆಯು ಪ್ರಾರಂಭವಾಗಿತ್ತು. ಮಾರ್ಚ ೨೦ನೆಯ ತಾರೀಕಿನ ದಿನ ಕಮ್ಯೂನಿಸ್ಟ ತತ್ವಗಳ ಪ್ರಚಾರವನ್ನು ಮಾಡುವ ಆರೋಪದಿಂದ ಮುಂಬೈ, ಪಂಜಾಬ, ಮತ್ತು ಸಂಯುಕ್ತಪ್ರಾಂತಗಳಲ್ಲಿ ಅನೇಕ ಮುಖಂಡರನ್ನು ಹಿಡಿದರು.

ಪ್ರತಿ ತಿಂಗಳ ಕೊನೆಯ ಆದಿತ್ಯವಾರ ದಿನ ರಾಷ್ಟ್ರ ಧ್ವಜವಂದನೆಯನ್ನು ಮಾಡುವ ಪದ್ಧತಿಯು ಇದೇ ವರ್ಷ ಪ್ರಾರಂಭವಾಯಿತು. ಅಗಷ್ಟ ತಿಂಗಳಲ್ಲಿ ಸರದಾರ ಮಂಗಲಸಿಂಗ, ಜಾಫರ ಅಲ್ಲಿಖಾನ, ಸತ್ಯಪಾಲ ಮುಂತಾದವರನ್ನು ಹಿಡಿದರು. ಸೆರೆಮನೆಯಲ್ಲಿಯ ಕಚ್ಚಾ ಕೈದಿಗಳಿಗೂ ಬಹಳ ತೊಂದರೆಯನ್ನು ಕೊಟ್ಟರು. ಈ ತೊಂದರೆಗಳನ್ನು ನಿಷೇಧಿಸುವ ಪಕ್ಕಾಗಿ ಯತೀಂದ್ರನಾಥದಾಸರು ೬೪ ದಿನಗಳ ವರೆಗೆ ಉಪವಾಸವನ್ನು ಮಾಡಿ ದೇಹವನ್ನು ದೇಶಕ್ಕೆ ಅರ್ಪಿಸಿದರು.

ನಾಲ್ಕುತಿಂಗಳುಗಳವರೆಗೆ ರಜೆಯನ್ನು ತೆಗೆದುಕೊಂಡು ಇಂಗ್ಲಂಡಿಗೆ ಹೋದ ಲಾರ್ಡ ಆಯರ್ವಿನ್ನರು ಅಕ್ಟೋಬರ ೨೫ನೆ ತಾರೀಕಿನ ದಿನ ಹಿಂದುಸ್ಥಾನಕ್ಕೆ ಬಂದರು. ೩೧ನೆಯ ತಾರೀಕಿನದಿನ ಹೊರಡಿಸಿದ ಜಾಹೀರನಾಮೆಯಲ್ಲಿ ವಸಹಾತಿಕ ಸ್ವರಾಜ್ಯವೇ ಹಿಂದುಸ್ಥಾನದ ರಾಜಕೀಯ ಗುರಿಯೆಂದೂ, ಹಿಂದುಸ್ಥಾನದ ಹೊಸ ರಾಜ್ಯಘಟನೆಯನ್ನು ಮೊದಲು ವಿಚಾರಿಸುವದಕ್ಕಾಗಿ ಹಿಂದುಸ್ಥಾನದ ಪ್ರತಿನಿಧಿಗಳೊಡನೆ ಬ್ರಿಟಿಶ ಸರಕಾರದವರು ವಿಚಾರವಿನಿಮಯವನ್ನು ಮಾಡುವರೆಂದೂ ಪ್ರಕಟಿಸಿದರು. ಡಿಸೆಂಬರ ೨೩ನೆಯ ತಾರೀಕಿನ ದಿನ ಮಹಾತ್ಮಾಗಾಂಧಿ, ಮೋತಿಲಾಲ ನೇಹರು, ಜಿನ್ನಾ, ಸಪ್ರು, ವಿಠ್ಠಲಭಾಯಿಪಟೇಲ, ಇವರೆಲ್ಲರೂ ವ್ಹಾಯಿಸರಾಯರನ್ನು ದಿಲ್ಲಿಯ ಅರಮನೆಯಲ್ಲಿ ಕಂಡರು. ಮಾತಿನ ಪ್ರಾರಂಭಕ್ಕೆ,

ಹಿಂದುಸ್ತಾನಕ್ಕೆ ಕೂಡಲೆ ವಸಹಾತಿನ ಸ್ವರಾಜ್ಯವು ಕೊಡಲ್ಪಡುವದೆಂಬ ಆಧಾರದ ಮೇಲೆಯೆ ಪರಿಷತ್ತಿನಲ್ಲಿ ವಿಚಾರವಿನಿಮಯವಾಗುವದೋ ಹೇಗೆಂಬುದನ್ನು ಮಹಾತ್ಮರು ಕೇಳಿದರು. ಆತರಹದ ವಚನವನ್ನು ಕೊಡಲು ಬರುವದಿಲ್ಲೆಂದು ವ್ಹಾಯಿಸರಾಯರು ಹೇಳಿದರು. ಅಷ್ಟಕ್ಕೆ ಈ ಮಾತುಕತೆಗಳು ನಿಂತವು.

(೮೯) **ಲಾಹೋರಿನ ಅಧಿವೇಶನವು** (೧೯೨೯):—ಕಾಂಗ್ರೆಸ್ಸಿನ ೪೪ನೆಯ ಅಧಿವೇಶನವು ಲಾಹೋರದಲ್ಲಿ ಪಂಡಿತ ಜವಾಹರಲಾಲ ನೇಹರು ರವರ ಅಧ್ಯಕ್ಷತೆಯಲ್ಲಿ ಕೂಡಿತು. ಜವಾರಲಾಲರು ತಮ್ಮ ಭಾಷಣದಲ್ಲಿ ತಾವು ಸೋಶಿಯಾಲಿಸ್ಟರೂ, ಸಂಪೂರ್ಣ ಸ್ವಾತಂತ್ರ್ಯವಾದಿಗಳೂ, ಇರುವ ದಾಗಿ ಹೇಳಿ ಸಂಪೂರ್ಣ ಸ್ವಾತಂತ್ರ್ಯವೇ ಹಿಂದುಸ್ತಾನದ ಗುರಿಯೆಂದು ಹೇಳಿದರು.

ಲಾಹೋರದ ಅಧಿವೇಶನದಲ್ಲಿ ಸಂಪೂರ್ಣ ಸ್ವಾತಂತ್ರ್ಯವೆ ಹಿಂದುಸ್ತಾನದ ಗುರಿಯೆಂದೂ ದುಂಡುಮೇಜಿನ ಪರಿಷತ್ತಿನಲ್ಲಿ ಭಾಗವಹಿಸಿ ಪ್ರಯೋಜನವಿಲ್ಲವೆಂದೂ ಸ್ವಾತಂತ್ರ್ಯಕ್ಕಾಗಿ ಹೂಡಬೇಕಾದ ಹೋರಾಟದ ಪ್ರಾರಂಭವೆಂದು, ಮುಂದಿನ ಚುನಾವಣೆಗಳಲ್ಲಿ ಯಾವಭಾಗವನ್ನೂ ವಹಿಸಬಾರದೆಂದೂ, ರಾಷ್ಟ್ರವು ವಿಧಾಯಕ ಕಾರ್ಯಕ್ರಮವನ್ನು ನೆರವೇರಿಸಬೇಕೆಂದೂ, ಯೋಗ್ಯವೆನಿಸಿದಾಗ, ಆಲ್ ಇಂಡಿಯಾ ಕಾಂಗ್ರೆಸ ಕಮೀಟಿಯವರು ಕರಬಂದಿಯನ್ನೊಳಗೊಂಡ ಸತ್ಯಾಗ್ರಹದ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದೂ, ಮುಖ್ಯ ನಿರ್ಣಯವು ಪಾಸಾಯಿತು. ಕಾಂಗ್ರೆಸ್ಸಿನ ಅಧಿವೇಶನಗಳು ಇನ್ನುಮುಂದೆ ಫೆಬ್ರುವರಿ ಇಲ್ಲವೆ ಮಾರ್ಚ ತಿಂಗಳಲ್ಲಿ ಕೂಡಬೇಕೆಂದೂ ಗೊತ್ತಾಯಿತು. ಇನ್ನೂ ಅನೇಕ ನಿರ್ಣಯಗಳಾದವು. ಲಾಹೋರಿನ ಕಾಂಗ್ರೆಸ್ಸಿನ ಕಾಲಕ್ಕೆ ಜನರ ಉತ್ಸಾಹಕ್ಕೆ ಒಳ್ಳೇ ಏರಿಕೆ ಬಂದಿತ್ತು. ರಾಷ್ಟ್ರದ ಆಶೆಗಳೆಲ್ಲವೂ ವಿಫಲವಾದುದರಿಂದ ಹೊಸ ಉಗ್ರ ಕಾರ್ಯಕ್ರಮಗಳನ್ನು ಕೈಕೊಳ್ಳಲು ಎಲ್ಲರ ಮನಸ್ಸು ಹಾತೊರೆಯುತ್ತಿತ್ತು.

# ಆರನೆಯ ಭಾಗ

## ಸತ್ಯಾಗ್ರಹದ ಆಂದೋಲನವು. ( ೧೯೩೦–೧೯೩೩ )

(೯೦) **ಸತ್ಯಾಗ್ರಹದ ಪ್ರಾರಂಭವು:**— ( ೧೯೩೦ ). ಲಾಹೋರ ಕಾಂಗ್ರೆಸು ಮುಕ್ತಾಯವಾದ ಕೂಡಲೆ ಸತ್ಯಾಗ್ರಹದ ವಿಚಾರಕ್ಕೆ ಪ್ರಾರಂಭವಾಯಿತು. ಜಾನೇವರಿ ೨ನೆಯ ತಾರೀಖಿನ ದಿನ ವರ್ಕಿಂಗ ಕಮೀಟಿಯ ಸಭೆಯಾಗಿ ಕಾಯದೆಯ ಮಂಡಳದೊಳಗಿನ ಎಲ್ಲ ಸಭಾಸದರು ರಾಜೀನಾಮೆ ಕೊಡಬೇಕೆಂದು ಗೊತ್ತಾಯಿತು. ಅದರಂತೆ ೨೭ ಸಭಾಸದರು ರಾಜಿನಾಮೆ ಕೊಟ್ಟರು. ಜಾನೆವರಿ ೨೬ ನೆಯ ತಾರೀಖಿನ ದಿನ ಪೂರ್ಣ ಸ್ವಾತಂತ್ರ್ಯದಿನವೆಂದು ಪಾಲಿಸಲ್ಪಟ್ಟಿತು. ಆ ದಿನ ವರ್ಕಿಂಗ ಕಮೀಟಿಯ ಪರವಾಗಿ ಒಂದು ಜಾಹೀರನಾಮೆಯು ಪ್ರತಿಯೊಂದು ಸಭೆಯಲ್ಲಿ ಓದಲ್ಪಟ್ಟಿತು. “ ಸ್ವಾತಂತ್ರ್ಯವು ಹಿಂದುಸ್ಥಾನದ ಜನ್ಮಸಿದ್ಧವಾದ ಹಕ್ಕು ಇದೆ. ಬ್ರಿಟಿಶ ಸರಕಾರದವರು ಹಿಂದುಸ್ಥಾನದ ಸ್ವಾತಂತ್ರ್ಯವನ್ನು ಕಸಿದುಕೊಂಡಿದ್ದಾರೆ. ಹಿಂದುಸ್ಥಾನದ ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಮತ್ತು ನೈತಿಕ ಹಾನಿಯಾಗಿದೆ. ಆದುದರಿಂದ ಹಿಂದುಸ್ಥಾನವು ಪೂರ್ಣ ಸ್ವರಾಜ್ಯವನ್ನು ಸಂಪಾದಿಸಿ ಬ್ರಿಟಿಶ ಸಾಮ್ರಾಜ್ಯದ ಸಂಬಂಧವನ್ನು ಕಡಿದೊಗೆಯಬೇಕೆಂದು ನಮ್ಮ ಭಾವನೆ ಇದೆ. ಆರ್ಥಿಕ ದೃಷ್ಟಿಯಿಂದ ಹಿಂದುಸ್ಥಾನವು ಹಾಳಾಗಿ ಹೋಗಿದೆ. ಹಿಂದೀ ಮನುಷ್ಯನ ದಿನದ ಉತ್ಪನ್ನವು ೭ ದುಡ್ಡಿನಷ್ಟಿದೆ. ಹಳ್ಳಿಗಳ ಕೈಗಾರಿಕೆಗಳು ನಷ್ಟವಾಗಿ ಹೋಗಿವೆ. ಈ ತರಹದ ಹಾನಿಯನ್ನುಂಟು ಮಾಡಿದ ರಾಜ್ಯದ ಆಡಳಿತೆಗೆ ಒಪ್ಪುವದು ಅಧರ್ಮವೆನ್ನೈ. ಹಿಂಸೆಯು ನಮ್ಮ ಮಾರ್ಗವಲ್ಲ. ಆದುದರಿಂದ ನಾವು ಶಾಂತ ಸತ್ಯಾಗ್ರಹದ ಸಿದ್ಧತೆಯನ್ನು ಮಾಡುವದು ಅಗತ್ಯವಿದೆ. ” ಸ್ವಾತಂತ್ರ್ಯದ ದಿನವು ಎಲ್ಲ ಕಡೆಗೂ ಅತಿ ವಿಜೃಂಭಣೆಯಿಂದ ಜರುಗಿತು. ಜಾನೆವರಿ ಫೆಬ್ರುವರಿ ತಿಂಗಳಲ್ಲಿ ದೇಶದಲ್ಲಿ ಎಲ್ಲ ಕಡೆಗೂ ಸತ್ಯಾಗ್ರಹದ ಸಿದ್ಧತೆಯಾಯಿತು. ಫೆಬ್ರುವರಿ ೧೫ ನೆಯ ತಾರೀಖಿನ ದಿನ

ವರ್ಕಿಂಗ ಕಮಿಟಿಯು ಸಭೆಯಾಗಿ ಮಹಾತ್ಮರು ಸರ್ವಾಧಿಕಾರಿಗಳಾಗಿ ನೇಮಿಸಲ್ಪಟ್ಟರು. ಮಾರ್ಚ ೨ ನೆಯ ತಾರೀಖಿನ ದಿನ ಮಹಾತ್ಮರು ವ್ಹಾಯಿಸರಾಯರಿಗೆ ಪತ್ರ ಬರೆದು ಬ್ರಿಟಿಶ ಸರಕಾರದಿಂದ ಹಿಂದುಸ್ತಾನಕ್ಕೆ ಹಾನಿಯು ಹೇಗೆ ಆಗಿದೆಂಬುದನ್ನು ತೋರಿಸಿ ಅದೇ ತಿಂಗಳ ೧೧ನೆಯ ತಾ॥ ದಿನ ಉಪ್ಪಿನ ಸತ್ಯಾಗ್ರಹವನ್ನು ಮಾಡಲು ಆಶ್ರಮದಿಂದ ಹೊರಡುವೆವೆಂದು ತಿಳಿಸಿದರು. ೧೨ ನೆಯ ತಾರೀಕಿನ ದಿನ ಮಹಾತ್ಮರು ಬೆಳಗಿನ ೬॥ ಗಂಟೆಗೆ ೭೮ ಅಶ್ರಮವಾಸಿಗಳೊಡನೆ ದಾಂಡಿಯಾತ್ರೆಗೆ ಹೊರಟರು. ೨೨೨ ಮೈಲು ಗಳ ಪ್ರವಾಸವನ್ನು ನಡಿಗಿಯಿಂದಲೆ ಮುಗಿಸಿ ಮಾರ್ಚ ೫ ನೆಯ ತಾರೀಖಿನ ದಿನ ದಾಂಡಿಗೆ ಬಂದು ಮುಟ್ಟಿದರು. ದಾರಿಯಲ್ಲೆಲ್ಲ ಸಭೆಗಳೂ, ಸ್ವಾಗತವೂ, ಆದವು. ನೂರುಗಟ್ಲೆ ಪಾಟೀಲರು ತಮ್ಮ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟರು. ೬ ನೆಯ ತಾರೀಖಿನ ಬೆಳಗಿನ ೬ ಗಂಟೆಗೆ ಸಮುದ್ರದಲ್ಲಿ ಸ್ನಾನಮಾಡಿ ಸಮುದ್ರ ದಂಡೆಯಮೇಲಿನ ಉಪ್ಪನ್ನು ಕೈಯಲ್ಲಿ ತೆಗೆದುಕೊಂಡು ಉಪ್ಪಿನ ಕಾಯದೆಯನ್ನು ಮುರಿದರು. ಶಿಕ್ಷೆಯನ್ನು ಸಹಿಸಲು ಸಿದ್ಧರಿದ್ದವರೆಲ್ಲರೂ ಉಪ್ಪಿನ ಕಾಯದೆಯನ್ನು ಮುರಿಯಬೇಕೆಂದು ಜಾಹೀರಪಡಿಸಿದರು. ಮೇ ತಿಂಗಳ ಕೊನೆಯ ವರೆಗೆ ಹಿಂದುಸ್ತಾನದಲ್ಲಿ ಲಕ್ಷಾವಧಿ ಜನರು ಉಪ್ಪಿನ ಕಾಯದೆಯನ್ನು ಮುರಿದರು. ಸಾವಿರಾರು ಜನರು ಸೆರೆಮನೆಯನ್ನು ಸೇರಿದರು. ಉಪ್ಪಿನ ಕಾಯದೆಯನ್ನು ಮುರಿದರೂ ಸರಕಾರದವರು ಮಹಾತ್ಮರನ್ನು ಹಿಡಿಯಲಿಲ್ಲ. ಎಪ್ರಿಲ ತಿಂಗಳ ಕೊನೆಯ ಸುಮಾರಿಗೆ ಶಿಂದೀ ಗಿಡಗಳ ಸಂಹಾರವನ್ನು ಮಾಡ ಬೇಕೆಂದು ಮಹಾತ್ಮರು ಹೇಳಿದರು. ಒಂದು ಹಳ್ಳಿಗೆ ಹೋಗಿ ತಾವೆ ತಮ್ಮ ಕೈಯಿಂದ ಒಂದು ಶಿಂದೀ ಗಿಡವನ್ನು ಕಡಿದರು. ಮೇ ತಿಂಗಳ ೪ ನೇ ತಾರೀಖಿನ ದಿನ ವ್ಹಾಯಿಸರಾಯರಿಗೆ ಇನ್ನೊಂದು ಪತ್ರವನ್ನು ಬರೆದು, ಧರಾಸನಾ ಉಪ್ಪಿನ ಆಗರದ ಮೇಲೆ ತಾವು ಸಾಗಿಹೋಗುವವರೆಂದು ತಿಳಿಸಿದರು. ಮಹಾತ್ಮರನ್ನು ಕೂಡಲೆ ಹಿಡಿದು ಎರೋಡಾ ಜೇಲಿನಲ್ಲಿಟ್ಟರು. ಅನೇಕರು ಹೊಡೆಯಲ್ಪಟ್ಟರು. ಮುಂಬೈಯಲ್ಲಿಯೂ ವಡಾಲಾ ಉಪ್ಪಿನಾಗರದ ಮೇಲೆ ಅನೇಕ ಸಲ ದಾಳಿಗಳಾದವು. ಕಾರವಾರ ಜಿಲ್ಹೆಯಲ್ಲಿಯ ಸಾಣಿಕಟ್ಟಾ ಉಪ್ಪಿನಾಗರದ ಮೇಲೆಯೂ ದಾಳಿಯಾಯಿತು.

ಎಪ್ರಿಲ ತಿಂಗಳಲ್ಲಿ ಪರದೇಶಿವಸ್ತ್ರ, ಸಿಗರೇಟ, ಮತ್ತು ಸೆರೆ ಸಿಂದಿ, ಇವುಗಳ ಬಹಿಷ್ಕಾರಕ್ಕೆ ಪ್ರಾರಂಭವಾಯಿತು. ಕರ್ನಾಟಕದ ಅನೇಕ ಭಾಗಗಳಲ್ಲಿ ಲಕ್ಷಗಟ್ಲೆ ಶಿಂದಿಗಿಡಗಳು ಕಡಿಯಲ್ಪಟ್ಟವು. ಮುಂಬೈಯಲ್ಲಿಯ ಪರದೇಶೀವಸ್ತ್ರದ ವ್ಯಾಪಾರಸ್ಥರು ಒಂದು ವರ್ಷದ ವರೆಗೆ ಪರದೇಶೀ ಮಾಲನ್ನು ತರಿಸಬಾರದೆಂದು ಗೊತ್ತುಮಾಡಿದರು. ಮಹಾತ್ಮರನ್ನು ಹಿಡಿದನಂತರ ವರ್ಕಿಂಗ ಕಮಿಟಿಯ ಸಭೆಯಾಗಿ ಜಂಗಲ ಕಾಯದೆಭಂಗ, ಉಪ್ಪಿನ ಕಾಯದೆಭಂಗ, ಕರಬಂದಿ, ಮದ್ಯಪಾನ ಪ್ರತಿಬಂಧ, ಮುಂತಾದವು ಗಳನ್ನು ಕೈಕೊಳ್ಳಬೇಕೆಂದು ನಿರ್ಣಯವಾಯಿತು. ಈ ನಂತರ ಒಳ್ಳೆ ಕಸುವಿ ನಿಂದ ಪ್ರಾರಂಭಿಸಲ್ಪಟ್ಟ ಸತ್ಯಾಗ್ರಹದ ವೃತ್ತಾಂತವನ್ನು ಕೊಡುವದು ಅಶಕ್ಯವದೆ. ಮುಖ್ಯ ಮುಖ್ಯ ಸಂಗತಿಗಳನ್ನಷ್ಟೆ ಈ ಕೆಳಗೆ ಕೊಟ್ಟಿದೆ.

ಈ ಮೊದಲೆ ಎಪ್ರಿಲ ೨೫ನೆಯ ತಾರೀಖಿನ ದಿನ ವಿಠ್ಠಲಭಾಯಿ ಪಟೇಲರು ಅಸೆಂಬ್ಲಿಯ ಅಧ್ಯಕ್ಷತೆಗೆ ರಾಜೀನಾಮೆಯನ್ನು ಕೊಟ್ಟಿದ್ದರು. ಎಪ್ರಿಲ ೨೭ನೆಯ ದಿನ ವಾಯಿಸರಾಯರು ವೃತ್ತಪತ್ರಗಳ ಆರ್ಡಿನನ್ಸನ್ನು ಹೊರಡಿಸಿದರು. ಈ ಆರ್ಡಿನನ್ಸಿಗೆ ದೇಶದಲ್ಲಿ ಅನೇಕ ಪತ್ರಗಳು ತುತ್ತಾ ದವು. ಮೆ ೮ನೆಯ ತಾರೀಖಿನ ದಿನ ಸೊಲ್ಲಾಪೂರದಲ್ಲಿ ದಂಗೆಯಾಗಿ ಪೋಲಿ ಸರ ಗುಂಡಿಗೆ ೨೫ ಜನರು ಆಹುತಿಯಾದರು. ಜನರು ಕೆಲವು ಪೋಲಿಸರನ್ನು ಕೊಂದರು. ಕೂಡಲೆ ಅಲ್ಲಿ ದಂಡಿನಾಳ್ಗೆಯು ಸಾರಲ್ಪಟ್ಟಿತು. ಮುಂದೆ ಮಲ್ಲಪ್ಪಾ ಧನಶೆಟ್ಟಿ ಶಿಂದೆ, ಸಾರದಾ, ಕುರ್ಬಾನ ಹುಸೇನ ಮುಂತಾದ ಈ ನಾಲ್ವರಿಗೆ ಗಲ್ಲಿನ ಶಿಕ್ಷೆಯಾಯಿತು. ಪೇಶಾವರದಲ್ಲಿಯೂ ದಂಡಿನಾಳ್ಗೆ ಸಾರಲ್ಪಟ್ಟಿತು. ನಿಶಃಸ್ತ್ರ ಜನರ ಮೇಲೆ ಗುಂಡುಹಾರಿಸಲು ಒಪ್ಪದ್ದರಿಂದ ಗಢವಾಲಿ ಪ್ಲಾಟೂನಿನವರಿಗೆ ಘೋರ ಶಿಕ್ಷೆಗಳಾದವು. ಈ ಮೊದಲೆ ಬಾಡೋಲಿ ತಾಲೂಕಿನಲ್ಲಿ ಕರಬಂದಿ ಚಳವಳಿಯು ಪ್ರಾರಂಭ ವಾಗಿತ್ತು. ಮೆ ೧೩ ನೆಯ ತಾರೀಖಿನ ದಿನ ದಿಲ್ಲಿಯಲ್ಲಿಯ ಪ್ರಮುಖ ವ್ಯಾಪಾರೀ ಜನರು ನಮಗೇನೂ ಬ್ರಿಟಿಶ ಮಾಲು ಬೇಡವೆಂದು ಇಂಗ್ಲೆಂಡಿಗೆ ತಾರು ಮಾಡಿದರು. ಜೂನ ೩೦ ನೆಯ ತಾರೀಖಿನ ದಿನ ವ್ಹಾಯಿಸರಾಯರು ಕರಬಂದಿ, ಪಿಕೆಟಿಂಗ, ಮುಂತಾದವು ಗಳನ್ನು ಕುರಿತು ಹೊಸ ಆರ್ಡಿನನ್ಸು ಹೊರಡಿಸಿದರು ಜೂನ ತಿಂಗಳ

ಲ್ಲಿಯೂ ಧರಾಸನಾ, ಮತ್ತು ವಡಾಲಾ ಉಪ್ಪಿನಾಗರದ ಮೇಲಿನ ದಾಳಿಗಳು ಮುಂದೆ ನಡೆದವು. ೧ನೆಯ ತಾರೀಖಿನ ದಿನ ವಡಾವಾದಲ್ಲಿ ದಾಳಿಯ ಕಾಲಕ್ಕೆ ೧೫ ಸಾವಿರ ಜನರು ಕೂಡಿದ್ದರು, ಅದೇ ದಿನ ಮುಂಬೈಯಲ್ಲಿ ವ್ಯಾಪಾರಸ್ಥರು ಬ್ರಿಟಿಶ ಔಷಧಗಳನ್ನು ತರಿಸಬಾರದೆಂದು ಗೊತ್ತುಮಾಡಿದರು. ೬ನೆಯ ತಾರೀಖಿನ ದಿನ ಧರಾಸನಾದ ಮೇಲೆ ಕೊನೆಯ ದಾಳಿಯಾಯಿತು. ಇದೇ ತಿಂಗಳಲ್ಲಿ ಪಿಕೆಟಿಂಗಿನ ಚಳವಳಿಯೂ, ಪರದೇಶೀ ವಸ್ತ್ರದಂಗಡಿಗಳ ಚಳವಳಿಯೂ, ಒಳ್ಳೇ ಜೋರಿನಿಂದ ಸಾಗಿತು. ೨೧ನೆಯ ತಾರೀಖಿನ ದಿನ ಮುಂಬೈಯ ಅಝುದ ಮೈದಾನಿನಲ್ಲಿ ದೊಡ್ಡ ಸಭೆಯಾಗಿ ತೀಕ್ಷ್ಣವಾದ ಲಾಠಿ ಪ್ರಹಾರವಾಯಿತು. ಅದೇ ದಿನ ಆಂಧ್ರದಲ್ಲಿಯ ಕಾಂಗ್ರೆಸ ಸಂಸ್ಥೆಗಳೆಲ್ಲವು ಕಟ್ಟಳೆಗೇಡಿಯಾದವು. ಕೆಲವು ದಿನಗಳಲ್ಲಿಯೆ ಪಂಜಾಬದಲ್ಲಿಯ ಕಾಂಗ್ರೆಸ ಸಂಸ್ಥೆಗಳು ಬೇಕಾಯದೆಶೀರ ಸಂಸ್ಥೆಗಳೆಂದು ಜಾಹೀರಮಾಡಲ್ಪಟ್ಟವು. ಇದೆ ಸುಮಾರಿಗೆ ಎಲ್ಲ ಕಡೆಗೆ ಜಂಗಲ ಸತ್ಯಾಗ್ರಹವು ಪ್ರಾರಂಭ ಮಾಡಲ್ಪಟ್ಟಿತು. ಕರ್ನಾಟಕದಲ್ಲಿ ಅಂಕೋಲೆ ಉಪ್ಪಿನ ಸತ್ಯಾಗ್ರಹದ ಕೇಂದ್ರವೆಂದು ಗೊತ್ತಾಗಿ ಅದರಂತೆ ಉಪ್ಪಿನ ಸತ್ಯಾಗ್ರಹವು ನೆರವೇರಿ ಅನೇಕ ಸಂತೆಗಳಾದವು. ಕಾರವಾರ ಜಿಲ್ಲೆಯಲ್ಲಿ ಜಂಗಲ ಸತ್ಯಾಗ್ರಹವು ಸಾಗಿತು. ದೇಶದ ಎಲ್ಲ ಭಾಗಗಳಲ್ಲಿ ಸಾಯಕ್ಲೋಸ್ಟೈಲಿನಿಂದ ಮುದ್ರಿತವಾದ ಕರಪತ್ರಗಳ ಪ್ರಸಾರವನ್ನು ತಡೆದು ಹಿಡಿಯಲು ವ್ಹಾಯಿಸರಾಯರು ಹೊಸ ಆರ್ಡಿನನ್ಸ ಹೊರಡಿಸಿದರು. ಆದರೆ ಈ ಆರ್ಡಿನನ್ಸನ್ನೂ ಲೆಕ್ಕಿಸದೆ ದೇಶದಲ್ಲಿ ಸಾವಿರಾರು ಕರಪತ್ರಗಳು ಹೊರಡುತ್ತಲಿದ್ದವು. ಮುಂಬೈಯಲ್ಲಿ ಕಾಲಕಾಲಕ್ಕೆ ಕಟ್ಟಳೆಯ ವಿರುದ್ಧ ಸಭೆಗಳಾಗಿ ಲಾಠಿಯ ಏಟುಗಳಿಂದ ಅನೇಕ ಜನರಿಗೆ ಗಾಯಗಳಾದವು. ಜುಲೈ ಅಗಷ್ಟ ತಿಂಗಳಲ್ಲಿ ಸಪ್ರು ಜಯಕರ ಮುಖಾಂತರವಾಗಿ ಸಂಧಾನ ಪ್ರಯತ್ನಗಳಾದವು. ಅಗಷ್ಟ ತಿಂಗಳಲ್ಲಿಯೂ ಪರದೇಶೀವಸ್ತ್ರ, ಮದ್ಯದಂಗಡಿ, ಇವುಗಳ ಪಿಕೆಟಿಂಗ ಮತ್ತು ಜಂಗಲ ಕಾಯದೆಭಂಗ ಇವು ಮುಂದೆ ಸಾಗಿದವು. ವರ್ಕಿಂಗ ಕಮೀಟಿಯ ಸಭಾಸದರಿಗೆ ಮುಂಬೈಯಲ್ಲಿ ಶಿಕ್ಷೆಯಾಯಿತು. ದಿಲ್ಲಿ ಪ್ರಾಂತದಲ್ಲಿ ಕಾಂಗ್ರೆಸ ವರ್ಕಿಂಗ ಕಮೀಟಿಯು ಬೆಕಾಯದೆಶೀರ ಸಂಘವೆಂದು ಜಾಹೀರ ಮಾಡಲ್ಪಟ್ಟಿತು. ಸಪ್ಟಂಬರ ತಿಂಗಳಲ್ಲಿಯೂ ಸಪ್ರು

ಜಯಕರರ ಸಂಧಾನದ ಯತ್ನಗಳು ಮುಂದೆ ನಡೆದು ನಿಷ್ಫಲವಾದವು. ಪಂಜಾಬ ಮತ್ತು ದಿಲ್ಲಿಯಲ್ಲಿಯ ಕಾಂಗ್ರೆಸ ಸಂಸ್ಥೆಗಳು ಕಟ್ಟಳೆಗೇಡಾದವು. ಸಪ್ಟಂಬರ ೬ನೆಯ ತಾರೀಖಿನ ದಿನ ಸಾತಾರಾ ಜಿಲ್ಹೆಯಲ್ಲಿಯ ವಿಳಾಸಿಯಲ್ಲಿ ಜಂಗಲ ಸತ್ಯಾಗ್ರಹದ ಕಾಲಕ್ಕೆ ಪೋಲಿಸರು ಗುಂಡುಹಾರಿಸಿದರು. ಇದೆ ತಿಂಗಳಲ್ಲಿ ಮುಂಬೈ ಇಲಾಖೆಯಲ್ಲಿ ಜರುಗಿದ ಚುನಾವಣಿಯಕಾಲಕ್ಕೆ ಪಿಕೆಟಿಂಗು ಯಶಸ್ವಿಯಾಯಿತು. ಅಕ್ಟೋಬರ ತಿಂಗಳಲ್ಲಿ ದೇಶದಲ್ಲೆಲ್ಲ ಕಾಂಗ್ರೆಸ ಕಮೀಟಿಗಳೆಲ್ಲವೂ ಬೇಕಾಯದೆಶೀರ ಸಂಘಗಳೆಂದು ಜಾಹೀರ ಮಾಡಲ್ಪಟ್ಟವು. ಕಾಂಗ್ರೆಸ ಕಚೇರಿಗಳನ್ನೆಲ್ಲವನ್ನೂ ಸರಕಾರದವರು ತಮ್ಮ ವಶಕ್ಕೆ ತೊಗೊಂಡರು. ನೊವ್ಹೆಂಬರ ತಿಂಗಳಲ್ಲಿಯೂ ಖಟ್ಲೆ ಶಿಕ್ಷೆಗಳೂ ನಡೆದೆ ಇದ್ದವು. ಅತ್ತ ಲಂಡನದಲ್ಲಿ ನೊವ್ಹೆಂಬರ ೧೨ನೆಯ ತಾರೀಖಿನ ದಿನ ದುಂಡುಮೇಜಿನ ಪರಿಷತ್ತಿಗೆ ಪ್ರಾರಂಭವಾಯಿತು. ೧೪ನೆಯ ತಾರೀಖಿನ ದಿನ ಹಿಂದುಸ್ತಾನದ ಎಲ್ಲ ಭಾಗಗಳಲ್ಲಿಯೂ ಜವಾಹಿರ ದಿನವು ಆಚರಿಸಲ್ಪಟ್ಟಿತು. ಡಿಸೆಂಬರ ತಿಂಗಳಲ್ಲಿಯೂ ಪರದೇಶೀ ವಸ್ತ್ರ ಮತ್ತು ಸೆರೆದಂಗಡಿ ಇವುಗಳ ಪಿಕೆಟಿಂಗು ಹಾಗೆಯೆ ಮುಂದೆ ಸಾಗಿತು. ನೊವ್ಹೆಂಬರ ೨೩ನೆಯ ತಾರೀಖಿನ ದಿನ ವ್ಹಾಯಿಸರಾಯರು ಕರಬಂದಿಯ ವಿರುದ್ಧ ಆರ್ಡಿನನ್ಸ ಹೊರಡಿಸಿದರು. ಗುಜರಾಥದಲ್ಲಿ ಕರಬಂದಿಯ ಚಳವಳಿಯು ಬಾಡೋರ್ಲಿ, ಬೋರ್ಸಾದಗಳಲ್ಲಿ ಸಾಗಿ ನೂರಾರು ರೈತರ ಹೊಲಗಳು ಜಪ್ತಾದವು. ಬಾಡೋರ್ಲಿ ರೈತರು ತಾಲೂಕು ಬಿಟ್ಟು ಬಡೋದೆಯ ರಾಜ್ಯಕ್ಕೆ ತೆರಳಿದರು.

ಸತ್ಯಾಗ್ರಹದಲ್ಲಿ ನಡೆದ ಸಂಗತಿಗಳನ್ನು ವಿಸ್ತಾರದಿಂದ ವರ್ಣಿಸುವದು ಕೇವಲ ಅಶಕ್ಯವಾದ ಮಾತಾಗಿದೆ. ಎಲ್ಲ ಕಡೆಗೂ ಪ್ರಭಾತಫೇರಿಗಳೂ ಸಭೆಗಳೂ ಜರುತ್ತಿದ್ದವು. ಅಲ್ಲಲ್ಲಿ ಲಾಠಿ ಏಟುಗಳೂ ಗುಂಡಿನೇಟುಗಳೂ ನಡೆದೇ ಇದ್ದವು. ಎಪ್ರಿಲ, ಮೇ, ಇವೆರಡೇ ತಿಂಗಳಲ್ಲಿ ಮದ್ರಾಸ, ಕರಾಚಿ ಬಂಗಾಲ, ಸೊಲ್ಲಾಪುರ, ವಡಾಲಾ, ಮೈಮನಸಿಂಗ, ಮಿದ್ನಾಪೂರ, ಲಖನೌ, ದಿಲ್ಲಿ ಮುಂತಾದ ಸ್ಥಳಗಳಲ್ಲಿ ಪೋಲೀಸರು ಗುಂಡುಗಳನ್ನು ಹಾರಿಸಬೇಕಾಯಿತು. ಜುಲೈ ತಿಂಗಳ ವೊದಲೆ ೧೩೧ ವರ್ತಮಾನಪತ್ರಗಳಿಂದ ೨॥ ಲಕ್ಷ ರೂಪಾಯಿದಷ್ಟು ಜಾಮೀನು ತೆಗೆದುಕೊಂಡರು.

೧೯೩೧ ರ ಜಾನೆವರಿ ೨೧ ನೆಯ ತಾರೀಖಿನ ದಿನ ಬೋರ್ಸಾದಿನಲ್ಲಿ ಪೋಲಿಸರು ಸ್ತ್ರೀಯರಿಗೂ ತೊಂದರೆ ಕೊಟ್ಟರು. ಜಾನೆವರಿ ೧೯ ನೆಯ ದಿನ ದುಂಡು ಮೇಜಿನ ಪರಿಷತ್ತಿನ ಮುಕ್ತಾಯವನ್ನು ಮಾಡುವ ಕಾಲಕ್ಕೆ ಹಿಂದುಸ್ತಾನಕ್ಕೆ ಹೊಣೆಗಾರಿಕೆಯ ರಾಜ್ಯಪದ್ಧತಿಯನ್ನು ಸ್ಥಾಪಿಸುವದನ್ನು ಕುರಿತು ಮುಖ್ಯ ಮಂತ್ರಿಗಳು ಜಾಹೀರನಾಮೆಯನ್ನು ಹೊರಡಿಸಿದರು. ಈ ಜಾಹೀರನಾಮೆಯನ್ನು ವಿಚಾರಿಸಲು ಅನುಕೂಲವಾಗಬೇಕೆಂದು, ಮೊದಲು ಮಹಾತ್ಮರನ್ನೂ ಹಿಂದುಗಡೆ ಜಾನೆವರಿ ೨೫ ನೆಯ ತಾರೀಖಿನ ದಿವಸ ವರ್ಕಿಂಗ ಕಮೀಟಿಯ ಎಲ್ಲ ಸಭಾಸದರನ್ನು ಸರಕಾರದವರು ಬಿಟ್ಟುಬಿಟ್ಟರು. ಮುಂದೆ ವ್ಹಾಯಿಸರಾಯರಿಗೂ ಮಹಾತ್ಮರಿಗೂ ಮಾತುಕತೆಗಳಾಗಿ ಕಾಂಗ್ರೆಸ ಮತ್ತು ಸರಕಾರದ ಸಮ್ಮತಿಯಿಂದ ಮಾರ್ಚ ೫ ನೆಯ ತಾರೀಖಿನ ದಿನ ಒಪ್ಪಂದವಾಯಿತು. ಸರಕಾರದವರು ಎಲ್ಲ ಸತ್ಯಾಗ್ರಹಿಗಳನ್ನು ಬಿಡಬೇಕು. ಸಮುದ್ರದ ದಂಡೆಗುಂಟ ಜನರು ತಮ್ಮ ಸ್ವಂತದ ಉಪಯೋಗಕ್ಕಾಗಿ ಉಪ್ಪು ತಯಾರಮಾಡಬಹುದು. ಪರದೇಶೀ ವಸ್ತ್ರದ ಪಿಕೆಟಿಂಗಿಗೆ ಅಡ್ಡಿ ಇರಬಾರದು. ಕಾಂಗ್ರೆಸ್ಸಿನವರು ದುಂಡುಮೇಜಿನ ಪರಿಷತ್ತಿನಲ್ಲಿ ಭಾಗವಹಿಸಬೇಕು. ಕಾಂಗ್ರೆಸ್ಸಿನವರು ಕಾಯದೇಭಂಗವನ್ನು ನಿಲ್ಲಿಸಬೇಕು. ಈ ಮುಂತಾದ ಮಾತುಗಳು ಒಪ್ಪಂದದಲ್ಲಿ ಅಡಕವಾಗಿದ್ದವು.

**(೯೧) ಕರಾಚಿಯಲ್ಲಿ ಕಾಂಗ್ರೆಸಿನ ಅಧಿವೇಶನವು ೧೯೩೧:—** ಮಹಾತ್ಮಾ ಗಾಂಧಿಯವರಿಗೂ ವ್ಹಾಯಿಸರಾಯರಿಗೂ ಒಪ್ಪಂದವಾದ ನಂತರ ಕಾಂಗ್ರೆಸ ಸಂಸ್ಥೆಗಳು ಕಾಯದೇಶೀರ ಸಂಸ್ಥೆಗಳೆಂದು ಸರಕಾರದವರು ಜಾಹೀರಪಡಿಸಿದರು. ಮಾರ್ಚ ತಿಂಗಳ ಕೊನೆಯ ವಾರದಲ್ಲಿ ಕರಾಚಿಯಲ್ಲಿ ಕಾಂಗ್ರೆಸಿನ ಅಧಿವೇಶನವು ಜರುಗಿತು. ಸರದಾರ ವಲ್ಲಭಾಯಿಯವರು ಅಧ್ಯಕ್ಷರಾಗಿದ್ದರು. ಅವರು ತಮ್ಮ ಭಾಷಣದಲ್ಲಿ ಮಹಾತ್ಮಾ ಗಾಂಧಿಯವರಿಗೂ ಸರಕಾರಕ್ಕೂ ಆದ ಒಪ್ಪಂದಕ್ಕೆ ಬೆಂಬಲವನ್ನು ಕೊಟ್ಟು, ಪರದೇಶೀವಸ್ತ್ರಬಹಿಷ್ಕಾರ ಪಿಕೆಟಿಂಗ, ಮದ್ಯಪಾನ ಪ್ರತಿಬಂಧ, ಉಪ್ಪನ್ನು ತಯಾರಿಸುವ ಹಕ್ಕು ಇವುಗಳ ವಿಷಯಕ್ಕೆ ಜನರ ಕರ್ತವ್ಯವನ್ನು ತಿಳಿಸಿ ಹೇಳಿದರು. ಕರಾಚಿ ಕಾಂಗ್ರೆಸ್ಸಿಗಿಂತ ಸ್ವಲ್ಪ ಮೊದಲು ಮಹಾತ್ಮಾ

ಗಾಂಧಿಯವರ ಬಿನ್ನಹವನ್ನು ಲೆಕ್ಕಿಸದೆ ಸರದಾರ ಭಗತಸಿಂಗ, ರಾಜಗುರು ಮತ್ತು ಸುಖದೇವ ಈ ಮೂವರು ತರುಣರು ಗಲ್ಲಿಗೇರಿಸಲ್ಪಟ್ಟಿದ್ದರು. ಆ ವಿಷಯಕ್ಕೆ ಕಾಂಗ್ರೆಸಿನಲ್ಲಿ "ರಾಜಕೀಯ ಅತ್ಯಾಚಾರಗಳು ಕಾಂಗ್ರೆಸಿಗೆ ಸಮ್ಮತವಿಲ್ಲ. ಆದರೆ ಸರದಾರ ಭಗತಸಿಂಗ, ಸುಖದೇವ ಮತ್ತು ರಾಜ ಗುರು ಇವರ ಧೈರ್ಯ ಮತ್ತು ಸ್ವಾರ್ಥತ್ಯಾಗದ ವಿಷಯಕ್ಕೆ ಕಾಂಗ್ರೆಸಿಗೆ ಆದರವಿದೆ. ಇಡೀ ರಾಷ್ಟ್ರದ ಬಿನ್ನಹವನ್ನು ಬದಿಗಿಟ್ಟು ಈ ಮೂವರನ್ನು ಗಲ್ಲಿಗೇರಿಸಿದ್ದೆಂದರೆ ಕೇವಲ ಸೇಡಿನ ಕೃತ್ಯವೆಂದು ಕಾಂಗ್ರೆಸಿನ ಅಭಿಪ್ರಾಯ ವಿದೆ" ಗಾಂಧಿ ಆಯರ್ವಿನಾ ಒಪ್ಪಂದಕ್ಕೆ ಬೆಂಬಲವನ್ನು ಕೊಡುವ ಠರಾವು ಪಾಸಾಯಿತು. ಮದ್ಯಪಾನ ಪ್ರತಿಬಂಧ, ಖಾದಿ, ಪಿಕೆಟಿಂಗ, ಇವುಗಳ ವಿಷಯಕ್ಕೆ ನಿರ್ಣಯಗಳಾದವು. ಆದರೆ ಕರಾಚಿಯಲ್ಲಿ ಪಾಸಾದ ಎಲ್ಲಕ್ಕೂ ಹೆಚ್ಚು ಮಹತ್ವದ ನಿರ್ಣಯವೆಂದರೆ ಪ್ರಜೆಗಳ ಮೂಲಭೂತ ಹಕ್ಕುಗಳಿಗೆ ಸಂಬಂಧಿಸಿದ್ದು ಅದರ ವಿವರವನ್ನು ಮುಂದೆ ಕೊಟ್ಟಿದೆ.

(೯೨) **ದುಂಡುಮೇಜಿನ ಪರಿಷತ್ತು** (೧೯೩೧):— ಕರಾಚಿಯ ಕಾಂಗ್ರೆಸು ಮುಗಿದ ನಂತರ ದೇಶದಲ್ಲಿ ಅನೇಕ ಕಡೆಗೆ ಸರಕಾರದವರು ಒಪ್ಪಂದಕ್ಕೆ ವಿರುದ್ಧವಾಗಿ ವರ್ತಿಸಿದರೆಂದು ದೂರುಗಳು ಬರಹತ್ತಿದವು. ಈ ವಿಷಯದಲ್ಲಿ ಮಹಾತ್ಮರಿಗೂ, ಸರಕಾರಕ್ಕೂ ಪತ್ರವ್ಯವಹಾರವಾ ಯಿತು. ಸರಕಾರಕ್ಕೂ, ಕಾಂಗ್ರೆಸಿಗೂ, ಒಪ್ಪಂದದ ವಿಷಯಕ್ಕೆ ಮತ ಭೇದಗಳು ಬಂದಲ್ಲಿ ವಿಚಾರಣೆಗಾಗಿ ಪಂಚಾಯತಿ ಮಂಡಳಗಳು ಇರ ಬೇಕೆಂದು ಮಹಾತ್ಮರ ಬೇಡಿಕೆಯಿತ್ತು. ಆದರೆ ಅದನ್ನು ಸರಕಾರದವರು ಮನ್ನಿಸಲಿಲ್ಲ. ಒಪ್ಪಂದಕ್ಕೆ ಧಕ್ಕೆ ತರುವಂತಹ ಅನೇಕ ಸಂಗತಿಗಳು ದೇಶ ದಲ್ಲೆಲ್ಲ ಒದಗಹತ್ತಿದ್ದವು. ಸಂಯುಕ್ತಪ್ರಾಂತದೊಳಗಿನ ಸುಲ್ತಾನಪೂರ ದಲ್ಲಿ ೯೦ ಜನರ ಮೇಲೆ ೧೦೭ನೆಯ ಕಲಮಿನಂತೆ ಖಟ್ಲೆಗಳಾಗಿದ್ದವು. ಮಥುರೆಯಲ್ಲಿ ಒಂದು ಸಭೆಯನ್ನು ಪೋಲಿಸರು ಚದುರಿಸಿದರು. ಲಖನೌ ವಿಭಾಗದಲ್ಲಿ ೭೦೦ ಖಟ್ಲೆಗಳು ನಡೆದಿದ್ದವು. ಗಾಂಧೀ ಟೊಪ್ಪಿಗೆಗಂತೂ ಎಲ್ಲ ಕಡೆಗೂ ತೊಂದರೆಯಿತ್ತು. ಮುಂಬೈ ಇಲಾಖೆಯಿಂದಲೂ ಇದೇ ತರಹದ ದೂರುಗಳು ಕೇಳಬರುತ್ತಿದ್ದವು. ಕರ್ನಾಟಕದಲ್ಲಿಯ ಜಪ್ತಾದ ವತನೀ ಭೂಮಿಗಳನ್ನು ತಿರುಗಿ ಕೊಡಲಿಲ್ಲ. ಮದ್ರಾಸ ಇಲಾಖೆಯಲ್ಲಿ

ಯೂ ಪಿಕೆಟಿಂಗಿಗೆ ಅನೇಕ ತರಹದ ಆತಂಕಗಳು ಉಂಟಾದವು. ಬಾಡೋರ್ಲಿಯ ರೈತರಿಗೂ ಹಪ್ತೆಯ ವಿಷಯದಲ್ಲಿ ಜುಲುಮೆ ಆಗಲಾರಂಭಿಸಿತು. ಇವೆಲ್ಲ ಮಾತುಗಳ ವಿಷಯಕ್ಕೆ ಸರಕಾರಕ್ಕೂ ಗಾಂಧಿಯವರಿಗೂ ಮಾತುಕತೆಗಳಾಗಿ ಕೊನೆಗೆ ಸಪ್ಟಂಬರ ೨೯ ನೆಯ ತಾರೀಕಿನ ದಿನ ಮಹಾತ್ಮರು ಇಂಗ್ಲಂಡಿಗೆ ಹೊರಟರು. ಇಂಗ್ಲಂಡಿಗೆ ಹೋದನಂತರ ದುಂಡುಮೇಜಿನ ಪರಿಷತ್ತಿನಲ್ಲಿ ಮಹಾತ್ಮರು ಕಾಂಗ್ರೆಸಿನ ಬೇಡಿಕೆಗಳನ್ನು ಮಂಡಿಸಿದರು. ದುಂಡುಮೇಜಿನೆದುರಿಗೆ ಮಾಡಿದ ಅವರ ಭಾಷಣಗಳು ಒಳ್ಳೆ ಮಹತ್ವವಿದ್ದುದರಿಂದ ಆ ಭಾಷಣಗಳೊಳಗಿನ ಕೆಲವು ಭಾಗವನ್ನು ಈ ಕೆಳಗೆ ಕೊಟ್ಟಿದೆ. ಕಾಂಗ್ರೆಸ್ಸಿನ ವಿಷಯವಾಗಿ ಅವರು ಈ ಮುಂದಿನಂತೆ ಹೇಳಿದರು.

" ಕಾಂಗ್ರೆಸ್ಸು ಹಿಂದುಸ್ತಾನದಲ್ಲಿಯ ಎಲ್ಲಕ್ಕೂ ಹಳೆಯ ರಾಜಕೀಯ ಸಂಸ್ಥೆ ಇದೆ. ಕಳೆದ ೫೦ ವರ್ಷಗಳಲ್ಲಿ ಪ್ರತಿವರ್ಷವೂ ಅದರ ಅಧಿವೇಶನಗಳಾಗಿವೆ. ಅದು ಹಿಂದುಸ್ತಾನದಲ್ಲಿಯ ಎಲ್ಲ ಜನರ ಎಲ್ಲ ಜಾತಿಗಳ ಪ್ರತಿನಿಧಿಯಾಗಿದೆ. ಒಬ್ಬ ಇಂಗ್ಲಿಷ ಸದ್ಗೃಹಸ್ಥರೇ ಅದರ ಮೂಲ ಉತ್ಪಾದಕರು. ಆಲನ್ ಹ್ಯೂಮರು ಕಾಂಗ್ರೆಸಿನ ಮೂಲ ಉತ್ಪಾದಕರು. ಫಿರೋಜಶಹಾ ಮೆಹತಾ ಮತ್ತು ದಾದಾಭಾಯಿ ನವರೋಜಿ ಈ ಪಾರ್ಸಿ ಮುಖಂಡರು ಈ ಕಾಂಗ್ರೆಸ್ಸನ್ನು ಪೋಷಿಸಿದರು. ಮೊದಲಿನಿಂದಲೂ ಕಾಂಗ್ರೆಸ್ಸಿನಲ್ಲಿ ಮುಸಲ್ಮಾನರೂ, ಕ್ರಿಶ್ಚನ್ನರೂ, ಆಂಗ್ಲೋ ಇಂಡಿಯನ್ನರೂ ಸೇರಿರುವರು. ಮುಸಲ್ಮಾನರೂ ಪಾರ್ಸಿಗಳೂ ಕಾಂಗ್ರೆಸ್ಸಿನ ಅಧ್ಯಕ್ಷರಾಗಿರುವರು. ಕ್ರಿಶ್ಚನ್ನ ಮತಕ್ಕೆ ಸೇರಿದ ಉಮೇಶಚಂದ್ರ ಬ್ಯಾನರ್ಜಿಯವರು ಕಾಂಗ್ರೆಸ್ಸಿಗೆ ಮೊದಲನೆಯ ಅಧ್ಯಕ್ಷರಾಗಿದ್ದರು. ಮುಸಲ್ಮಾನ ಮುಖಂಡರಾದ ಮೌಲಾನಾ ಮಹಮ್ಮದ ಅಲಿಯವರು ಒಮ್ಮೆ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಕಾಂಗ್ರೆಸ್ಸಿನ ವರ್ಕಿಂಗ ಕಮೀಟಿಯಲ್ಲಿ ನಾಲ್ಕು ಜನ ಮುಸಲ್ಮಾನರಿರುವರು.

" ಕಾಂಗ್ರೆಸ್ಸು ಅಸ್ಪೃಶ್ಯರ ಉದ್ಧಾರಕ್ಕಾಗಿಯೂ ಪ್ರಯತ್ನಗಳನ್ನು ಮಾಡಿದೆ. ೧೯೨೦ ರಿಂದ ಕಾಂಗ್ರೆಸಿನ ಕಾರ್ಯಕ್ರಮಗಳಲ್ಲಿ ಅಸ್ಪೃಶ್ಯತಾ ನಿವಾರಣೆಯು ಒಂದು ಮುಖ್ಯವಾದ ಕಾರ್ಯಕ್ರಮವಾಗಿದೆ. ಅಸ್ಪೃಶ್ಯತಾ

ನಿವಾರಣೆಯು ಹೊರ್ತು ಸಂಪೂರ್ಣ ಸ್ವಾತಂತ್ರ್ಯವು ದೊರೆಯಲಾರದೆಂದು ಕಾಂಗ್ರೆಸ್ಸಿನ ಭಾವನೆಯಿದೆ.

" ಎಲ್ಲಕ್ಕೂ ಹೆಚ್ಚೆಂದರೆ ಕೋಟ್ಯಾವಧಿ ಬಡಹಳ್ಳಿಗರ ಪ್ರತಿನಿಧಿ ಭೂತವಾದ ಸಂಸ್ಥೆಯೆಂದರೆ ಕಾಂಗ್ರೆಸ್ಸು. ಅಖಿಲ ಭಾರತ ಚರಖಾ ಸಂಘದ ಪರವಾಗಿ ೨೦೦೦ ಹಳ್ಳಿಗಳಲ್ಲಿ ೫೦೦೦೦ ಹೆಂಗಸರಿಗೆ ಹೊಸ ಉದ್ಯೋಗವನ್ನು ಕಾಂಗ್ರೆಸ್ಸು ಕಲ್ಪಿಸಿಕೊಡುತ್ತಲಿದೆ. "

ದುಂಡುಮೇಜಿನ ಪರಿಷತ್ತಿನಿಂದ ಹಿಂದುಸ್ಥಾನದ ಹಿತವು ಯಾವ ರೀತಿಯಿಂದಲೂ ಸಾಧಿಸುವದಿಲ್ಲವೆಂದು ಸ್ವಲ್ಪ ಕಾಲದಲ್ಲಿಯೆ ಕಂಡು ಬಂದಿತು. ದುಂಡುಮೇಜಿನ ಪರಿಷತ್ತಿನೆದುರಿಗಿನ ಕೊನೆಯ ಭಾಷಣದಲ್ಲಿ ಮಹಾತ್ಮಾ ಗಾಂಧಿಯವರು ಹೀಗೆ ಹೇಳಿದರು. " ಪರಿಷತ್ತಿನಲ್ಲಿಯ ಸಭಾಸದರು ಯಾವದೊಂದು ಪಂಗಡದ ಪ್ರತಿನಿಧಿಗಳಾಗಿದ್ದಾರೆ. ಆದರೆ ಕಾಂಗ್ರೆಸ್ಸು ಮಾತ್ರ ಅಖಂಡ ಹಿಂದುಸ್ಥಾನದ ಪ್ರತಿನಿಧಿಯಾಗಿದೆ. ಅದೇನೂ ಯಾವ ಜಾತಿನಿಷ್ಠ ಸಂಸ್ಥೆ ಅಲ್ಲ. ಹಿಂದುಸ್ಥಾನದಲ್ಲಿಯ ೭ ಲಕ್ಷ ಹಳ್ಳಿಗಳ ಮೇಲೂ ಕಾಂಗ್ರೆಸ್ಸಿನ ವರ್ಚಸ್ಸು ಇದೆ, ಎಂಬುದನ್ನು ಎಲ್ಲರೂ ಒಪ್ಪುವರು. ಆದರೆ ಈ ಪರಿಷತ್ತಿನಲ್ಲಿ ಮಾತ್ರ ಕಾಂಗ್ರೆಸ್ಸೆಂದರೆ ಅನೇಕ ಪಕ್ಷಗಳಲ್ಲಿ ಒಂದಾಗಿದೆ. ಇದರಿಂದ ಕಾಂಗ್ರೆಸ್ಸಿಗೇನೂ ಹಾನಿ ಇಲ್ಲ; ಆದರೆ ನಾವು ಇಲ್ಲಿ ಕೂಡಿರುವ ಉದ್ದೇಶಕ್ಕೆ ಹಾನಿ ಇದೆ. ಕಾಂಗ್ರೆಸ್ಸು ಇದೊಂದೇ ಸಂಸ್ಥೆಯು. ಅಖಿಲ ಭಾರತೀಯ ಸಂಸ್ಥೆಯಾಗಿದೆ.

" ನೀವು ಇಲ್ಲಿ ಕಾಂಗ್ರೆಸ್ಸಿಗೆ ಆಮಂತ್ರಣವನ್ನಿತ್ತಿದರೂ ನಿಮಗೆ ಕಾಂಗ್ರೆಸ್ಸಿನಲ್ಲಿ ನಂಬಿಗೆ ಇಲ್ಲ, ಕಾಂಗ್ರೆಸ್ಸೆಂದರೆ ಹಿಂದುಸ್ಥಾನದ ಪ್ರತಿನಿಧಿ ಇರುವದೆಂಬದನ್ನು ನೀವು ಅಲ್ಲಗಳೆಯುವಿರಿ.

" ಕಾಂಗ್ರೆಸ್ಸೆಂದರೆ ಬಂಡಾಯದ ಪ್ರತಿನಿಧಿಯು ಆಗಿದೆ. ಹಿಂಸೆಯು ಅದರ ಮಾರ್ಗವಲ್ಲ. ಅಹಿಂಸಾತ್ಮಕ ಸತ್ಯಾಗ್ರಹವೇ ಅದರ ಮಾರ್ಗವು. ಸತ್ಯಾಗ್ರಹವು ನಡೆದಾಗ ಸರಕಾರದವರು ಅದನ್ನು ದಬ್ಬಲು ಯತ್ನಿಸಬಹುದು. ಆದರೆ ಈ ತರಹದ ಶಕ್ತಿಗೆ ಸರಕಾರದವರು ಕೊನೆಗೆ ಒಲಿಯಬೇಕಾಗುವದು. ನನ್ನ ನಾಡಿಗಾಗಿ ಮಾನಮರ್ಯಾದೆಯ ಒಪ್ಪಂದವನ್ನು ಮಾಡಿಕೊಳ್ಳಲು ಕೊನೆಯವರೆಗೂ ಹೆಣಗುವೆನು. ನನ್ನ ಪ್ರಯತ್ನಗಳು

ನಿಷ್ಫಲವಾಗಿ ಲಕ್ಷಾವಧಿ ಜನರನ್ನು ಮತ್ತೆ ರಾಷ್ಟ್ರೀಯ ಹೋಮದ ಝುಳಕ್ಕೆ ಹಾಕುವದು ಅವಶ್ಯವಾದರೆ ನಾನೇನೂ ಹಿಂಜರಿಯಲಿಕ್ಕಿಲ್ಲ.

" ಇನ್ನೂ ವೇಳೆಯು ಮೀರಿಹೋಗುವ ಮೊದಲೆ ಕಾಂಗ್ರೆಸ್ಸಿನ ಉದ್ದೇಶವೇನಿದೆಂಬದನ್ನು ನೀವು ತಿಳಿದುಕೊಳ್ಳಬೇಕೆಂದು ನಾನು ಅಪೇಕ್ಷಿಸುತ್ತೇನೆ. ನನ್ನ ಜೀವನವು ನಿಮ್ಮ ವಶಕ್ಕೆ ಇದೆ. ವರ್ಕಿಂಗ ಕಮೀಟಿಯ ಎಲ್ಲ ಸಭಾಸದರ ಜೀವನವು ನಿಮ್ಮ ವಶಕ್ಕೆ ಇದೆ; ಇದೂ ಅಲ್ಲದೆ ಹಿಂದುಸ್ಥಾನದ ಕೋಟ್ಯಾವಧಿ ಪ್ರಜೆಗಳ ಜೀವನವೂ ನಿಮ್ಮ ವಶಕ್ಕೆ ಇದೆ. ಸಾಧ್ಯವಿದ್ದರೆ ಆ ಜೀವನಗಳ ಹೋಮವನ್ನು ಮಾಡುವದು ನನಗೆ ಬೇಕಿಲ್ಲ. ಆದ್ದರಿಂದ ಸ್ವಾಭಿಮಾನಪೂರ್ಣವಾದ ಒಪ್ಪಂದವನ್ನು ಮಾಡಿಕೊಳ್ಳಲು ನಾನು ಬೇಕಾದ ತ್ಯಾಗವನ್ನು ಮಾಡಲು ಸಿದ್ಧರಿರುವೆನು. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವು ಬೇಕಾಗಿದೆ. ಅದಕ್ಕೆ ಬೇಕಾದ ಹೆಸರು ಕೊಡಿರಿ. ಆದರೆ ನಕಲಿ ಸ್ವಾತಂತ್ರ್ಯವು ನಮಗೆ ಬೇಕಾಗಿಲ್ಲ. ನಮ್ಮನಿಮ್ಮೊಳಗೆ ಈ ಮುಖ್ಯ ಮಾತಿನ ವಿಷಯಕ್ಕೆ ಒಪ್ಪಿಗೆಯಾಗದಿದ್ದರೆ ಉಳಿದ ವಿಷಯಗಳಲ್ಲಿ ನಮ್ಮ ನಿಮ್ಮ ನಡುವೆ ಒಪ್ಪಂದವಾಗುವದು ಸಾಧ್ಯವಿಲ್ಲ. ಆದರೆ ಈ ಮೂಲಭೂತ ಮಾತಿನ ವಿಷಯಕ್ಕೆ ಒಪ್ಪಿಗೆಯಾಗದಿದ್ದರೆ ನಮ್ಮ ನಿಮ್ಮ ನಡುವೆ ಶಾಂತಿಯು ಆಗಲಾರದು.

" ನಮ್ಮ ಗುರಿಯನ್ನು ಸಾಧಿಸಲು ೩೫ ಕೋಟಿ ಜನಾಂಗಕ್ಕೆ ಕೊಲೆಗಾರನ ಕಠಾರಿಯು ಬೇಕಿಲ್ಲ, ವಿಷದ ಬಟ್ಟಲವೂ ಬೇಕಿಲ್ಲ. ಖಡ್ಗವಾಗಲೀ, ಬಂದೂಕಾಗಲೀ ಅವಶ್ಯವಿಲ್ಲ. " ಇದು ಬೇಡ " ಎನ್ನುವ ಶಕ್ತಿಯು ಆ ರಾಷ್ಟ್ರಕ್ಕೆ ಬಂದರೆ ತೀರಿತು; ಆ ಶಕ್ತಿಯನ್ನು ನಮ್ಮ ರಾಷ್ಟ್ರವು ದೊರೆಕಿಸುತ್ತಲಿದೆ.

" ಆದರೆ ನಿರಾಶೆಗೆ ಎಷ್ಟು ಕಾರಣಗಳಿದ್ದರೂ, ನಾನೇನೂ ಎದೆಗುಂದಿಲ್ಲ. ದಿಲ್ಲಿಯಲ್ಲಿಯಾದ ಒಪ್ಪಂದವೆ ಧೃಢವಾಗಬೇಕೆಂದು ನನ್ನ ಇಚ್ಛೆ ಇದೆ. ೬೨ ವರ್ಷದ ಮುದುಕನಿಗೆ ಸ್ವಲ್ಪಾದರೂ ಸಂಧಿಯನ್ನೊದಗಿಸಿ ಕೊಡಿರಿ. ನಿಮ್ಮ ಅಂತಃಕರುಣದಲ್ಲಿ ಅವನಿಗೂ ಕಾಂಗ್ರೆಸ ಸಂಸ್ಥೆಗೂ ಸ್ವಲ್ಪಾದರೂ ಸ್ಥಾನವನ್ನು ಕೊಡಿರಿ. ನನ್ನ ಮೇಲೆ ವಿಶ್ವಾಸವಿದ್ದಂತೆ ನೀವು ತೋರಿಸುವಿರಿ; ಆದರೆ ಕಾಂಗ್ರೆಸ್ಸಿನ ಮೇಲೆ ನಿಮ್ಮ ವಿಶ್ವಾಸವಿಲ್ಲ ನಾನು ಬೇರೆ

ಕಾಂಗ್ರೆಸ್ಸು ಬೇರೆ ಎಂದು ಕ್ಷಣಮಾತ್ರಕ್ಕೂ ತಿಳಿಯಬೇಡಿರಿ. ಕಾಂಗ್ರೆಸ್ಸಿನ ಸಮುದ್ರದಲ್ಲಿ ನಾನು ಒಂದು ಹನಿ ಇದ್ದಂತೆ. ಕಾಂಗ್ರೆಸ್ಸಿನ ಹೇಳಿಕೆಯಂತೆ ನೀವು ನಡೆದುಕೊಂಡರೆ ನಿಮಗೆ ಹಿಂಸಾತ್ಮಕ ದಬ್ಬಾಳಿಕೆಯ ಅವಶ್ಯಕತೆ ಇಲ್ಲ. ನೀವೀಗ ಹಿಂಸಾತ್ಮಕ ಅತ್ಯಾಚಾರಿಗಳೊಡನೆ ಹೋರಾಡಬೇಕಾಗಿದೆ. ಶಾರೀರಿಕ ಶಕ್ತಿಯ ಉಪಾಸಕರು ತಮ್ಮ ರಕ್ತದಿಂದ ಬರೆಯುತ್ತಲಿರುವ ಬರಹವನ್ನು ನೀವು ನೋಡುವದಿಲ್ಲವೇ ? ನಮಗೆ ಗೋದಿಯ ರೊಟ್ಟಿಯು ಬೇಕಿಲ್ಲ; ಸ್ವಾತಂತ್ರ್ಯದ ರೊಟ್ಟಿಯು ಬೇಕಾಗಿದೆ. ಸ್ವಾತಂತ್ರ್ಯವು ದೊರೆಯ ದಿದ್ದರೆ ದೇಶದಲ್ಲಿಯ ಸಾವಿರಾರು ಕಾರ್ಯಕರ್ತರಿಗೂ ಶಾಂತಿಯಿಲ್ಲ, ದೇಶಕ್ಕೂ ಶಾಂತಿಯಿಲ್ಲ."

ಕೊನೆಯ ಅಭಾರಪ್ರದರ್ಶನವನ್ನು ಮಾಡುವಾಗ ಮಹಾತ್ಮರು ಹೀಗೆ ಹೇಳಿದರು. "ಈ ಮುಂದೆ ನಮ್ಮನಿಮ್ಮಲ್ಲಿ ಸಹಕಾರ ಉಂಟಾಗು ವದೋ ಇಲ್ಲವೊ ಇದು ನಿಮ್ಮ ಮೇಲೆಯೆ ಹೆಚ್ಚು ಅವಲಂಬಿಸಿದೆ. ನಾನೀಗ ಅರಸನಿಂದ ಈಸ್ಟ ಎಂಡದೊಳಗಿನ ಬಡಜನರ ವರೆಗೆ ಎಲ್ಲರಿಗೂ ನನ್ನ ಅಭಿ ನಂದನೆಯನ್ನು ಸಮರ್ಪಿಸುವೆನು. ನಾನು ಇಳಿದುಕೊಂಡಿರುವ ಈಸ್ಟ ಎಂಡಿನಲ್ಲಿಯ ಬಡವರೊಡನೆ ನಾನು ಸಮರಸನಾಗಿರುವೆನು. ನನ್ನನ್ನು ಅವರು ತಮ್ಮ ಕುಟುಂಬದವನೆಂದು ಭಾವಿಸಿರುವನು. ಅನೇಕ ಇಂಗ್ಲಿಷ ಜನರೊಡನೆ ನನಗೆ ಪರಿಚಯವಾಗಿರುವದು. ಈ ಪರಿಷತ್ತಿನ ಪರಿಣಾಮವು ಏನೆ ಆದರೂ ನಾನು ಹೋದಲ್ಲೆಲ್ಲ ನನಗೆ ಪ್ರೇಮವೆ ಕಂಡುಬಂದಿದೆ. ನಾನೆಂದಿಗೂ ಈ ಮಾತನ್ನು ಮರೆಯಲಾರೆ. ನನ್ನೊಡನೆ ಸಹಸ್ರಾವಧಿ ಇಂಗ್ಲಿಷ ಜನರ ಪ್ರೇಮವನ್ನು ಒಯ್ಯುತ್ತಲಿರುವೆನು. ಮುಖ್ಯ ಪ್ರಧಾ ನರು ಹೊರಡಿಸಿದ ಜಾಹೀರನಾಮೆಯನ್ನು ನಾನು ಮತ್ತೆ ಮತ್ತೆ ಓದಿ ಕೊಳ್ಳುವೆನು. ನನಗೆ ಅದರಿಂದ ಸಮಾಧಾನವಾಗದಿದ್ದರೆ ನನ್ನ ಮಾರ್ಗವು ನನಗೆ ನಿಮ್ಮ ಮಾರ್ಗವು ನಿಮಗೆ"

(೯೩) **ಮತ್ತೆ ಸತ್ಯಾಗ್ರಹದ ಪ್ರಾರಂಭವು** (೧೯೩೨):— ಮಹಾ ತ್ಮರು ದುಂಡು ಮೇಜಿನ ಪರಿಷತ್ತಿನಲ್ಲಿಯ ತಮ್ಮ ಕಾರ್ಯವನ್ನು ಮುಗಿಸಿ ಕೊಂಡು ಡಿಸೆಂಬರ ೨೮ನೆಯ ತಾರೀಕಿನ ದಿನ ಮುಂಬೈಗೆ ಬಂದು ತಲುಪಿ ದರು. ಅವರು ಹಿಂದುಸ್ಥಾನಕ್ಕೆ ಬರುವ ಮೊದಲೆ ವಾಯುವ್ಯಪ್ರಾಂತ

ದಲ್ಲಿಯ ಕಾಂಗ್ರೆಸ್ಸಿನ ಸ್ವಯಂಸೇವಕದಲವಾದ ಖುದಾಯಿ ಖಿದ್ಮದ್
ಗಾರ ಈ ಸಂಸ್ಥೆಯನ್ನು ಮುರಿಯುವದಕ್ಕಾಗಿ ವ್ಹಾಯಿಸರಾಯರು
ಒಂದು ಆರ್ಡಿನಸ್ಸು ಹೊರಡಿಸಿದ್ದರು. ಅದರಂತೆ ಖಾನ ಅಬ್ದುಲಗಫರಖಾನ
ರನ್ನೂ ಹಿಡಿದಿದ್ದರು. ಸಂಯುಕ್ತಪ್ರಾಂತದಲ್ಲಿಯೂ ಕೇಡುಗಾಲದ
ಮೂಲಕ ರೈತರಿಗೆ ಲಾವಣಿ ಹಣವನ್ನೂ ಹಪ್ತೆಯನ್ನೂ ಸಲ್ಲಿಸುವದು
ಕಷ್ಟಕರವಾಗಿತ್ತು. ಆದ್ದರಿಂದ ರೈತರಿಗೆ ಕೆಲಮಟ್ಟಿಗೆ ಸೂಟು ಕೊಡ
ಬೇಕೆಂದು ಚಳವಳಿಯು ಅಲ್ಲಿ ಪ್ರಾರಂಭವಾಗಿತ್ತು. ಅಲ್ಲಿಯೂ ಸರಕಾರ
ದವರು ಸಕ್ತಿಯಕ್ರಮವನ್ನು ಪ್ರಾರಂಭಿಸಿದ್ದರು. ಬಂಗಾಲದಲ್ಲಿ ಅತ್ಯಾ
ಚಾರಗಳನ್ನು ತಡೆದು ಹಿಡಿಯುವದಕ್ಕಾಗಿ ತೀಕ್ಷ್ಣವಾದ ಹೊಸ ಆರ್ಡಿ
ನನ್ಸನ್ನೇ ಹೊರಡಿಸಿದ್ದರು. ಮಹಾತ್ಮರು ತಿರುಗಿ ಬಂದನಂತರ ಜರುಗಿದ
ವರ್ಕಿಂಗ ಕಮೀಟಿಗಾಗಿ ಹೊರಟ ಪಂಡಿತ ಜವಾಹರಲಾಲರನ್ನು ದಾರಿ
ಯಲ್ಲಿಯೆ ಹಿಡಿದರು. ಇವೆಲ್ಲ ಮಾತುಗಳಿಂದ ಉದ್ವಿಗ್ನರಾಗಿ ಮಹಾತ್ಮಾ
ಗಾಂಧಿಯವರು ವ್ಹಾಯಿಸರಾಯರಿಗೆ ತಾರುಮಾಡಿ ಇವೆಲ್ಲ ಮಾತುಗಳ
ಚರ್ಚೆಗಾಗಿ ಭೆಟ್ಟಿಯಾಗಲು ಅವಕಾಶವಿದೆಯೆ, ಎಂದು ಕೇಳಿದರು. ಬಂಗಾಲ
ಸಂಯುಕ್ತಪ್ರಾಂತ ಮತ್ತು ವಾಯವ್ಯಪ್ರಾಂತ ಇವುಗಳಲ್ಲಿ ಸರಕಾರದವರು
ಕೈಕೊಂಡ ಉಪಾಯಗಳನ್ನು ಚರ್ಚಿಸಲು ಅವಕಾಶವಿಲ್ಲವೆಂದು ವ್ಹಾಯಿಸ
ರಾಯರು ಉತ್ತರವನಿತ್ತರು. ಇದಾದನಂತರ ವರ್ಕಿಂಗ ಕಮೀಟಿಯವರು
ಕಾಯದೆಭಂಗದ ಕಾರ್ಯಕ್ರಮವನ್ನು ಕೈಕೊಂಡರು. ಇತ್ತ ಸರಕಾರ
ದವರು ಕಾಯದೆಭಂಗವನ್ನು ತಡೆದು ಹಿಡಿಯಲು ಸರಕಾರಕ್ಕೆ ವಿಸ್ತೃತ
ವಾದ ಅಧಿಕಾರವನ್ನು ಕೊಡುವ ಆರ್ಡಿನನ್ಸುಗಳನ್ನು ವ್ಹಾಯಿಸ
ರಾಯರು ಹೊರಡಿಸಿದರು. ತಮಗೆ ಸಂಶಯಬಂದ ಯಾವದೆ ಮನುಷ್ಯ
ನನ್ನು ಕಲೆಕ್ಟರರು ೧೫ ದಿನಗಳವರೆಗೆ ಅತಂಕದಲ್ಲಿರಿಸಬಹುದು. ಅನಂತರ
ತನಗೆ ಯೋಗ್ಯವೆನಿಸಿದ ಹುಕುಮನ್ನು ಕೊಟ್ಟು ಅವನನ್ನು ಯಾವದೊಂದು
ಸ್ಥಳದಲ್ಲಿ ಇಡಬಹುದು. ನಿರ್ದಿಷ್ಟವಾದ ಸ್ಥಳದಲ್ಲಿರಬೇಕೆಂದೂ, ಯಾವ
ದೊಂದು ಸ್ಥಳಬಿಟ್ಟು ಹೋಗಬೇಕೆಂದೂ, ಹುಕುಂ ಮಾಡುವ ಅಧಿಕಾರವು
ಪ್ರಾಂತಿಕ ಸರಕಾರಕ್ಕೆ ಕೊಡಲ್ಪಟ್ಟಿತು. ಯಾವದೆ ಮನೆಯನ್ನು ಸರಕಾರಿ
ಜನರ ಉಪಯೋಗಕ್ಕಾಗಿ ಸರಕಾರದವರು ತಮ್ಮ ವಶಪಡಿಸಿಕೊಳ್ಳ

ಬಹುದು. ಸರಕಾರಕ್ಕೆ ಬೇಕಾದ ಮಾಲನ್ನು ಆ ಮಾಲಿನ ಯಜಮಾನರು ಸರಕಾರಕ್ಕೆ ಪೂರೈಸಬೇಕು. ಎಲ್ಲ ವಾಹನಗಳಮೇಲೆ ಜಿಲ್ಹಾ ಮ್ಯಾಜಿಸ್ಟ್ರೇಟನ ಅಭಾದಿತವಾದ ಮೇಳಾಳ್ಗೆಯು ಇರಬೇಕು. ಜಮೀನದಾರರೂ, ಶಾಲೆಯ ಶಿಕ್ಷಕರೂ ಶಾಂತತಾ ರಕ್ಷಣೆಯ ಕಾರ್ಯದಲ್ಲಿ ಕಲೆಕ್ಟರನ ಹೇಳಿಕೆಯಂತೆ ನಡೆದುಕೊಳ್ಳಬೇಕು. ಗಾಡಿಗಳನ್ನು ಬೇಕಾದಲ್ಲಿ ನಿಲ್ಲಿಸಬಹುದು. ಬೇಕಾದ ಪ್ಯಾಸೆಂಜೇರರನ್ನು ಹೊರಗೆ ಹಾಕಬಹುದು. ಚಿಕ್ಕ ಬಾಲಕರ ದಂಡವನ್ನು ಆ ಬಾಲಕರ ಪಾಲಕರು ಕೊಡಬೇಕಾಗುವದು. ಸರಕಾರದಿಂದ ನಿರ್ದಿಷ್ಟವಾದ ಅಪರಾಧಗಳನ್ನು ದಂಡಿಸುವದಕ್ಕಾಗಿ ಸಮರಿ ಕೊರ್ಟಗಳೂ, ಸ್ಪೇಶಲ್ ಜಜ್ಜರೂ, ಸ್ಪೇಶಲ್ ಮ್ಯಾಜಿಸ್ಟ್ರೇಟರೂ, ನೇಮಿಸಲ್ಪಡಬಹುದು. ಆರ್ಡಿನನ್ಸಿನಂತೆ ಮಾಡಿದ ಕೃತಿಗಳ ವಿಚಾರಣೆಯು ಯಾವ ಕೋರ್ಟಿನಲ್ಲಿಯೂ ಆಗಕೂಡದು. ಮುದ್ರಣಾಲಯದ ವಿಷಯಕ್ಕೂ ಅನೇಕ ಉಗ್ರವಾದ ಕಲಮುಗಳು ಇದೇ ಆರ್ಡಿನನ್ಸಿನಲ್ಲಿ ಒಳಪಟ್ಟಿದ್ದವು. ಬಂಗಾಲದಲ್ಲಿ ಹೊರಡಿಸಿದ ಆರ್ಡಿನನ್ಸು ಇದಕ್ಕೂ ಹೆಚ್ಚು ತೀಕ್ಷ್ಣವಾಗಿತ್ತು. ಕರಬಂದಿಯ ವಿಷಯಕ್ಕೂ, ಬೇಕಾಯಿದೆಶೀರ ಸಂಘಗಳು ಪಿಕೆಟಿಂಗ ಮತ್ತು ಬಹಿಷ್ಕಾರ ಇವುಗಳ ವಿಷಯಕ್ಕೂ ಆರ್ಡಿನನ್ಸುಗಳು ಹೊರಡಿಸಲ್ಪಟ್ಟವು.

(೯೪) **ಕಾಯದೆಭಂಗದ ಕಾರ್ಯಕ್ರಮವು:—** ಸರಕಾರೀ ಹುಕುಮುಗಳನ್ನು ಮುರಿದು ಮೆರವಣಿಗೆಗಳನ್ನು ಹೊರಡಿಸುವದು, ಸರಕಾರೀ ಹುಕುಮುಗಳನ್ನು ಮುರಿದು ಸಭೆಗಳನ್ನು ಏರ್ಪಡಿಸುವದು, ಬ್ರಿಟಿಶ ಮಾಲನ್ನೂ, ಬ್ಯಾಂಕುಗಳನ್ನೂ, ಇನ್ಸುಅರನ್ಸ ಕಂಪನಿಗಳನ್ನೂ, ಪಿಕೆಟಿಂಗಿನ ಸಹಾಯದಿಂದ ಬಹಿಷ್ಕರಿಸುವದು, ಕಾಯದೆ ವಿರುದ್ಧ ಕರಪತ್ರಗಳನ್ನು ಸಾಯಕ್ಲೊಸ್ಟೈಲ ಮೇಲೆ ಹೊರಡಿಸುವದು, ಪೋಸ್ಟ, ತಾರಾಯಂತ್ರ, ರೇಲ್ವೆ, ಟ್ರ್ಯಾಮಗಾಡಿ, ಮುಂತಾದವುಗಳ ಬಹಿಷ್ಕಾರ ಪ್ರಚಾರವನ್ನು ಮಾಡುವದು, ಕರಬಂದಿಯನ್ನು ಮಾಡುವದು, ಸರಕಾರದ ನಿರ್ಬಂಧಗಳನ್ನು ಮುರಿಯುವದು, ಸರಕಾರದವರ ವಶಕ್ಕೆ ಇದ್ದ ಕಾಂಗ್ರೆಸ ಕಮೀಟಿಗಳನ್ನು ಮತ್ತೆ ತಮ್ಮ ವಶಕ್ಕೆ ತೆಗೆದುಕೊಳ್ಳುವದು, ಈ ಕಾರ್ಯಕ್ರಮಗಳಲ್ಲದೆ ರಾಷ್ಟ್ರೀಯ ಸಪ್ತಾಹವನ್ನೂ, ರಾಜಬಂದಿದಿನ, ಪೇಶಾವರದಿನ,

ಮುಂತಾದ ದಿನಗಳನ್ನು ಆಚರಿಸುವದು, ಇವೆಲ್ಲವು ಕಾಯದೆಭಂಗದ ಕಾರ್ಯಕ್ರಮಗಳಾಗಿದ್ದವು. ಆಯಾ ಪ್ರಾಂತಗಳಲ್ಲಿ ಪ್ರಾಂತಿಕ ಪರಿಷತ್ತು ಗಳು ಜರುಗಿದವು. ೧೯೩೨ ರ ಎಪ್ರಿಲ ತಿಂಗಳಲ್ಲಿ ಕಾಂಗ್ರೆಸ್ಸಿನ ಅಧಿವೇಶ ನವು ದಿಲ್ಲಿಯಲ್ಲಿ ಆಯಿತು. ದೇಶದ ಎಲ್ಲ ಭಾಗಗಳಿಂದ ಪ್ರತಿನಿಧಿಗಳು ಬಂದಿದ್ದರು. ಬಂದ ಪ್ರತಿನಿಧಿಗಳಲ್ಲಿ ೮೦೦ ಜನರನ್ನು ಹಿಡಿದು ಕೆಲವರಿಗೆ ಶಿಕ್ಷೆಕೊಟ್ಟು ಉಳಿದವರನ್ನು ಬಿಟ್ಟುಬಿಟ್ಟರು. ೧೯೩೩ ರಲ್ಲಿ ಕಲಕತ್ತೆ ಯಲ್ಲಿಯೂ ಕಾಂಗ್ರೆಸ್ಸಿನ ಅಧಿವೇಶನವಾಯಿತು.

(೯೫) **ಸರಕಾರದ ಉಪಾಯ ಯೋಜನೆಯು:**— ಕಾಯದೆ ಭಂಗವು ಪ್ರಾರಂಭವಾದ ಕೂಡಲೆ ಸರಕಾರದವರು ದೇಶದಲ್ಲಿಯ ಎಲ್ಲ ಮುಖ್ಯ ಕಾರ್ಯಕರ್ತರನ್ನು ಕೂಡಲೆ ಹಿಡಿದುಬಿಟ್ಟರು. ಅನಂತರ ಕಾಯದೆ ಭಂಗ ಮಾಡಿದವರನ್ನು ಹಿಡಿದು ಶಿಕ್ಷೆ ಕೊಡಹತ್ತಿದರು ಸೆರೆ ಮನೆಯಲ್ಲಿ ಸ್ಥಳವಿಲ್ಲದಂತಾಗಿ ಅನೇಕ ಕ್ರಿಮಿನಲ್ ಕೈದಿಗಳನ್ನು ಅವಧಿಯು ಮುಗಿಯುವ ಮೊದಲೆ ಬಿಡಬೇಕಾಯಿತು. ಆರ್ಡಿನನ್ಸಿನಂತೆ ಕಠೋರ ವಾದ ಶಿಕ್ಷೆಗಳು ಕೊಡಲ್ಪಟ್ಟವು. ಒಂದೇ ಒಂದು ಉದಾಹರಣೆಯನ್ನು ಕೊಡಬೇಕೆಂದರೆ ಹೂಲಿಯ ವೆಂಕರಡ್ಡಿಯವರಿಗೆ ದಂಡದ ಶಿಕ್ಷೆಯನ್ನು ಹಿಡಿದು ೯ ವರ್ಷದ ಶಿಕ್ಷೆಯಾಯಿತು. ಪ್ರಭಾತಫೇರಿಯನ್ನು ಮಾಡಿದವ ರಿಗೆ ಮೂರು ಮೂರು ವರ್ಷಗಳ ಶಿಕ್ಷೆಯಾಯಿತು. ಚಿಕ್ಕ ಬಾಲಕರಿಗೆ ಅಲ್ಲಲ್ಲಿ ಫಟಕಿ ಶಿಕ್ಷೆಗಳಾದವು. ಕೆಲವು ಸೆರೆಮನೆಗಳಲ್ಲಿ ಅನಾಚಾರ ಅತ್ಯಾ ಚಾರಗಳಾದವು. ಇಂತಹ ಅತ್ಯಾಚಾರಗಳಿಗಾಗಿ ನಾಸಿಕ ಜೇಲಿನ ಇಬ್ಬರು ಅಧಿಕಾರಿಗಳು ಶಿಕ್ಷೆ ಹೊಂದಿ ಸೆರೆಮನೆಯ ಕಷ್ಟಗಳನ್ನು ತಾವೇ ಅನುಭೋಗಿಸಬೇಕಾಗಿ ಬಂದಿತು. ಎಲ್ಲ ಕಾಂಗ್ರೆಸ ಕಮಿಟಿಗಳ ಕಟ್ಟಡ ಗಳನ್ನು ಸರಕಾರದವರು ವಶಪಡಿಸಿಕೊಂಡರು. ಕೆಲವು ಕಡೆಗೆ ಜನರನ್ನು ಮನೆಹೊರಗೆ ಹಾಕಿ ಅಲ್ಲಿ ಪೋಲೀಸರನ್ನು ಇಟ್ಟರು. ಎಲ್ಲ ಕಡೆಯ ರಾಷ್ಟ್ರೀಯ ಧ್ವಜಗಳನ್ನು ಕಿತ್ತು ಹಾಕಿದರು. ದೇಶದಲ್ಲಿಯ ಸಾವಿರಾರು ಜನರ ಮೇಲೆ ನಿರ್ಬಂಧಗಳನ್ನು ಹಾಕಿದರು. ಈ ಅನೇಕ ತರಹದ ಉಪಾಯ ಗಳಿಂದ ಸರಕಾರದವರು ಕಾಯದೆಭಂಗದ ಚಳವಳಿಯನ್ನು ಮುರಿಯಲು ಯತ್ನಿಸಿದರು.

(೯೬) **ಕಾಂಗ್ರೆಸಿನ ಸಂಘಟನೆ:**— ಕಾಯದೆ ಭಂಗದ ಚಳವಳಿಯಲ್ಲಿ ಕಾಂಗ್ರೆಸ್ಸಿನ ಪರವಾಗಿ ನಡೆದ ಚಟುವಟಿಕೆಗಳನ್ನು ಪೂರ್ಣವಾಗಿ ವರ್ಣಿಸುವದು ಸಾಧ್ಯವಿಲ್ಲ. ಕೊನೆಯ ವರೆಗೂ ಕಾಂಗ್ರೆಸ್ಸಿನ ಸಂಘಟನೆಯು ಸ್ಥಿರವಾಗಿಯೆ ಉಳಿಯಿತು. ಆಲ್ ಇಂಡಿಯಾ ಕಾಂಗ್ರೆಸ್ ಕಚೇರಿಯವರು ಆಗಾಗ ಪ್ರಕಟನೆಗಳನ್ನು ಹೊರಡಿಸಿ ಸಲಹೆಗಳನ್ನು ಕೊಟ್ಟು ಅವಶ್ಯವಿದ್ದಲ್ಲಿ ಧನಸಹಾಯವನ್ನು ಮಾಡುತ್ತಲಿದ್ದರು. ಅವರ ಸಂದೇಶಗಳೂ, ಪ್ರಕಟನೆಗಳೂ, ಎಲ್ಲ ಪ್ರಾಂತಗಳಿಗೆ ಸುರಕ್ಷಿತವಾಗಿ ಮುಟ್ಟುತ್ತಿದ್ದವು. ದೇಶದಲ್ಲೆಲ್ಲ ಬುಲೆಟಿನ್ನಗಳು ಹೊರಡುತ್ತಲಿದ್ದವು. ಅಲ್ಲಲ್ಲಿ ಜಂಗಲ ಸತ್ಯಾಗ್ರಹವೂ, ಉಪ್ಪಿನ ಸತ್ಯಾಗ್ರಹವೂ ಆಯಿತು. ಸರಕಾರೀ ಹುಕುಮುಗಳನ್ನು ಬೇರೆ ಬೇರೆ ಜನರು ಬೇರೆ ಬೇರೆ ತರದಿಂದ ಮುರಿದರು. ಕೆಲವರು ಕೋರ್ಟು ಕಚೇರಿಗಳ ಮೇಲೆ ರಾಷ್ಟ್ರಧ್ವಜವನ್ನು ಏರಿಸಿದರು. ಕೆಲವರು ಸರಕಾರೀ ದರಬಾರಗಳಲ್ಲಿ ಕರೆ ನಿಶಾನೆಯನ್ನು ಹಿಡಿದರು. ಇನ್ನೂ ಕೆಲವರು ಹುಕುಮುಗಳನ್ನು ಮುರಿದು ಪ್ರಭಾತ ಫೇರಿಯನ್ನು ಹೊರಡಿಸಿದರು. ಕೆಲವರು ಸರಕಾರದ ವಶಕ್ಕೆ ಇದ್ದ ಕಾಂಗ್ರೆಸ ಕಚೇರಿಗಳನ್ನು ಮುತ್ತಿದರು. ಈ ರೀತಿ ಅನೇಕ ವಿಧವಾಗಿ ಜನರು ಕಾಯದೆಭಂಗವನ್ನು ಮಾಡಿ ಸುಮಾರು ೧ ಲಕ್ಷ ಜನರು ಸೆರೆಮನೆಯನ್ನು ಸೇರಿದರು. ಅವರಲ್ಲಿ ಕೆಲವರು ಎರಡೆರಡು, ಮೂರು ಮೂರು ಸಾರೆ ಸೆರೆಮನೆಗೆ ಹೋದರು. ಕರಬಂದಿಯಲ್ಲಿ ಸೇರಿದ ಬಾರ್ಡೋಲಿ, ಬೋರ್ಸಾದ, ಸಿದ್ದಾಪೂರ, ಅಂಕೋಲಾ, ಮುಂತಾದ ತಾಲೂಕುಗಳಲ್ಲಿಯ ರೈತರ ಆಸ್ತಿಪಾಸ್ತಿಗಳೆಲ್ಲವೂ ಜಪ್ತಾದವು. ಅವರಲ್ಲಿ ಅನೇಕರಿಗೆ ಶಿಕ್ಷೆಯಾಯಿತು. ಅವರ ಮನೆಮಾರುಗಳೆಲ್ಲವೂ ಹಾಳಾಗಿಹೋದವು. ದೇಶದಲ್ಲೆಲ್ಲ ಪೋಲಿಸರು ಸಂಶಯಬಂದ ಮನೆಗಳನ್ನು ಹೊಕ್ಕು ತಪಾಸು ಮಾಡುತ್ತಿದ್ದರು. ೧೯೩೨ ನೆಯ ಇಸ್ವಿಯಲ್ಲಿ ಸರಕಾರಕ್ಕೂ ಜನತೆಗೂ ಘನಘೋರವಾದ ಶಾಂತಯುದ್ಧವೆ ಆಯಿತು.

(೯೭) **ಕರ್ನಾಟಕದಲ್ಲಿಯ ಆಂದೋಲನವು:**— ಉಳಿದ ಪ್ರಾಂತಗಳಂತೆ ಈ ಮೊದಲೆ ಕರ್ನಾಟಕದಲ್ಲಿಯೂ ರಾಷ್ಟ್ರೀಯ ಜಾಗೃತಿಯು ಮೆಲ್ಲಮೆಲ್ಲಗೆ ಹೆಚ್ಚಾಗುತ್ತ ನಡೆದಿತ್ತು. ೧೮೯೭, ೯೮ ರ ಪ್ಲೇಗಿನ ಹಾವ

ಳಿಯ ಸಮಯಕ್ಕೆ ಕರ್ನಾಟಕದಲ್ಲಿ ವಿಶೇಷ ಜಾಗೃತಿಯಾಯಿತು. ಧಾರವಾಡದಲ್ಲಿ ಹಯಗ್ರೀವಾಚಾರ್ಯರೆಂಬುವವರು ತಮ್ಮ ಮನೆಯನ್ನು ಸೋಲ್ಜರರು ಹೊಕ್ಕರೆಂದು ಕಳವಳಗೊಂಡು ಬಾವಿಬಿದ್ದು ಆತ್ಮಹತ್ಯೆಯನ್ನು ಮಾಡಿಕೊಂಡಿದ್ದರು. ಮುಂದೆ ವಂಗಭಂಗದ ಕಾಲಕ್ಕೆ ಕರ್ನಾಟಕದಲ್ಲಿಯೂ ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ, ಇವುಗಳ ವಿಷಯಕ್ಕೆ ಒಳ್ಳೆ ಪ್ರಖರತೆಯಿಂದ ಚಳವಳಿಯಾಯಿತು. ಧಾರವಾಡ, ಬೆಳಗಾಂವಿ, ನರಗುಂದ, ವಿಜಾಪೂರ ಮುಂತಾದ ಅನೇಕ ಸ್ಥಳಗಳಲ್ಲಿ ರಾಷ್ಟ್ರೀಯ ಶಾಲೆಗಳು ಏರ್ಪಡಿಸಲ್ಪಟ್ಟಿದ್ದವು. ಮುಂದೆ ಹೋಮರೂಲಿನ ಚಳವಳಿಯ ಕಾಲಕ್ಕೂ ಸಭೆ ವರ್ತಮಾನ ಪತ್ರಗಳ ಮುಖಾಂತರವಾಗಿ ಪ್ರಚಾರ ಕಾರ್ಯ ವಾಯಿತು. ೧೯೨೦ ರಲ್ಲಿ ಕರ್ನಾಟಕವು ಕಾಂಗ್ರೆಸ್ಸಿನ ಸ್ವತಂತ್ರ ಪ್ರಾಂತ ವಾಯಿತು. ಅಸಹಕಾರ ಕಾಲದಲ್ಲಿಯೂ ಖಾದೀ ಮದ್ಯಪಾನ ಪ್ರತಿಬಂಧ ರಾಷ್ಟ್ರೀಯಶಿಕ್ಷಣ, ಶಾಲೆ ಕಾಲೇಜ ಬಹಿಷ್ಕಾರ ಮುಂತಾದ ಚಳವಳಿಗಳು ಒಳ್ಳೆ ಜೋರಿನಿಂದ ನಡೆದವು. ಧಾರವಾಡದಲ್ಲಿ ಸೆರೆದಂಗಡಿಯ ಮುಂದೆ ಪಿಕೆಟಿಂಗ ಮಾಡುವಾಗ ಪೋಲಿಸರು ಹೊಡೆದ ಗುಂಡಿನಿಂದ ಇಬ್ಬರು ಸತ್ತರು. ಅದೆ ಪ್ರಕರ್ಣದಲ್ಲಿ ೨೩ ಪ್ರಮುಖ ಕಾರ್ಯಕರ್ತರಿಗೆ ಕಠೋರ ವಾದ ಶಿಕ್ಷೆಗಳಾದವು. ಅದೆ ಸುಮಾರಿಗೆ ಕರ್ನಾಟಕದ ಬೇರೆ ಬೇರೆ ಸ್ಥಳ ಗಳಲ್ಲಿ ಅನೇಕ ಕಾರ್ಯಕರ್ತರಿಗೆ ಶಿಕ್ಷೆಗಳಾದವು. ಆ ಮೊದಲಿನಿಂದಲೆ ಪ್ರಾರಂಭಿಸಲ್ಪಟ್ಟ ಏಕೀಕರಣ ಚಳವಳಿಯು ಬೆಳೆದು ಕರ್ನಾಟಕಕ್ಕೆ ಸ್ವತಂತ್ರ ಪ್ರಾಂತವು ಸಿಗಬೇಕೆಂದು ನೆಹ್ರು ಕಮಿಟಿಯವರು ಸೂಚಿಸಿದರು. ೧೯೩೦ ರ ಸತ್ಯಾಗ್ರಹದ ಚಳವಳಿಯು ಕರ್ನಾಟಕದಲ್ಲಿ ಒಳ್ಳೆ ಕಸುವಿನಿಂದ ನಡೆಯಿತು. ಅಂಕೋಲೆಯೇ ಉಪ್ಪಿನ ಸತ್ಯಾಗ್ರಹದ ಕೇಂದ್ರವಾಗಿ ಮಾಡ ಲ್ಪಟ್ಟು ಉಪ್ಪಿನ ಸಂತೆಗಳು ಆದವು. ಎಲ್ಲ ಜಿಲ್ಲೆಗಳಲ್ಲಿ ಶಿಂದೀಗಿಡಗಳ ಸಂಹಾರವು ಆಯಿತು. ಕಾರವಾರ ಬೆಳಗಾಂವ ಜಿಲ್ಲೆಗಳಲ್ಲಿ ಜಂಗಲ ಸತ್ಯಾಗ್ರಹವಾಯಿತು. ಕೊನೆಗೆ ಸಿರ್ಸಿ, ಸಿದ್ದಾಪೂರ, ಅಂಕೋಲೆ, ಹಿರೇ ಕೆರೂರ ತಾಲುಕುಗಳಲ್ಲಿ ಕರಬಂದಿಯು ಕೈಕೊಳ್ಳಲ್ಪಟ್ಟಿತು. ೧೯೩೦-೩೧ ಇಸ್ವಿಗಳಲ್ಲಿ ಪರದೇಶೀ ವಸ್ತ್ರಬಹಿಷ್ಕಾರದ ಕಾರ್ಯಕ್ರಮವು ಯಶಸ್ವಿ ಯಾಗಿ ನೆರವೇರಿತು.

೧೯೩೨ ರಲ್ಲಿ ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಅನೇಕ ಜನರು ಸೆರೆಹಿಡಿಯಲ್ಪಟ್ಟರು. ಆದರೆ ಎಲ್ಲ ಕಾರ್ಯಕ್ರಮಗಳಲ್ಲಿ ಎಲ್ಲಕ್ಕೂ ಪ್ರಮುಖ ಕಾರ್ಯಕ್ರಮವೆಂದರೆ ಕಾರವಾರದಲ್ಲಿ ನಡೆದ ಕರಬಂದಿ. ೧೯೩೦ ನೆಯ ಇಸ್ವಿಯಲ್ಲಿ ಗುಜರಾಥದಲ್ಲಿ ಬಾಡೋಲಿ ಬೋರ್‌ಸಾರ್ ತಾಲೂಕುಗಳ ರೈತರು ಕರಬಂದಿಯನ್ನು ಮಾಡಿ ೧೮ ಲಕ್ಷ ಜಂಗಮ ಮಾಲನ್ನು ೧೨ ಲಕ್ಷ ರೂಪಾಯಿ ಬೆಲೆಬಾಳುವ ಭೂಮಿಯನ್ನೂ ಕಳಕೊಂಡಿದ್ದರು. ಬಾಡೋ ಲಿಯ ಉದಾಹರಣೆಯನ್ನೇ ಅನುಸರಿಸಿ ಕರ್ನಾಟಕದಲ್ಲಿಯೂ ಆ ಕಾಲಕ್ಕೆ ಕರಬಂದಿಯು ಪ್ರಾರಂಭವಾಗಿತ್ತು. ೧೯೩೨ ರಲ್ಲಿ ಪ್ರಾರಂಭದಿಂದಲೆ ಸಿದ್ದಾಪೂರ ಅಂಕೋಲೆ ತಾಲೂಕುಗಳಲ್ಲಿ ಕರಬಂದಿ ಚಳವಳಿಯು ಸಂಘಟಿತ ವಾಗಿ ನಡೆಯಿತು. ಸಿದ್ದಾಪೂರದಲ್ಲಿ ೪೨ ಖಾತೆದಾರರು ೫೪೦೦೦ ರೂಪಾಯಿಯ ಜಂಗಮ ಮಾಲನ್ನೂ ನಾಲ್ಕಾರು ಲಕ್ಷ ಬೆಲೆ ಬಾಳುವ ಭೂಮಿಯನ್ನು ಕಳಕೊಂಡರು. ಅಂಕೋಲೆಯಲ್ಲಿ ೪೦೦ ಖಾತೆದಾರರು ೫೦-೫೫ ಸಾವಿರ ರೂಪಾಯಿಯ ಜಂಗಮ ಮಾಲನ್ನೂ ೪ ಲಕ್ಷ ರೂಪಾಯಿ ಬೆಲೆ ಬಾಳುವ ಭೂಮಿಯನ್ನೂ ಕಳಕೊಂಡರು. ಜಪ್ತಿಗಳೂ ಶಿಕ್ಷೆಗಳೂ ಆದವು. ಇವೆರಡೂ ತಾಲೂಕಿನ ಗಂಡಸರೂ ಹೆಂಗಸರೂ, ಅನೇಕ ತರಹದ ಕಷ್ಟ ನಷ್ಟಗಳನ್ನು ಅನುಭವಿಸಿದರು. ಅವನ್ನೆಲ್ಲ ಇಲ್ಲಿ ವಿಸ್ತಾರಪೂರ್ವಕವಾಗಿ ಹೇಳುವದು ಸಾಧ್ಯವಿಲ್ಲ. ಕರಬಂದಿ ಮಾಡಿದವರ ವಿಷಯಕ್ಕೆ ಸರದಾರ ವಲ್ಲಭಾಯಿಯವರು ಈ ತರಹದ ಪ್ರಶಂಸನೆಯನ್ನು ಮಾಡಿದರು: "ಕಾರವಾರ ಜಿಲ್ಲೆಯ ರೈತರು ಆಸ್ತಿಪಾಸ್ತಿಗಳನ್ನು ಕಳಕೊಂಡರು. ಕಷ್ಟನಷ್ಟಗಳನ್ನು ಸಹಿಸಿದರು. ಜಪ್ತಿ, ಆಸ್ತಿಹಾನಿ, ಸೆರೆಮನೆ ಮುಂತಾ ದವುಗಳನ್ನೂ ಅವಕ್ಕಿಂತ ಹೆಚ್ಚಿನ ಕಷ್ಟಗಳನ್ನೂ ಸಹಿಸಿರುವರು. ಗಂಡಸರೂ, ಹೆಂಗಸರೂ, ಬಂದ ಕಷ್ಟನಷ್ಟಗಳನ್ನೂ ಅತ್ಯಂತ ಧೈರ್ಯದಿಂದ ತಡ ಕೊಂಡರು. ಇವೊತ್ತಿನದಿನ ಅವರು ಸಂಪೂರ್ಣರಾಗಿ ನಿರಾಶ್ರಿತರಾಗಿರುವರು. ಅವರ ಶೌರ್ಯದ ಸ್ವಾರ್ಥತ್ಯಾಗದ ಕತೆಗಳು ನನ್ನಲ್ಲಿ ಹೆಮ್ಮೆಯನ್ನುಂಟು ಮಾಡಿವೆ. ಅವರ ಕಷ್ಟನಷ್ಟಗಳ ಸುದ್ದಿಯಿಂದ ಎಷ್ಟೋಸಲ ನನ್ನ ಮನಸ್ಸು ಮುರಿದು ಹೋದಂತಾಗಿದೆ." ಮೈಸೂರು ಸೀಮೆಯ ಕಾರ್ಯಕರ್ತರು ಎರಡೂ ಆಂದೋಲನಗಳಲ್ಲಿ ದ್ರವ್ಯಬಲವನ್ನೂ ಜನಬಲವನ್ನೂ ಪೂರೈಸಿದರು; ೧೯೩೨ ರ ಕರಬಂದಿಯ ಚಳವಳಿಯ ನೇತೃತ್ವವು ಅವರ ಕಡೆಗೆ ಇತ್ತು.

೧೯೩೨ರ ಸತ್ಯಾಗ್ರಹದ ಚಟುವಟಿಕೆಗಳನ್ನೂ ಸರಕಾರದವರು ಕೈಕೊಂಡ ಉಪಾಯುಗಳನ್ನೂ ಪೂರ್ಣವಾಗಿ ವರ್ಣಿಸುವದು ಸಾಧ್ಯವಿಲ್ಲ.

(೯೮) **ವಿಧಾಯಕ ಕಾರ್ಯಕ್ರಮವು.** (೧೯೩೩–೩೫):— ೧೯೩೨ರ ಸಪ್ಟಂಬರ ತಿಂಗಳಲ್ಲಿ ಸರಕಾರದವರು ಹೊಸ ಕಾಯದೆಯಲ್ಲಿ ಅಸ್ಪೃಶ್ಯರ ಮತದಾರ ಸಂಘವನ್ನು ಬೇರೆ ಮಾಡಿದ್ದರಿಂದ ಮಹಾತ್ಮರು ಉಪವಾಸವನ್ನು ಕೈಕೊಂಡರು. ಎಲ್ಲ ಮುಖಂಡರ ಪರಿಷತ್ತು ಆಗಿ ಮಹಾತ್ಮರಿಗೆ ಸಮಾಧಾನಕಾರಕವಾಗುವಂತೆ ಬದಲಾವಣೆಯು ಮಾಡಲ್ಪಟ್ಟಿತು. ೧೯೩೩ರ ಮೆ ತಿಂಗಳಲ್ಲಿಯೂ ಮಹಾತ್ಮರು ಆತ್ಮಶುದ್ಧಿಗಾಗಿ ೨೧ ದಿನದ ಉಪವಾಸವನ್ನು ಕೈಕೊಂಡರು, ಸರಕಾರದವರು ಅವರನ್ನು ಬಿಡುಗಡೆ ಮಾಡಿದರು. ಮುಂದೆ ದೇಶದಲ್ಲಿಯ ಎಲ್ಲ ಕಾರ್ಯಕರ್ತರ ಪರಿಷತ್ತು ಕೂಡಿ ಸಾಮೂಹಿಕ ಸತ್ಯಾಗ್ರಹವು ನಿಲ್ಲಿಸಲ್ಪಟ್ಟು ವೈಯಕ್ತಿಕ ಸತ್ಯಾಗ್ರಹವಷ್ಟೆ ನಡೆಯಬೇಕೆಂದು ಗೊತ್ತಾಯಿತು. ಮುಂದೆ ಅಗಸ್ಟ ತಿಂಗಳಲ್ಲಿ ಮಹಾತ್ಮರು ಮತ್ತೆ ಸೆರೆಮನೆಯನ್ನು ಸೇರಿದರು. ಆದರೆ ಸ್ವಲ್ಪ ಕಾಲದಲ್ಲಿಯೆ ಸೆರೆಮನೆಯಿಂದಲೆ ಅವರು ನಡಿಸಿದ ಹರಿಜನ ಸೇವೆಗೆ ಅಧಿಕಾರಿಗಳು ಆತಂಕವನ್ನುಂಟು ಮಾಡಿದ್ದರಿಂದ ಮತ್ತೆ ಉಪವಾಸವನ್ನು ಕೈಕೊಂಡರು; ಸರಕಾರದವರು ಅವರನ್ನು ಮತ್ತೆ ಬಿಡುಗಡೆಮಾಡಿದರು. ಅನಂತರ ಒಂದು ವರ್ಷದವರೆಗೆ ಮಹಾತ್ಮರು ಹರಿಜನ ಪ್ರಚಾರ ಕಾರ್ಯವನ್ನು ಕೈಕೊಂಡರು. ವೈಯಕ್ತಿಕ ಸತ್ಯಾಗ್ರಹವು ನಿಲ್ಲಿಸಲ್ಪಟ್ಟಿತು. ಸರಕಾರದವರು ಕಾಂಗ್ರೆಸ ಸಂಸ್ಥೆಗಳ ಮೇಲಿನ ನಿರ್ಬಂಧಗಳನ್ನು ತೆಗೆದುಹಾಕಿದರು. ಅನಂತರ ೧೯೩೪ರಲ್ಲಿ ಕಾಂಗ್ರೆಸಿನ ಹುರಿಯಾಳುಗಳು ಅಸೆಂಬ್ಲಿಯನ್ನು ಸೇರಿದರು. ೧೯೩೪ರ ಅಕ್ಟೋಬರ ತಿಂಗಳಲ್ಲಿ ಕಾಂಗ್ರೆಸ್ಸಿನ ಅಧಿವೇಶನವು ಮುಂಬೈಯಲ್ಲಿ ಒಳ್ಳೆ ವಿಜೃಂಭಣೆಯಿಂದ ಜರುಗಿತು. ಬಾಬು ರಾಜೇಂದ್ರ ಪ್ರಸಾದರು. ಅಧ್ಯಕ್ಷರಿದ್ದರು. ದೇಶದಲ್ಲಿ ವಿಧಾಯಕ ಕಾರ್ಯಕ್ರಮವು ಕೈಕೊಳ್ಳಲ್ಪಡಬೇಕೆಂದು ಗೊತ್ತಾಯಿತು. ೧೯೩೫ರ ಅಗಸ್ಟ ತಿಂಗಳಲ್ಲಿ ಹೊಸ ರಾಜ್ಯ ಘಟನೆಯ ಕಾಯದೆಯು ಪಾಸಾಯಿತು. ಆ ಕಾಯದೆಯಂತೆ ಪ್ರಾಂತದ ಆಡಳಿತೆಯು ಮಂತ್ರಿಗಳಿಗೆ ಒಪ್ಪಿಸಲ್ಪಟ್ಟಿದ್ದರೂ ಕಡೆಯ ನಿರ್ಣಯದ ಅಧಿಕಾರವು ಗವರ್ನರ ಕಡೆಗೆ ಇದೆ; ಹಿಂದುಸ್ಥಾನ ಸರಕಾರದ ಕೆಲವು ವಿಷಯುಗಳು

ಮಂತ್ರಿಗಳ ಕಡೆಗೆ ಒಪ್ಪಿಸಲ್ಪಟ್ಟರೂ ಸೈನ್ಯ ಅಂತರ್ವ್ಯವಸ್ಥೆ ಮುಂತಾದ ಮುಖ್ಯ ಮಾತುಗಳು ಪೂರ್ಣವಾಗಿ ಗವರ್ನರ ಜನರಲರ ವಶಕ್ಕೆ ಒಪ್ಪಿಸಲ್ಪಟ್ಟಿವೆ. ಆದುದರಿಂದ ಈ ಕಾಯದೆಯಿಂದ ಹಿಂದುಸ್ತಾನದ ಯಾವ ಪಕ್ಷಕ್ಕೂ ಸಮಾಧಾನವಾಗಿಲ್ಲ. ಕಾಂಗ್ರೆಸಿನ ವಿಧಾಯಕ ಕಾರ್ಯಕ್ರಮದ ಪ್ರಚಾರವನ್ನು ಮಾಡಲು ರಾಷ್ಟ್ರಪತಿ ರಾಜೇಂದ್ರ ಪ್ರಸಾದರು ದೇಶದಲ್ಲೆಲ್ಲ ಸಂಚಾರವನ್ನು ಕೈಕೊಂಡರು. ೧೯೩೫ರ ಡಿಸೆಂಬರ ೨೮ನೆಯ ತಾರೀಖಿನ ದಿನ ಕಾಂಗ್ರೆಸ್ಸಿಗೆ ೫೦ ವರ್ಷಗಳು ತುಂಬುತ್ತಿದ್ದದರಿಂದ ಆ ದಿನ ಹಿಂದುಸ್ತಾನದಲ್ಲಿ ಉತ್ಸವವು ನೆರವೇರಬೇಕೆಂದು ವರ್ಕಿಂಗ ಕಮಿಟಿಯವರು ಆಜ್ಞೆಯನ್ನಿತ್ತರು. ಆ ಉತ್ಸವದ ಪುಣ್ಯ ಪ್ರಸಂಗದಲ್ಲಿಯೆ ಚಿಕ್ಕ ಸೇವೆಯೆಂದು ಬರೆಯಲ್ಪಟ್ಟಿರುವ ಈ ಕಾಂಗ್ರೆಸ್ಸಿನ ಕಥೆಯನ್ನು ಓದುಗರು ಸವಿಮಾಡಿಕೊಳ್ಳಲೆಂದು ಪ್ರಾರ್ಥಿಸಿ ಈ ಚಿಕ್ಕ ಪುಸ್ತಕವನ್ನು ಇಲ್ಲಿ ಮುಗಿಸುವೆವು.

## ಪರಿಶಿಷ್ಟ

## ಕಾಂಗ್ರೆಸಿನ ಘಟನೆ

(೧) ಗುರಿ:— ಕಾಲಕಾಲಕ್ಕೆ ಅವಶ್ಯವಾದಂತೆ ಕಾಂಗ್ರೆಸ್ಸಿನ ಘಟನೆಯಲ್ಲಿ ಬದಲಾವಣೆಯಾಗುತ್ತ ನಡೆದಿದೆ. ಕಾಂಗ್ರೆಸಿನ ಮೊದಲಿನ ಗುರಿಯು ದೇಶದ ವಿವಿಧ ಭಾಗಗಳಲ್ಲಿಯ ಮುಖಂಡರಲ್ಲಿ ಪರಸ್ಪರ ಪರಿಚಯವುಂಟಾಗಿ ರಾಷ್ಟ್ರಕ್ಕೆ ಹಿತವಾಗುವಂತಹ ಮಾತುಗಳನ್ನು ನಿರ್ಣಯಿಸುವದಿಷ್ಟೇ ಇತ್ತು. ೧೮೯೯ರಲ್ಲಿ ಲಖನೌದಲ್ಲಿ ಜರುಗಿದ ಕಾಂಗ್ರೆಸಿನಲ್ಲಿ "ಕಾಯದೆಶೀರ ಉಪಾಯಗಳಿಂದ ಹಿಂದುಸ್ತಾನದ ಹಿತವನ್ನು ಸಾಧಿಸುವದೆ ಕಾಂಗ್ರೆಸಿನ ಗುರಿಯೆಂದು" ಗೊತ್ತಾಯಿತು. ಸುರತದಲ್ಲಿ ಒಡಕು ಹುಟ್ಟಿದನಂತರ ಅಲಹಾಬಾದಿನಲ್ಲಿ ಕೂಡಿದ ಕಮಿಟಿಯವರು "ಆಡಳಿತೆಯಲ್ಲಿ ಮೆಲ್ಲಮೆಲ್ಲಗೆ ಸುಧಾರಣೆಯನ್ನು ಮಾಡಿ ಕಾಯದೇಶೀರ ಉಪಾಯಗಳಿಂದ ವಸಾಹತ್ತು ಸ್ವರಾಜ್ಯವನ್ನು ದೊರಕಿಸುವದೆ" ಕಾಂಗ್ರೆಸಿನ ಗುರಿಯೆಂದು ಗೊತ್ತಾಯಿತು;

೧೯೨೦ರಲ್ಲಿ ನಾಗಪುರ ಕಾಂಗ್ರೆಸಿನ ಅಧಿವೇಶನದಲ್ಲಿ "ಶಾಂತ ಮತ್ತು ಯೋಗ್ಯವಾದ ಉಪಾಯಗಳಿಂದ ಸ್ವರಾಜ್ಯವನ್ನು ಗಳಿಸುವದೆ ಕಾಂಗ್ರೆಸಿನ ಗುರಿಯೆಂದು" ನಿರ್ಣಯಿಸಲ್ಪಟ್ಟಿತು. ಸ್ವರಾಜ್ಯವೆಂದರೆ ಸಂಪೂರ್ಣ ಸ್ವರಾಜ್ಯವೆಂದು ಲಾಹೋರದ ಅಧಿವೇಶನದಲ್ಲಿ (೧೯೨೯) ಗೊತ್ತಾಯಿತು. ಕರಾಚಿಯ ಅಧಿವೇಶನದಲ್ಲಿ ಈ ಕೆಳಗಿನ ಮಾತುಗಳು ಸ್ವರಾಜ್ಯದಲ್ಲಿ ಅಂತರ್ಗತವಾಗುವವೆಂದು ನಿರ್ಣಯಿಸಲ್ಪಟ್ಟಿತು.

(೧) ಸ್ವತಂತ್ರ ಹಿಂದುಸ್ತಾನದಲ್ಲಿ ಎಲ್ಲರಿಗೂ ಸಭಾ ಸ್ವಾತಂತ್ರ್ಯ, ಭಾಷಣ ಸ್ವಾತಂತ್ರ್ಯ, ಸಂಘ ಸ್ವಾತಂತ್ರ್ಯ, ಮುದ್ರಣ ಸ್ವಾತಂತ್ರ್ಯ, ಹಾಗೂ ವ್ಯಕ್ತಿ ಸ್ವಾತಂತ್ರ್ಯ ಇವು ಇರುವವು. (೨) ಸ್ತ್ರೀ ಪುರುಷರಿಗೆ, ಎಲ್ಲ ಜಾತಿಯ ಹಾಗೂ ಧರ್ಮದ ಜನರಿಗೆ ಎಲ್ಲ ಸಾರ್ವಜನಿಕ ವಿಷಯಗಳಲ್ಲಿ ಮತ್ತು ನೌಕರಿ ಮುಂತಾದವುಗಳಲ್ಲಿ ಸಮಾನ ಹಕ್ಕುಗಳಿರುವವು. (೩) ವಯಸ್ಸಿಗೆ ಬಂದವರಿಗೆಲ್ಲ ಎಲ್ಲಕ್ಕೂ ಹೆಚ್ಚಿನ ರಾಜಕೀಯ ಅಧಿಕಾರವಾದ ಮತಾಧಿಕಾರವು ಇರುವದು. (೪) ದೇಹಾಂತಶಿಕ್ಷೆ, ಪದವೀದಾನ, ಶೆರೆ ಶಿಂದಿ ಮುಂತಾದ ಮಾದಕ ಪದಾರ್ಥಗಳ ಸೇವನ, ದಾಸ್ಯ, ಉಪ್ಪಿನ ಕರ ಇವು ರದ್ದು ಮಾಡಲ್ಪಡುವವು. (೫) ಕೂಲಿಕಾರರಿಗೆಲ್ಲ ಅವರ ಜೀವನಕ್ಕೆ ಅವಶ್ಯವಿದ್ದಷ್ಟು ಕೂಲಿಯು ಕಾಯದೆಯಿಂದ ಸಲ್ಲುವದು, (೬) ಭೂಕಂದಾಯ ಅರ್ಧವಾಗುವದು, ತೀರ ಚಿಕ್ಕ ಹೊಲಗಳ ಕಂದಾಯವು ತೆಗೆದು ಹಾಕಲ್ಪಡುವದು. ಸಾಲ, ಬಡ್ಡಿದರ, ಇವುಗಳ ಬಗ್ಗೆ ರೈತರ ಹಿತವನ್ನು ನೋಡಿ ಕಟ್ಟಳೆಗಳು ಮಾಡಲ್ಪಡುವವು. (೭) ಸೈನ್ಯದ ಖರ್ಚು ಅರ್ಧಕ್ಕೆ ಇಳಿಸಲಾಗುವದು. (೮) ಎಲ್ಲರಿಗೂ ಪುಕ್ಕಟೆ ಪ್ರಾಥಮಿಕ ಶಿಕ್ಷಣವು ಕೊಡಲ್ಪಡುವದು. (೯) ಎಲ್ಲಕ್ಕೂ ಹೆಚ್ಚಿನ ಸರಕಾರೀ ಸಂಬಳವು ೫೦೦ ರೂಪಾಯಿಗೆ ಮಿಕ್ಕಿರಲಾರದು.

**ಕಾಂಗ್ರೆಸ ಸಭಾಸದರ**.:— ಕಾಂಗ್ರೆಸಿನ ತತ್ವವನ್ನು ಒಪ್ಪಿಕೊಂಡು ನಾಲ್ಕಾಣೆ ಸಲ್ಲಿಸುವವರು ಕಾಂಗ್ರೆಸಿನ ಸಭಾಸದರೆಂದು ನಾಗಪೂರದ ಅಧಿವೇಶನದಲ್ಲಿ ಗೊತ್ತಾಯಿತು. ಸದ್ಯಕ್ಕೆ ೫೦೦ ಸಭಾಸದರು ಒಬ್ಬೊಬ್ಬ ಪ್ರತಿನಿಧಿಯನ್ನು ಆರಿಸಬೇಕೆಂದು ಗೊತ್ತಾಗಿದೆ.

**ಕಾಂಗ್ರೆಸಿನ ಪ್ರತಿನಿಧಿಗಳು:—** ಮೊದಲು ಸಾರ್ವಜನಿಕ ಸಂಘಗಳೂ ಸಾರ್ವಜನಿಕ ಸಭೆಗಳೂ ಪ್ರತಿನಿಧಿಯನ್ನು ಆರಿಸುತ್ತಿದ್ದರು. ಪ್ರತಿನಿಧಿಗಳ ಸಂಖ್ಯೆಗೆ ಮರ್ಯಾದೆಯೂ ಇರಲಿಲ್ಲ. ನಾಗಪೂರ ಕಾಂಗ್ರೆಸ್ಸಿನಲ್ಲಿ ಪ್ರತಿನಿಧಿಗಳು ೬೦೦೦ ದಷ್ಟಿರಬೇಕೆಂದೂ ಅವರನ್ನು ಪ್ರಾಂತಿಕ ಕಾಂಗ್ರೆಸ ಕಮೀಟಿಯವರೆ ಆರಿಸಬೇಕೆಂದೂ ಗೊತ್ತಾಯಿತು. ಮುಂಬಯಿಯಲ್ಲಿ ಪಾಸಾದ ಘಟನೆಯಂತೆ ೫೦೦ ಸಭಾಸದರಿಗೆ ಒಬ್ಬರಂತೆ ಪ್ರತಿನಿಧಿಗಳು ಆರಿಸಲ್ಪಡಬೇಕೆಂದು ಗೊತ್ತಾಯಿತು.

**ಪ್ರಾಂತಿಕ ಕಾಂಗ್ರೆಸು ಕಮೀಟಿಗಳು:—** ಮೊದಲಿಗೆ ಪ್ರಾಂತಿಕ ಕಾಂಗ್ರೆಸು ಕಮೀಟಿಗಳಿರಲಿಲ್ಲ. ಕಲಕತ್ತಾ, ಮುಂಬಯಿ, ಅಲಹಾಬಾದ, ಲಖನೌ. ಮದ್ರಾಸ ಮುಂತಾದ ದೊಡ್ಡ ಪಟ್ಟಣಗಳಲ್ಲಿ ಸ್ಥಳಿಕ ಕಾಂಗ್ರೆಸು ಕಮೀಟಿಗಳಿದ್ದವು. ಕಲಕತ್ತೆಯ ಅಧಿವೇಶನದಲ್ಲಿ (೧೯೦೬) ಪ್ರಾಂತಕ್ಕೊಂದು ಪ್ರಾಂತಿಕ ಕಾಂಗ್ರೆಸ ಕಮೀಟಿಯು ಇರಬೇಕೆಂದು ಗೊತ್ತಾಯಿತು. ಸದ್ಯಕ್ಕೆ ಕಾಂಗ್ರೆಸಿನ ಪ್ರತಿನಿಧಿಗಳೆ ಪ್ರಾಂತಿಕ ಕಾಂಗ್ರೆಸ ಕಮೀಟಿಯ ಸಭಾಸದರಾಗುವರು.

**ಆಲ ಇಂಡಿಯಾ ಕಾಂಗ್ರೆಸ ಕಮೀಟಿ:—** ಮೊದಲಿಗೆ ಕಾಂಗ್ರೆಸ ಅಧ್ಯಕ್ಷನಿಗೆ ಸಲಹೆ ಕೊಡಲು ಕೇವಲ ೨೨ ಜನರದೊಂದು ಕೌನ್ಸಿಲು ಇರುತ್ತಿತ್ತು. ಆದರೆ ಮುಂದೆ ಆಲ ಇಂಡಿಯಾ ಕಾಂಗ್ರೆಸ ಕಮೀಟಿಯೆಂಬ ಸಂಸ್ಥೆಯು ಏರ್ಪಡಿಸಲ್ಪಟ್ಟಿತು. ಸದ್ಯಕ್ಕೆ ಪ್ರತಿಯೊಂದು ಪ್ರಾಂತದ ಪ್ರತಿನಿಧಿಗಳು ೧–೧೨ ರಷ್ಟು ಸಭಾಸದರನ್ನು ಆಲ ಇಂಡಿಯಾ ಕಾಂಗ್ರೆಸ ಕಮೀಟಿಗೆ ಆರಿಸಿಕಳಿಸಬೇಕೆಂದು ಗೊತ್ತಾಗಿದೆ. ಕಾಂಗ್ರೆಸಿನೆದುರಿಗೆ ಬರುವ ವಿಷಯಗಳನ್ನು ಅವರೇ ಗೊತ್ತುಪಡಿಸಬೇಕು.

**ವರ್ಕಿಂಗ ಕಮೀಟಿ:—**ದೇಶದಲ್ಲಿಯ ರಾಷ್ಟ್ರೀಯ ಕಾರ್ಯವನ್ನು ನೆರವೇರಿಸಲು ೧೫ ಜನರದೊಂದು ಮಂಡಲವಿರಬೇಕೆಂದು ನಾಗಪೂರದಲ್ಲಿ ಗೊತ್ತಾಯಿತು. ಇದಕ್ಕೆ ವರ್ಕಿಂಗ ಕಮೀಟಿ ಎಂದು ಹೆಸರು.

**ಅಧ್ಯಕ್ಷ:—** ಮೊದಲು ಸ್ವಾಗತಸಮೀತಿಯವರು ಪ್ರಾಂತಗಳ ಸಲಹೆಗಳನ್ನು ತೆಗೆದುಕೊಂಡು ಅಧ್ಯಕ್ಷನನ್ನು ಆರಿಸಬೇಕೆಂದಿತ್ತು.

ಮುಂಬಯಿಯಲ್ಲಿ (೧೯೩೪) ಗೊತ್ತಾದ ಘಟನೆಯಂತೆ ಕಾಂಗ್ರೆಸಿನ ಪ್ರತಿನಿಧಿಗಳೇ ಅಧ್ಯಕ್ಷನನ್ನು ಆರಿಸಬೇಕೆಂದು ಗೊತ್ತಾಗಿದೆ. ಕಾಂಗ್ರೆಸಿನ ಯಾವುದೆ ಕಮಿಟಿಗೆ ಆರಿಸಲ್ಪಡತಕ್ಕವರು ಕಾಂಗ್ರೆಸಿನಿಂದ ನಿರ್ದಿಷ್ಟವಾದ ಯಾವುದೊಂದು ಶಾರೀರಿಕ ಕೆಲಸವನ್ನು ಮಾಡಲೆ ಬೇಕೆಂದು ನಿರ್ಬಂಧವಿದೆ.

**ಅಖಿಲ ಭಾರತ ಚರಕಾ ಸಂಘ:**–೧೯೨೦ರ ಅಸಹಕಾರದ ಆಂದೋಲನವಾದ ನಂತರ ಖಾದೀ ಕಾರ್ಯವನ್ನು ನೆರವೇರಿಸಲು 'ಖಾದೀ ಮಂಡಲವೊಂದು" ನಿರ್ಮಾಣವಾಯಿತು. ಆದರೆ ಮುಂದೆ ಅದರ ಕಾರ್ಯವು ವ್ಯವಸ್ಥಿತವಾಗಿ ನಡೆಯಬೇಕೆಂದು ಮಹಾತ್ಮರು ಅಖಿಲಭಾರತ ಚರಕಾ ಸಂಘವನ್ನೇರ್ಪಡಿಸಿದರು. ಅದರ ಶಾಖೆಗಳೂ, ಉತ್ಪತ್ತಿಕೇಂದ್ರಗಳೂ, ಅಂಗಡಿಗಳೂ ಪ್ರತಿಯೊಂದು ಪ್ರಾಂತದಲ್ಲಿಯೂ ಇವೆ. ಇದುವರೆಗೆ ೨ ಕೋಟಿ ರೂಪಾಯಿಗಿಂತ ಹೆಚ್ಚು ಬೆಲೆಯ ಖಾದಿಯು ಮಾರಾಟವಾಗಿ ಹೋಗಿದೆ.

**ಹಿಂದುಸ್ತಾನಿ ಸೇವಾದಲ:**— ರಾಷ್ಟ್ರಕಾರ್ಯವು ಮುಂದರಿಯಬೇಕಾದರೆ ರಾಷ್ಟ್ರೀಯ ಸ್ವಯಂಸೇವಕರ ಸಂಘವೊಂದು ಇರಬೇಕೆಂದು ಮನಗಂಡು ಡಾ। ಹರಡೀಕರರು ೧೯೨೩ರಲ್ಲಿ ಹಿಂದುಸ್ತಾನಿ ಸೇವಾದಲವೆಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅದರ ಪರವಾಗಿ ದೇಶದಲ್ಲೆಲ್ಲ ಶಿಬಿರಗಳು ಏರ್ಪಡಿಸಲ್ಪಟ್ಟು ಸಾವಿರಾರು ಸ್ವಯಂಸೇವಕರಿಗೆ ಶಿಕ್ಷಣವು ಕೊಡಲಾಯಿತು. ೧೯೩೧ರಲ್ಲಿ ಸೇವಾದಲವು ಕಾಂಗ್ರೆಸಿನ ಅಂಗವೆ ಆಯಿತು. ಸದ್ಯಕ್ಕೆ ಅದು ಬೇಕಾಯದೇಶೀರ ಸಂಘವೆಂದು ಸರಕಾರದವರು ಗೊತ್ತುಮಾಡಿದ್ದರಿಂದ ಅದರ ಕಾರ್ಯವು ನಿಂತು ಹೋಗಿದೆ.

**ಹರಿಜನ ಸೇವಾಸಂಘ:**— ಹರಿಜನರ ಉದ್ಧಾರಕ್ಕಾಗಿ ಮಹಾತ್ಮರ ನೇತೃತ್ವದಲ್ಲಿ ೧೯೩೩ರಲ್ಲಿ ಈ ಸಂಘವು ಏರ್ಪಡಿಸಲ್ಪಟ್ಟಿತು. ಈ ಸಂಘದ ಶಾಖೆಗಳು ದೇಶದ ಎಲ್ಲ ಪ್ರಾಂತಗಳಲ್ಲಿಯೂ ಇವೆ. ಈ ಸಂಘದ ಪರವಾಗಿ ಹರಿಜನರ ಶಾಲೆಗಳೂ ವಸತಿಗೃಹಗಳೂ ಏರ್ಪಡಿಸಲ್ಪಟ್ಟಿವೆ. ನೂರಾರು ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿಗಳೂ ಏರ್ಪಡಿಸಲ್ಪಟ್ಟಿವೆ.

**— ವಂದೇಮಾತರಮ್ —**